# ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಅಧ್ಯಯನ

ಅರ್ಥಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪರಿಷ್ಕೃತ ಮಹಾಪ್ರಬಂಧ

ಸಂಶೋಧಕರು
ಪ್ರವೀಣ್ ಕುಮಾರ್. ಹೆಚ್.ಎಲ್

ಮಾರ್ಗದರ್ಶಕರು
ಡಾ. ಜನಾರ್ದನ
ಸಹಾಯಕ ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ




ಸಮಾಜ ವಿಜ್ಞಾನಗಳ ನಿಕಾಯ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೮

# ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಅಧ್ಯಯನ

ಅರ್ಥಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪರಿಷ್ಕೃತ ಮಹಾಪ್ರಬಂಧ



ಸಂಶೋಧಕರು

**ಪ್ರವೀಣ್ ಕುಮಾರ್. ಹೆಚ್.ಎಲ್**

ಮಾರ್ಗದರ್ಶಕರು

**ಡಾ. ಜನಾರ್ದನ**

ಸಹಾಯಕ ಪ್ರಾಧ್ಯಾಪಕರು




ಸಮಾಜ ವಿಜ್ಞಾನಗಳ ನಿಕಾಯ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೮

## ಪ್ರಮಾಣ ಪತ್ರ

**ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಅರ್ಥಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಅಭಿವೃದ್ಧಿ ಅಧ್ಯಯನ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ **ಡಾ. ಜನಾರ್ದನ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಇಲ್ಲವೇ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 14-08-2018
ಸ್ಥಳ : ವಿದ್ಯಾರಣ್ಯ

**(ಪ್ರವೀಣ್ ಕುಮಾರ್. ಹೆಚ್.ಎಲ್)**
ಸಂಶೋಧಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಪ್ರವೀಣ್ ಕುಮಾರ್. ಹೆಚ್.ಎಲ್** ಅವರು **ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಥಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

14.08.18

ದಿನಾಂಕ : 14.08.2018
ಸ್ಥಳ : ವಿದ್ಯಾರಣ್ಯ

(ಡಾ. ಜನಾರ್ದನ)
ಸಹಾಯಕ ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿಶಿಷ್ಟಗಳು

## ಪರಿವಿಡಿ

ಅಧ್ಯಾಯ ಒಂದು

# ಪ್ರಸ್ತಾವನೆ

ಪೀಠಿಕೆ

ಅಧ್ಯಯನ ವಿಷಯವಸ್ತು

ಈ ಅಧ್ಯಯನದ ಅಗತ್ಯತೆ

ದಲಿತ ಮಾನವ ಅಭಿವೃದ್ದಿ ಮತ್ತು ದುಸ್ಥಿತಿ ಅಧ್ಯಯನ

ಅಧ್ಯಯನಗಳ ಸಮೀಕ್ಷೆ

ಸಮಸ್ಯೀಕರಣ ಅಥವಾ ಸಂಶೋಧನ ಪ್ರಶ್ನೆಗಳು

ಅಧ್ಯಯನದ ಉದ್ದೇಶಗಳು

ಅಧ್ಯಯನದ ವೈಯುಕ್ತಿಕ ನೆಲೆಗಳು

ಅಧ್ಯಯನ ವಿಧಾನ

ಅಧ್ಯಯನದ ಮಹತ್ವ

ಈ ಅಧ್ಯಯನದಲ್ಲಿ ಏನನ್ನು ಹೇಳಲಾಗುತ್ತದೆ?

ಅಧ್ಯಯನದ ಅಧ್ಯಾಯಗಳ ವಿನ್ಯಾಸ(ಸ್ವರೂಪ)

ಅಧ್ಯಾಯ ಒಂದು

# ಪ್ರಸ್ತಾವನೆ

### ೧.೧. ಪೀಠಿಕೆ

ಅಭಿವೃದ್ಧಿ ಅನ್ನುವುದು ಜನರಿಗೆ, ಜನರ ಬದುಕಿಗೆ ಸಂಬಂಧಿಸಿದ ಸಂಗತಿಯಾಗಿದೆ. ಅಮಾರ್ತ್ಯಸೇನ್ ಮತ್ತೆ ಮತ್ತೆ ಹೇಳುತ್ತಿರುವಂತೆ ಅಭಿವೃದ್ಧಿ ಅನ್ನುವುದು ಜನರ ಬದುಕಿನ ಸಮೃದ್ಧತೆಯ ವರ್ಧನೆಯೇ ವಿನಃ ಅದು ಆರ್ಥಿಕ ಸಮೃದ್ಧತೆಯ ವರ್ಧನೆಯ ಸಂಗತಿಯಲ್ಲ. ಮೆಹಬೂಬ್ ಉಲ್ ಹಕ್ ೧೯೯೦ರಲ್ಲಿ ಯು ಎನ್ ಡಿ ಪಿ ಯ ಮೊದಲ ಮಾನವ ಅಭಿವೃದ್ಧಿ ವರದಿಯಲ್ಲಿ ಎಚ್ಚರಿಸಿರುವಂತೆ 'ವರಮಾನವೇ ಜನರ ಬದುಕಿನ ಮೊತ್ತವಲ್ಲ'. ಆದರೆ ಇಂದಿಗೂ ಅಭಿವೃದ್ಧಿಯನ್ನು ವರಮಾನದ ಏರಿಕೆಗೆ, ಬಂಡವಾಳ ಹೂಡಿಕೆಗೆ, ಉತ್ಪಾದನೆಯಲ್ಲಾಗುವ ವಿಸ್ತರಣೆಗೆ ಸಂವಾದಿಯಾಗಿ ಪರಿಭಾವಿಸಿಕೊಳ್ಳುವ ಕ್ರಮವಿದೆ. ಉದಾಹರಣೆಗೆ ಭಾರತದಲ್ಲಿ ಜಿ ಡಿ ಪಿ ಯ ಏರಿಕೆಯನ್ನು ಅಭಿವೃದ್ಧಿಗೆ ಸಂವಾದಿಯಾಗಿ ಬಳಸಲಾಗುತ್ತಿದೆ. ಅಭಿವೃದ್ಧಿಯನ್ನು ವರಮಾನದ ಏರಿಕೆಯನ್ನು ಆಧರಿಸಿಯೇ ಮಾಪನ ಮಾಡಲಾಗುತ್ತದೆ. ಬಂಡವಾಳ ಹೂಡಿಕೆಯನ್ನು ಅಭಿವೃದ್ಧಿಯ ಅಡಿಪಾಯವಾಗಿ ಪರಿಗಣಿಸಲಾಗಿದೆ. ವರಮಾನದಲ್ಲಿ ಏರಿಕೆಯಾದರೆ ಅದು ಜನರ ಬದುಕನ್ನು ತನ್ನಷ್ಟಕ್ಕೆ ತಾನೇ ಉತ್ತಮಪಡಿಸುತ್ತದೆ ಎಂಬುದು ಇಲ್ಲಿನ ಗೃಹಿತವಾಗಿದೆ.

ವರಮಾನದಲ್ಲಿ ಏರಿಕೆಯಾದರೆ ಅದರ ಫಲಗಳು ಸಾವಕಾಶವಾಗಿ ಸಮಾಜದ ಎಲ್ಲ ವರ್ಗಗಳಿಗೂ ಹರಿದು ಬರುತ್ತದೆ ಎಂಬುದು ಇಲ್ಲಿನ ನಂಬಿಕೆ. ಇದನ್ನು "ಟ್ರಿಕಲ್ ಡೌನ್ ಎಕನಾಮಿಕ್ಸ್" ಎಂದು ಕರೆಯಲಾಗುತ್ತದೆ. ವರಮಾನದಲ್ಲಿ ಏರಿಕೆಯಾಗಿಬಿಟ್ಟರೆ ಅದರ ಫಲಗಳು ಸಮಾಜದ ವಿವಿಧ ಸಮುದಾಯಗಳಿಗೆ, ಮಹಿಳೆಯರಿಗೆ, ದುರ್ಬಲ ವರ್ಗಗಳಿಗೆ ಕಾಲಕ್ರಮೇಣ ಒದಗಿ ಬರುತ್ತದೆ ಎಂಬ ನಂಬಿಕೆಯ ಮೇಲೆ ಅಭಿವೃದ್ಧಿಯನ್ನು ನಿರ್ವಚಿಸುತ್ತಾ ಬರಲಾಗಿದೆ.

ವರಮಾನದಲ್ಲಿ ಏರಿಕೆಯಾಗಿಬಿಟ್ಟರೆ ಅದರ ಫಲಗಳು ಸಮಾಜದಲ್ಲಿ ಎಲ್ಲರಿಗೂ ಒದಗಿ ಬರುತ್ತದೆ ಎಂಬ ಪ್ರಣಾಳಿಕೆಯನ್ನು ಅಮಾರ್ತ್ಯಸೇನ್ ಮತ್ತು ಮೆಹಬೂಬ್ ಉಲ್ ಹಕ್ ಅವರು

ಪ್ರಶ್ನಿಸಿದರು. ಅಸಮಾನತೆಯಿಂದ ಕೂಡಿರುವ ಸಮಾಜದಲ್ಲಿ ಏರಿಕೆಯಾದ ವರಮಾನ, ಉತ್ಪಾದನೆ ತಮ್ಮಷ್ಟಕ್ಕೆ ತಾವು ಸಮಾಜದ ಎಲ್ಲ ವರ್ಗಗಳಿಗೂ, ಎಲ್ಲ ಲಿಂಗಗಳಿಗೂ, ಎಲ್ಲ ಪ್ರದೇಶಗಳಿಗೂ ಸಮಾನವಾಗಿ ಒದಗಿ ಬರುವುದಿಲ್ಲ. ಯಾವುದನ್ನು ಟ್ರಿಕಲ್ ಡೌನ್ ಎಕನಾಮಿಕ್ಸ್ ಎಂದು ಕರೆಯುತ್ತಿದ್ದೇವೆಯೋ ಅದು ಯಾವ ಆರ್ಥಿಕತೆಯಲ್ಲಿಯೂ ಯಶಸ್ವಿಯಾಗಿಲ್ಲ. ಏಕೆಂದರೆ ಏರಿಕೆಯಾದ ವರಮಾನದ ಮೇಲೆ, ಏರಿಕೆಯಾದ ಉತ್ಪಾದನೆಯ ಮೇಲೆ, ವಿಸ್ತರಣೆಗೊಂಡ ಬಂಡವಾಳ ಹೂಡಿಕೆಯ ಮೇಲೆ ಹಕ್ಕನ್ನು ಸ್ಥಾಪಿಸಲು ಜನರಿಗೆ ಧಾರಣ ಸಾಮರ್ಥ್ಯವಿರಬೇಕು. ಈ ಧಾರಣ ಸಾಮರ್ಥ್ಯ ಸಮಾಜದ ಎಲ್ಲ ವರ್ಗಗಳಲ್ಲಿಯೂ ಸಮಾನವಾಗಿರುವುದಿಲ್ಲ.

ಧಾರಣ ಸಾಮರ್ಥ್ಯವನ್ನು ನಿರ್ಧರಿಸುವ ಸಂಗತಿಗಳೆಂದರೆ ಸಾಕ್ಷರತೆ, ಶಿಕ್ಷಣ, ಆರೋಗ್ಯ, ಆಹಾರ, ಘನತೆಯಿಂದ ಕೂಡಿದ ಬದುಕು ಮುಂತಾದವು. ಡಾ. ಬಿ. ಆರ್. ಅಂಬೇಡ್ಕರ್ ಅವರು ಮತ್ತೆ ಮತ್ತೆ ತಮ್ಮ ಬರಹಗಳಲ್ಲಿ ಘನತೆಯಿಂದ ಕೂಡಿರುವ ಬದುಕಿನ ಬಗ್ಗೆ ನಮ್ಮ ಗಮನ ಸೆಳೆಯುತ್ತಾರೆ. ಯಾವುದನ್ನು ಧಾರಣ ಸಾಮರ್ಥ್ಯ ಎಂದು ಕರೆಯಲಾಗಿದೆಯೋ ಅದು ದಲಿತರು ಮತ್ತು ದಲಿತೇತರರ ನಡುವೆ ಸಮಾನವಾಗಿರುವುದಿಲ್ಲ. ಸಾಮಾನ್ಯವಾಗಿ ದಲಿತೇತರರ ಧಾರಣ ಸಾಮರ್ಥ್ಯವು ದಲಿತರ ಧಾರಣ ಸಾಮರ್ಥ್ಯಕ್ಕಿಂತ ಉನ್ನತವಾಗಿರುತ್ತದೆ. ಏಕೆಂದರೆ ಅವರ ಸಾಕ್ಷರತೆಯ ಪ್ರಮಾಣ, ಶಿಕ್ಷಣದ ಮಟ್ಟ, ಭೂಮಿಯ ಮಾಲೀಕತ್ವ, ಬಂಡವಾಳದ ಮಾಲೀಕತ್ವ, ಸಾಮಾಜಿಕ ಸ್ಥಾನಮಾನ ಉನ್ನತವಾಗಿರುತ್ತದೆ. ಈ ಕಾರಣದಿಂದ ಏರಿಕೆಯಾದ ವರಮಾನದ ಮೇಲೆ ತಮ್ಮ ಹಕ್ಕನ್ನು ಸ್ಥಾಪಿಸುವುದು ದಲಿತೇತರರಿಗೆ ಸಾಧ್ಯವಾಗುತ್ತದೆ. ಆದರೆ ದಲಿತರಿಗೆ ಇದು ಸಾಧ್ಯವಾಗುವುದಿಲ್ಲ. ಇದರಿಂದಾಗಿ ದಲಿತರು ಸಹಜವಾಗಿ ಅಭಿವೃದ್ಧಿಯ ಫಲಗಳಿಂದ ವಂಚಿತರಾಗಿ ಬಿಡುತ್ತಾರೆ. ಸಾಮಾಜಿಕವಾಗಿ ಪ್ರತ್ಯೇಕತೆಯನ್ನು ಅನುಭವಿಸುತ್ತಿರುವ ದಲಿತರಿಗೆ ಘನತೆಯಿಂದ ಕೂಡಿರುವ ಬದುಕನ್ನು ಸಾಧಿಸುವುದು ಸಾಧ್ಯವಾಗುವುದಿಲ್ಲ.

ಅಭಿವೃದ್ಧಿಯ ಫಲಗಳು ಸಾಮಾಜಿಕ ಸ್ತರಶ್ರೇಣಿಗೆ ಅನುಗುಣವಾಗಿ ಒದಗಿ ಬರುತ್ತವೆ. ಸಮಾಜದಲ್ಲಿ ಉನ್ನತ ಶ್ರೇಣಿಯಲ್ಲಿರುವ ದಲಿತೇತರರಿಗೆ ವರಮಾನದಲ್ಲಿ ಹೆಚ್ಚಿನ ಪಾಲು ದೊರೆಯುತ್ತದೆ. ನಮ್ಮ ಸಾಮಾಜಿಕ ರಚನೆಯನ್ನು "ಪಿರಮಿಡ್ ರಚನೆ" ಹೋಲಿಸಬಹುದು. ಪಿರಮಿಡ್‌ನಲ್ಲಿ ತುದಿಯು ಸಪೂರವಾಗಿರುತ್ತದೆ. ಆದರೆ ತಳಭಾಗ ವಿಸ್ತೃತವಾಗಿರುತ್ತದೆ. ಪಿರಿಮಿಡ್‌ನ ಉನ್ನತ ಶಿಖರದಲ್ಲಿರುವವರಿಗೆ ಅಭಿವೃದ್ಧಿಯ ಹೆಚ್ಚಿನ ಪಾಲು ಹೊಂದಿರುತ್ತಾರೆ. ಪಿರಮಿಡ್‌ನ ಉನ್ನತ ಶಿಖರದಲ್ಲಿರುವ ಜನರ ಸಂಖ್ಯೆ ಕಡಿಮೆ. ಆದರೆ ಅದರ ತಳಭಾಗದಲ್ಲಿರುವ ಜನರ ಸಂಖ್ಯೆ ಅಧಿಕ. ಸಮಾಜದಲ್ಲಿನ ವರಮಾನದಲ್ಲಿ ಹೆಚ್ಚಿನ ಭಾಗವು ಪಿರಮಿಡ್‌ನ ತುದಿಯಲ್ಲಿರುವ ಜನರ ಪಾಲಾದರೆ ಅದರ ಅತಿ ಕಡಿಮೆ ಭಾಗ ಪಿರಮಿಡ್‌ನ ತಳದಲ್ಲಿರುವ ಜನವರ್ಗದ ಪಾಲಾಗುತ್ತದೆ. ಈ ಹಿನ್ನೆಲೆ ಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕದಲ್ಲಿ ಮಾನವ ಅಭಿವೃದ್ಧಿಯನ್ನು ಕುರಿತಂತೆ ವಿಶ್ಲೇಷಣೆ ನಡೆಸಲಾಗಿದೆ. ಇಲ್ಲಿ ಪ್ರಧಾನ ಅವಧಾರಣೆ ದಲಿತರ ಮಾನವ ಅಭಿವೃದ್ಧಿಯ ಮೇಲಿರುತ್ತದೆ.

## ೧.೨. ಅಧ್ಯಯನ ವಿಷಯವಸ್ತು

ಈ ಅಧ್ಯಯನದ ವಿಷಯವಸ್ತು 'ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ'. ಜಗತ್ತಿನಲ್ಲಿ ಮಾನವ ಅಭಿವೃದ್ಧಿಯನ್ನು ಕುರಿತಂತೆ ವ್ಯಾಪಕ ಅಧ್ಯಯನಗಳು ನಡೆಯುತ್ತಿವೆ. ಇದನ್ನು ಸಾಂಪ್ರದಾಯಿಕ ವರಮಾನ ಕೇಂದ್ರಿತ ಅಭಿವೃದ್ಧಿ ಸಿದ್ಧಾಂತಕ್ಕೆ ಪ್ರತಿಯಾಗಿ ರಚಿಸಲಾಗಿದೆ ಎಂದು ಅನೇಕರು ಭಾವಿಸಿದ್ದಾರೆ. ಆದರೆ ಅಮಾರ್ತ್ಯಸೇನ್ ಪ್ರಕಾರ ಮಾನವ ಅಭಿವೃದ್ಧಿ ಪ್ರಣಾಳಿಕೆಯು ಸಾಂಪ್ರದಾಯಿಕ ವರಮಾನ ಕೇಂದ್ರಿತ ಆರ್ಥಿಕ ಅಭಿವೃದ್ಧಿ ಸಿದ್ಧಾಂತಕ್ಕೆ ಪರ್ಯಾಯವಾದುದಲ್ಲ. ಇದು ವರಮಾನ ಕೇಂದ್ರಿತ ಆರ್ಥಿಕ ಅಭಿವೃದ್ಧಿ ಸಿದ್ಧಾಂತಕ್ಕೆ ಪೂರಕವಾದ, ಮುಂದುವರಿದ ಸಿದ್ಧಾಂತವಾಗಿದೆ. ಇಲ್ಲಿ ಅಭಿವೃದ್ಧಿಯ ವಿವಿಧ ಆಯಾಮಗಳಿಗೆ ಮಹತ್ವ ನೀಡಲಾಗುತ್ತದೆ. ಸಾಂಪ್ರದಾಯಿಕ ಆರ್ಥಿಕ ಸಿದ್ಧಾಂತದಲ್ಲಿ ಅಭಿವೃದ್ಧಿ ಒಂದೇ ಒಂದು ಆದಾಯಕ್ಕೆ(ವರಮಾನ ವರ್ಧನೆ) ಮಹತ್ವ ನೀಡಲಾಗುತ್ತದೆ. ಆದರೆ ಮಾನವ ಅಭಿವೃದ್ಧಿ ಪ್ರಣಾಳಿಕೆಯಲ್ಲಿ ಅಭಿವೃದ್ಧಿಯ ಸಾಮಾಜಿಕ, ಪರಿಸರ ಸಂಬಂಧಿ, ಲಿಂಗ ಸಂಬಂಧಿ, ತಳಸ್ತರದ ಸಮುದಾಯ ಮುಂತಾದ ಸಂಗತಿಗಳಿಗೆ ಮಹತ್ವ ನೀಡಲಾಗುತ್ತದೆ. ಮಹಿಳೆಯರ ಸ್ವಾಯತ್ತತೆಗೆ ಸದರಿ ಸಿದ್ಧಾಂತದಲ್ಲಿ ಪ್ರಾಥಮಿಕ ಸ್ಥಾನ ನೀಡಲಾಗಿದೆ. ೧೯೯೦ರಲ್ಲಿ ಯು.ಎನ್.ಡಿ.ಪಿ ಯವರ ಮಾನವ ಅಭಿವೃದ್ಧಿ ಹೆಚ್ಚು ಮನ್ನಣೆ ಬರುವ ಪೂರ್ವದಲ್ಲಿ ವರಮಾನದ ಏರಿಕೆಯನ್ನು ಅಭಿವೃದ್ಧಿ ಎಂದು ಪರಿಭಾವಿಸಲಾಗುತ್ತಿತ್ತು. ಇದನ್ನೇ ಅಭಿವೃದ್ಧಿಯಲ್ಲ ಎಂದು ಅಮರ್ತ್ಯಸೇನ್ ಮತ್ತು ಮೆಹಬೂಬ್–ಉಲ್–ಹಕ್ ಪ್ರತಿಪಾದಿಸುತ್ತಿದ್ದಾರೆ. ಇದುವರೆಗೂ ಜಿ.ಡಿ.ಪಿ ಅಥವಾ ಜಿ.ಎನ್.ಪಿಯನ್ನು ಅಭಿವೃದ್ಧಿ ಮಾಪನವಾಗಿ ಬಳಸಲಾಗುತ್ತಿತ್ತು. ಕೇವಲ ವರಮಾನ ಆಧಾರವಾಗಿ ಮಾತ್ರ ಅಭಿವೃದ್ಧಿ ಮಾಪನ ಮಾಡಲಾಗುತ್ತಿತ್ತು. ಉಳಿದ ಅಭಿವೃದ್ಧಿ ಪ್ರಗತಿಗಳನ್ನು ಅಳೆಯುವ ಮಾಪನ ಅಥವಾ ಮಾನದಂಡ ಇರಲಿಲ್ಲ. ಅದಕ್ಕೆ ಯು.ಎನ್.ಡಿ.ಪಿಯವರು ಜಿ.ಎನ್.ಪಿ.ಗೆ ಪರ್ಯಾಯವಾಗಿ ಸಂಯುಕ್ತ ಸೂಚಿಯನ್ನು ರೂಪಿಸಿದರು.

ಜಿ.ಎನ್.ಪಿ. ಅಥವಾ ಜಿ.ಡಿ.ಪಿ ಯು ವರಮಾನ ಒಂದೇ ಒಂದು ಮಾನದಂಡ ಇಟ್ಟುಕೊಂಡು ಅಭಿವೃದ್ಧಿ ಅಳೆಯಲಾಗುತ್ತಿತ್ತು. ಅದಕ್ಕೆ ಪ್ರತಿಯಾಗಿ ಯು.ಎನ್.ಡಿ.ಪಿ ರಚಿಸಿದ ಮಾಪನ ಹೆಚ್.ಡಿ.ಐ. (ಹ್ಯೂಮನ್ ಡೆವಲಪ್‌ಮೆಂಟ್ ಇನ್‌ಡೆಕ್ಸ್) ಮಾನವ ಅಭಿವೃದ್ಧಿ ಅನುಸೂಚಿಯು ಮೂರು ಮಾನದಂಡ ಇಟ್ಟುಕೊಂಡು ಸಂಯುಕ್ತ ಮಾಪನವಾದ ಜೀವನಾಯುಷ್ಯ(ಆರೋಗ್ಯ), ಶೈಕ್ಷಣಿಕ ಸಾಧನೆ, ವರಮಾನ ಇವುಗಳನ್ನು ಸೇರಿಸಿ ಅಭಿವೃದ್ಧಿ ಮಾಪನ ಮಾಡುವ ಕ್ರಮವನ್ನು ಕಂಡುಕೊಳ್ಳಲಾಯಿತು.

ಹಾಗಾಗಿಯೇ ಇದಕ್ಕೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಅಭಿವೃದ್ಧಿ ಸ್ವರೂಪ ಯಾವ ರೀತಿ ಆಗಿದೆ ಎಂಬುದನ್ನು ತಿಳಿಯುವುದು ಬಹಳ ಅಗತ್ಯವಾಗಿದೆ. ಇಲ್ಲಿಯವರೆಗೂ ಆರ್ಥಿಕ ಅಭಿವೃದ್ಧಿ ಸಿದ್ಧಾಂತಗಳೆಲ್ಲವೂ ಸಮಾಜದ ಬೇರೆ ಬೇರೆ ಸಂಗತಿ ಮತ್ತು ವರ್ಗಗಳ ಸ್ಥಿತಿಗತಿಗಳೇನು ಹೇಳುತ್ತಿರಲಿಲ್ಲ. ಅವೆಲ್ಲವೂ ಅಖಂಡವಾದ ಸಿದ್ಧಾಂತಗಳಾಗಿದ್ದವು. ಇಡೀ ದೇಶವನ್ನೇ ಒಂದು ಗುಂಪು ಮಾಡಿಕೊಂಡು

ಚರ್ಚಿಸಲಾಗುತ್ತಿತ್ತು. ಇದರಲ್ಲಿ ಸಮಾಜದಲ್ಲಿ ಬೇರೆ ಬೇರೆ ಏಣಿ ಶ್ರೇಣಿಗಳು ಇದ್ದೇ ಇದ್ದವು. ಕಡಿಮೆ ವರಮಾನದವರು, ಮಧ್ಯಮ ವರಮಾನದವರು, ವರಮಾನವೇ ಇಲ್ಲದೇ ಇರುವವರು ಹೀಗೆ ಸಮಾಜದ ಮತ್ತು ದೇಶದಲ್ಲಿ ಶ್ರೇಣೀಕೃತವಾಗಿದ್ದು ಕಂಡು ಬರುತ್ತಿದ್ದವು.

ಆದರೆ ಮಾನವ ಅಭಿವೃದ್ಧಿ ಪ್ರಣಾಳಿಕೆಯಲ್ಲಿ ಸಮಾಜದ ವಿವಿಧ ವರ್ಗದವರಲ್ಲಿ ಇರುವಂಥ ಅಭಿವೃದ್ಧಿ ಗುರುತಿಸಲಿಕ್ಕೆ ಸಹಾಯ ಮಾಡಿಕೊಟ್ಟಿದೆ. ಮಹಿಳೆಗೆ ಬಡವರಿಗೆ ತಳಸಮುದಾಯಗಳಿಗೆ ಬುಡಕಟ್ಟು ಹೀಗೆ ಇಂಥಹವರ ಅಭಿವೃದ್ಧಿ ಸ್ಥಿತಿಗತಿಗಳನ್ನು ಗುರುತಿಸಲು ಸಾಧ್ಯವಾಗಿದೆ. ಬಹಳ ಮುಖ್ಯವಾಗಿ ಮಹಿಳೆಯ ಅಭಿವೃದ್ಧಿಯನ್ನು ಮಾಪನ ಮಾಡುವುದಕ್ಕೆ ಪ್ರಪ್ರಥಮವಾಗಿ ಯು.ಎನ್.ಡಿ.ಪಿ. ಸಹಾಯ ಮಾಡಿದೆ. ಹಳೆಯ ಅಭಿವೃದ್ಧಿ ಸಿದ್ದಾಂತಗಳಲ್ಲಿ ಈ ರೀತಿ ಸಂಗತಿಗಳನ್ನು ಮತ್ತು ಮಾಪನಗಳು ಇದ್ದಿರಲಿಲ್ಲ. ಆದರೆ ಅಮರ್ತ್ಯಸೇನ್ ಮತ್ತು ಮೆಹಬೂಬ್-ಉಲ್-ಹಕ್ ಮತ್ತೆ ಮತ್ತೆ ವ್ಯಕ್ತಪಡಿಸುವುದೇನೆಂದರೆ, ವರಮಾನ ವರ್ಧನೆಯ ಆರ್ಥಿಕಾಭಿವೃದ್ಧಿ, ಆರ್ಥಿಕ ಬೆಳವಣಿಗೆಯು ವರಮಾನದ ಏರಿಕೆ ಅಭಿವೃದ್ಧಿಯ ಸಾಧನವೇ ವಿನಃ ಅಭಿವೃದ್ಧಿಯಲ್ಲ.

ಅಭಿವೃದ್ಧಿ ಎಂದರೆ ಜನರು ಆರೋಗ್ಯದಿಂದ ಬದುಕಬೇಕು, ದೀರ್ಘಕಾಲ ಬದುಕಬೇಕು. ಹುಟ್ಟಿದ ಮಕ್ಕಳು ಆರೋಗ್ಯದಿಂದ ಬೆಳೆದು ಪ್ರೌಢರಾಗಿ ದೀರ್ಘಕಾಲ ಬದುಕಬೇಕು; ಜನರಿಗೆ ಓದು-ಬರಹ ಬರಬೇಕು, ಜನರಿಗೆ ದುಡಿಯಲು ಅವಕಾಶಗಳಿರಬೇಕು. ಇದು ಮಾನವಮುಖಿ ಅಭಿವೃದ್ಧಿ. ಒಟ್ಟಿನಲ್ಲಿ ವರಮಾನದ ಜೊತೆಯಲ್ಲಿ ಜನರ ಧಾರಣಾ ಸಾಮರ್ಥ್ಯವನ್ನು ನಿರ್ಧರಿಸುವ ಸಾಕ್ಷರತೆ, ಶಿಕ್ಷಣ, ಆರೋಗ್ಯ, ಲಿಂಗಸಮಾನತೆ, ಆಹಾರ ಭದ್ರತೆ, ಸ್ವಾಭಿಮಾನಗಳನ್ನು ವರ್ಧಿಸುವ ಪ್ರಕ್ರಿಯೆಯೇ ಮಾನವ ಅಭಿವೃದ್ಧಿ. ಈ ರೀತಿಯಾಗಿ ಸಮಾಜದಲ್ಲಿ ಲಭ್ಯವಿರುವ ಅವಕಾಶಗಳನ್ನು ತಮ್ಮದನ್ನಾಗಿ ಮಾಡಿಕೊಳ್ಳುವ ಸಾಮರ್ಥ್ಯವನ್ನು ವಿಸ್ತೃತಗೊಳಿಸುವುದನ್ನು ಅಭಿವೃದ್ಧಿಯೆಂದು ಕರೆಯಲಾಗುತ್ತದೆ. ಮಾನವ ಅಭಿವೃದ್ಧಿ ಪ್ರಣಾಳಿಕೆಯಲ್ಲಿ ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ನಾವು ಕೇಳಿಕೊಳ್ಳುವ ಪ್ರಶ್ನೆಗಳೇನೆಂದರೆ

೧. ಪ್ರಾದೇಶಿಕ ಅಸಮಾನತೆ ಅನಾಭಿವೃದ್ಧಿಯನ್ನು ಎತ್ತಿತೋರುತ್ತದೆಯೇ?

೨. ಸಾಮಾಜಿಕ ಮೌಲ್ಯತ್ಪೋದನ ಬಂಡವಾಳವು ರಾಜ್ಯ ಅಥವಾ ರಾಷ್ಟ್ರದ ಬಂಡವಾಳ ಅಭಿವೃದ್ಧಿಯೇ ವಿನಃ ಶೋಷಿತ ಬಡಜನರ ಅಭಿವೃದ್ಧಿಯಾಗುವುದಿಲ್ಲ.

೩. ಅಮರ್ತ್ಯಸೇನ್ ಹೇಳುವಂತೆ- "ಮನುಷ್ಯನಿಗಾಗಿ ಅಭಿವೃದ್ಧಿಯೇ ವಿನಃ ಅಭಿವೃದ್ಧಿಗಾಗಿ ಮನುಷ್ಯನಲ್ಲ"

೪. ಭೂರಹಿತ ಕೃಷಿ ಕೂಲಿಕಾರರ ಪ್ರಮಾಣ ಅಧಿಕವಾಗಿದ್ದರೆ ಅಭಿವೃದ್ಧಿ ಸಮಸ್ಯೆಯು ರಾಜಕೀಯ ವಾದುದು ಸ್ಪಷ್ಟವಾಗಿ ಕಂಡುಬರುತ್ತದೆ.

೫. ಅಭಿವೃದ್ಧಿಯೆಂಬುದನ್ನು ಕೇವಲ ವರಮಾನವನ್ನು ಹೆಚ್ಚಿಸಿಕೊಳ್ಳುವ ದಿಶೆಯಲ್ಲಿ ನಿರ್ವಚಿಸುವ

ಅಗತ್ಯವಿಲ್ಲ. ವರಮಾನ ಬೇಕು, ಅದಕ್ಕಿಂತ ಅಧಿಕವಾಗಿ ಏರಿಕೆಗಿಂತ ವರಮಾನವು ಜನರ ಬದುಕಾಗಿ ಪರಿವರ್ತನೆಯಾಗಬೇಕು. ಅದು ಜನರ ಅಕ್ಷರವಾಗಬೇಕು, ಜನರ ಆಹಾರ ಭದ್ರತೆಯಾಗಬೇಕು, ಆಗ ಮಾತ್ರ ಅದು ಜನರನ್ನು ಒಳಗೊಳ್ಳುವಂತಾಗುತ್ತದೆ.

೬. ಲಿಂಗ ಅಸಮಾನತೆ ಎಂಬುದು ಮನುಷ್ಯ-ಮನುಷ್ಯರ ನಡುವಿನ, ತಾಯಿ-ಮಕ್ಕಳ ನಡುವಿನ, ಗಂಡ-ಹೆಂಡತಿಯ, ಅಣ್ಣ-ತಮ್ಮ, ಅಕ್ಕ-ತಂಗಿ ನಡುವಿನ ಅತ್ತೆ-ಸೊಸೆ ನಡುವಿನ ಸಂಬಂಧಗಳ ಪರಿಯು ಭಿನ್ನವಾದದು. ಆದ್ದರಿಂದ ಲಿಂಗ ಅಸಮಾನತೆಯೆಂಬುದು ಅನೇಕ ಸಂದರ್ಭದಗಳಲ್ಲಿ ಅಗೋಚರವಾದುದು. ಈ ಕಾರಣಕ್ಕೆ ಅದರ ನಿವಾರಣೆಯು ಸರಳವಾದ ಸಂಗತಿಯಲ್ಲ. ಈ ಅಸಮಾನತೆಯ ನಿವಾರಣೆ ಎಂದರೆ ಕೇವಲ ಮಹಿಳೆಯರು ಪುರುಷರಂತಾಗುವುದಲ್ಲ. ಇದರಿಂದ ಪ್ರಯೋಜನವಿಲ್ಲ, ಸಮಾನತೆಯಿಂದ ಕೂಡಿದ ಸಮೃದ್ಧವಾದ ಸಾಮಾಜಿಕ ನ್ಯಾಯವನ್ನು ಆಧರಿಸಿದ ನೆಲೆಯಲ್ಲಿ ಲಿಂಗ ಅಸಮಾನತೆಯನ್ನು ನಿವಾರಿಸುವ ಬಗ್ಗೆ ನಾವು ಯೋಚಿಸಬೇಕಾಗಿದೆ ಎಂಬ ಪ್ರಶ್ನೆಗಳನ್ನು ಕೇಳಿಕೊಳ್ಳಲಾಗಿದೆ.

೭. ಧಾರಣಾ ಸಾಮರ್ಥ್ಯವನ್ನು ನಿರ್ಧರಿಸುವ ಸಂಗತಿಗಳಾವುವೆಂದರೆ ಅಕ್ಷರ, ಶಿಕ್ಷಣ, ಆರೋಗ್ಯ, ಆಶ್ರಯ ಮುಂತಾದವು ಎಂದು ವ್ಯಕ್ತವಾದರೆ? ಇದು ದಲಿತರಲ್ಲಿ ಎಷ್ಟರ ಮಟ್ಟಿಗೆ ಧಾರಣಾ ಸಾಮರ್ಥ್ಯವನ್ನು ನಿರ್ಧರಿತವಾಗುತ್ತವೆ? ಎಂಬೆಲ್ಲ ಪ್ರಶ್ನೆಗಳನ್ನು ಎತ್ತಲಾಗುತ್ತದೆ.

ಅಮರ್ತ್ಯ ಸೆನ್, ಮೆಹಬೂಬ್ ಉಲ್ ಹಕ್, ಮಾರ್ತ ನುಸುಬೌಮ್, ಸುಧೀರ್ ಆನಂದ್, ಜೀನ್ ಡ್ರೀಜ್, ಪಾಲ್ ಸ್ಟ್ರೀಟನ್ ಮುಂತಾದವರು ರೂಪಿಸಿರುವ ಮಾನವ ಅಭಿವೃದ್ಧಿ ಪ್ರಣಾಳಿಕೆಗೆ ಜಗತ್ತಿನಲ್ಲಿ ಮಾನ್ಯತೆ ದೊರೆಯಲು ಕಾರಣವಾದ ಒಂದು ಮಹತ್ವದ ಸಂಗತಿಯೆಂದರೆ ಅದಕ್ಕೆ ಒಂದು ಸಾಂಸ್ಥಿಕ ಅಡಿಪಾಯ ಒದಗಿಸಿದೆ 'ಯುನೈಟೆಡ್ ನೇಷನ್ಸ್ ಡೆವಲಪ್ಮೆಂಟ್ ಪ್ರೋಗ್ರಾಮ್'ನ ಪಾತ್ರ ನಿರ್ಣಾಯಕವಾದುದಾಗಿದೆ. ಈ ಸಂಸ್ಥೆಯು ೧೯೯೦ರಲ್ಲಿ ಪ್ರಥಮಬಾರಿಗೆ ಮೆಹಬೂಬ್ ಉಲ್ ಹಕ್ ನೇತೃತ್ವದಲ್ಲಿ ಜಾಗತಿಕ 'ಮಾನವ ಅಭಿವೃದ್ಧಿ ವರದಿ'ಯನ್ನು ಪ್ರಕಟಿಸಿತು. ಈ ವರದಿಯಲ್ಲಿ ಮೆಹಬೂಬ್ ಉಲ್ ಹಕ್ ಅವರು ಮಾನವ ಅಭಿವೃದ್ಧಿಯ ಮಾಪಕ ಮಾಡುವ ಸಾಧನವಾದ "ಮಾನವ ಅಭಿವೃದ್ಧಿ ಸೂಚ್ಯಂಕ"ವನ್ನು ರಚಿಸಿ ಮಂಡಿಸಿದರು. ಈ ಸೂಚ್ಯಂಕದ ಮೂಲಕ ಜಗತ್ತಿನ ಎಲ್ಲ ದೇಶಗಳ ಮಾನವ ಅಭಿವೃದ್ಧಿಯ ಮಟ್ಟವನ್ನು ಅಳೆಯುವ ಕ್ರಮವನ್ನು ಅದು ರೂಪಿಸಿತು. ಈ ಸಂಸ್ಥೆಯು ೧೯೯೦ರಿಂದ ನಿರಂತರವಾಗಿ ಪ್ರತಿ ವರ್ಷ ಜಾಗತಿಕ ಮಾನವ ಅಭಿವೃದ್ಧಿ ವರದಿಯನ್ನು ಪ್ರಕಟಿಸುತ್ತಿದೆ ಮತ್ತು ಜಗತ್ತಿನ ರಾಷ್ಟ್ರಗಳ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಲೆಕ್ಕ ಹಾಕಿ ಪ್ರಕಟಿಸುತ್ತಿದೆ. ಅದರ ೨೦೧೬ರ ವರದಿಯಲ್ಲಿ ಜಗತ್ತಿನ ೧೮೮ ರಾಷ್ಟ್ರಗಳ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಗಣನೆ ಮಾಡಿ ಅವುಗಳ ಮೌಲ್ಯಗಳನ್ನು ನೀಡಲಾಗಿದೆ. ಮಾನವ ಅಭಿವೃದ್ಧಿಯೆಂಬ ವಿಚಾರ ಪ್ರಣಾಳಿಕೆಯು ೧೯೯೦ರ ನಂತರ ಹೆಚ್ಚು ಮನ್ನಣೆ ಪಡೆದುಕೊಳ್ಳತೊಡಗಿತು. ಈ ಪರಿಭಾವನೆಗೆ ಒಂದು ಸೈದ್ಧಾಂತಿಕ ರೂಪವನ್ನು ಮೆಹಬೂಬ್-ಉಲ್-ಹಕ್ ಮತ್ತು ಅಮರ್ತ್ಯಸೇನ್

ಅವರು ನೀಡಿದರು. ಈ ವಿಚಾರ ಪ್ರಣಾಳಿಕೆಗೆ ಕ್ರಿಯಾಶೀಲ ರೂಪವನ್ನು ವಿಶ್ವಸಂಸ್ಥೆಯ ಅಂಗವಾದ 'ಯುನೈಟೆಡ್ ನೇಷನ್ಸ್ ಡೆವಲಪ್‌ಮೆಂಟ್ ಪ್ರೋಗ್ರಾಮ್' (U.N.D.P) ಎಂಬ ಸಂಸ್ಥೆಯು ೧೯೯೦ರಲ್ಲಿ ವರದಿ ನೀಡಿತು. ಅದು ೧೯೯೦ರಿಂದ 'ಮಾನವ ಅಭಿವೃದ್ಧಿ ವರದಿ'ಯನ್ನು ಪ್ರತಿ ವರ್ಷವೂ ಬಿಡುಗಡೆ ಮಾಡುತ್ತದೆ.

ಅದೇ ಮಾದರಿಯಲ್ಲಿ ಭಾರತದ ಯೋಜನಾ ಆಯೋಗವು "ರಾಷ್ಟ್ರೀಯ ಮಾನವ ಅಭಿವೃದ್ಧಿ ವರದಿ"ಯನ್ನು ಪ್ರಕಟಿಸಿದೆ. ಯು.ಎನ್.ಡಿ.ಪಿ. ಯ ವರದಿಯು ವಿಶ್ವದ ವಿವಿಧ ದೇಶಗಳ ಮಾನವ ಅಭಿವೃದ್ಧಿ ಸಾಧನೆಯ ವಿವರಗಳನ್ನು ಒಳಗೊಂಡಿದ್ದರೆ ಭಾರತದ ಯೋಜನಾ ಆಯೋಗದ ವರದಿಯು ದೇಶದ ವಿವಿಧ ರಾಜ್ಯಗಳ ಮಾನವ ಅಭಿವೃದ್ಧಿ ಸಾಧನೆಯ ವಿವರಗಳನ್ನು ಒಳಗೊಂಡಿದೆ.

ಕರ್ನಾಟಕ ಸರ್ಕಾರದ ಯೋಜನಾ ಇಲಾಖೆಯು ತನ್ನ ರಾಜ್ಯದ ಜಿಲ್ಲೆಗಳನ್ನು ಒಳಗೊಂಡಂತೆ "ಕರ್ನಾಟಕ ಮಾನವ ಅಭಿವೃದ್ಧಿ-೧೯೯೯" ಎಂಬ ವರದಿಯನ್ನು ೧೯೯೯ರಲ್ಲಿ ಪ್ರಕಟಿಸಿತು. ನಂತರ ೨೦೦೬ರಲ್ಲಿ "ಕರ್ನಾಟಕದ ಮಾನವ ಅಭಿವೃದ್ಧಿ ವರದಿ-೨೦೦೫" ಎಂಬ ೨ನೆಯ ವರದಿಯನ್ನು ೪ ಜಿಲ್ಲೆಗಳ (ವಿಜಯಪುರ, ಕಲಬುರ್ಗಿ, ಉಡುಪಿ ಮತ್ತು ಮೈಸೂರು) ಮಾನವ ಅಭಿವೃದ್ಧಿ ವರದಿ ೨೦೦೮ರಲ್ಲಿ ಪ್ರಕಟಿಸಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನಕ್ಕೆ ಕರ್ನಾಟಕವು ಮಾನವ ಅಭಿವೃದ್ಧಿಯಲ್ಲಿ ಸಾಧಿಸಿ ಕೊಂಡಿರುವ ಸಾಧನೆಯನ್ನು ಕುರಿತಂತೆ ತಿಳಿದುಕೊಳ್ಳುವ ಉದ್ದೇಶದಿಂದ ಇದನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಅಧ್ಯಯನದ ಮಹತ್ವನ್ನು ಮೆಹಬೂಬ್ ಉಲ್ ಹಕ್ ಅವರ ಒಂದು ಹೇಳಿಕೆಯ ಮೂಲಕ ಮಂಡಿಸಬಹುದಾಗಿದೆ. ಅವರು ಯು.ಎನ್.ಡಿ.ಪಿ.ಗೆ ಸಿದ್ಧಪಡಿಸಿದ ಪ್ರಥಮ ಮಾನವ ಅಭಿವೃದ್ಧಿ ವರದಿಯನ್ನು ಹೇಳಿರುವಂತೆ 'ವರಮಾನವು ಜನರ ಜೀವನದ ಒಟ್ಟು ಮೊತ್ತವಲ್ಲ'. ಜನರ ಬದುಕಿನಲ್ಲಿ ವರಮಾನ ಅಗತ್ಯ. ಅದನ್ನು ನಿರ್ಲಕ್ಷಿಸಲು ಬರುವುದಿಲ್ಲ. ಆದರೆ ಅದೇ ಎಲ್ಲವೂ ಅಲ್ಲ ಎಂಬುದನ್ನು ಅಮರ್ತ್ಯಸೇನ್ ತೋರಿಸಿಕೊಟ್ಟರು. ವರಮಾನವು ಅಭಿವೃದ್ಧಿಯ ಸಾಧನವೇ ವಿನಃ ಅದೇ ಅಭಿವೃದ್ಧಿಯಲ್ಲ. ಉದಾಹರಣೆಗೆ ಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆಯ ತಲಾ ವರಮಾನವು ೨೦೧೫-೧೬ರಲ್ಲಿ ರೂ. ೧೧೪೧೩೮ರಷ್ಟಿತ್ತು. ಇದು ಶಿವಮೊಗ್ಗ, ಹಾಸನ, ಧಾರವಾಡ ಮುಂತಾದ ಜಿಲ್ಲೆಗಳ ತಲಾ ವರಮಾನಕ್ಕಿಂತ ಅಧಿಕವಾಗಿತ್ತು. ಆದರೆ ಆ ಜಿಲ್ಲೆಗಳಿಗೆ ಹೋಲಿಸಿದರೆ ಬಳ್ಳಾರಿ ಜಿಲ್ಲೆಯಲ್ಲಿ ಜನರ ಸಾಕ್ಷರತೆ, ಆರೋಗ್ಯ ಮಟ್ಟ, ಮಹಿಳೆಯರ ಸ್ಥಿತಿಗತಿ ಕೆಳಮಟ್ಟದಲ್ಲಿತ್ತು. ಈ ಅಧ್ಯಯನ ವಿಷಯದ ಮಹತ್ವನ್ನು ಸರಳವಾಗಿ ಕೆಳಕಂಡ ಕೋಷ್ಟಕದಲ್ಲಿ ತೋರಿಸಿದೆ.

## ಕೋಷ್ಟಕ ೧.೧. ವರಮಾನ ಕೇಂದ್ರಿತ ಅಭಿವೃದ್ಧಿ ಮತ್ತು ಜನರನ್ನು ಕೇಂದ್ರವಾಗಿಟ್ಟುಕೊಂಡ ಮಾನವ ಅಭಿವೃದ್ಧಿ ಒಂದು ತೌಲನಿಕ ಚಿತ್ರ

| ಕ್ರ.ಸಂ. | ಜಿಲ್ಲೆಗಳು | ತಲಾ ವರಮಾನ (ಚಾಲ್ತಿ ಬೆಲೆಗಳು) ೨೦೧೫-೧೬ | ಒಟ್ಟು ಸಾಕ್ಷರತೆ ೨೦೧೧ | ಪ.ಜಾ.(ದಲಿತರ) ಸಾಕ್ಷರತೆ ೨೦೧೧ | ಮಹಿಳೆಯರಲ್ಲಿ ಅನಿಮಿಯ (ರಕ್ತಹೀನತೆ) ೨೦೧೫-೧೬ | ಲಿಂಗ ಅನುಪಾತ ೨೦೧೧ |
|---|---|---|---|---|---|---|
| ೧ | ೨ | ೩ | ೪ | ೫ | ೬ | ೭ |
| ೧ | ಬಳ್ಳಾರಿ | ರೂ. ೧೧೪೧೩೮ | ಶೇ. ೭೬.೬೪ | ಶೇ. ೫೮.೬೦ | ಶೇ. ೪೪.೩೦ | ೯೮೩ |
| ೨ | ಉತ್ತರ ಕನ್ನಡ | ರೂ. ೧೦೫೭೬೭ | ಶೇ. ೮೯.೬೩ | ಶೇ. ೭೭.೦೭ | ಶೇ. ೪೧.೯೦ | ೯೭೯ |
| ೩ | ಹಾಸನ | ರೂ. ೧೦೮೯೭೦ | ಶೇ. ೮೩.೬೪ | ಶೇ. ೬೬.೫೦ | ಶೇ. ೪೭.೦೦ | ೧೦೧೦ |
| ೪ | ಕೊಡಗು | ರೂ. ೧೦೫೦೬೩ | ಶೇ. ೮೭.೧೯ | ಶೇ. ೭೨.೬೯ | ಶೇ. ೩೭.೨೦ | ೧೦೦೦ |
| ೫ | ಕರ್ನಾಟಕ | ರೂ. ೧೩೨೮೮೦ | ಶೇ. ೭೫.೩೬ | ಶೇ. ೬೫.೩೨ | ಶೇ. ೪೪.೮. | ೯೭೩ |

ಮೂಲ: ಸೆನ್ಸಸ್ ಆಫ್ ಇಂಡಿಯ ೨೦೧೧. ಕರ್ನಾಟಕ ಆರ್ಥಿಕ ಸಮೀಕ್ಷೆ ೨೦೧೬-೧೭, ಎನ್ ಎಫ್ ಎಚ್ ಎಸ್, ೪ (೨೦೧೫-೧೬)

ಪ್ರಸ್ತುತ ಅಧ್ಯಯನ ಏಕೆ ಮಹತ್ವವಾದುದು ಎಂಬುದಕ್ಕೆ ಕೋಷ್ಟಕ ೧.೧.ರಲ್ಲಿ ಉತ್ತರವಿದೆ. ಬಳ್ಳಾರಿ ಜಿಲ್ಲೆಯ ೨೦೧೫-೧೬ರ ತಲಾ ವರಮಾನ(ಚಾಲ್ತಿ ಬೆಲೆಗಳಲ್ಲಿ) ರೂ.೧೧೪೧೩೮. ಇದು ಉಳಿದ ಮೂರು ಜಿಲ್ಲೆಗಳ ತಲಾ ವರಮಾನಕ್ಕಿಂತ ಅಧಿಕವಾಗಿದೆ. ಅಂದರೆ ಬಳ್ಳಾರಿಯು ವರಮಾನದಲ್ಲಿ ಉಳಿದ ಮೂರು ಜಿಲ್ಲೆಗಳಿಗಿಂತ ಶ್ರೀಮಂತ ಜಿಲ್ಲೆಯಾಗಿದೆ. ಆದರೆ ಅಲ್ಲಿ ಜನರ ಬದುಕು ಹೇಗಿದೆ ಎಂಬುದನ್ನು ಗಮನಿಸಿದರೆ ನಮಗೆ ಭಿನ್ನವಾದ ಚಿತ್ರ ದೊರೆಯುತ್ತದೆ. ಸಾಕ್ಷರತೆ, ಮಹಿಳೆಯರಲ್ಲಿನ ಅನಿಮಿಯ ಮತ್ತು ಲಿಂಗ ಅನುಪಾತಗಳನ್ನು ತೆಗೆದುಕೊಂಡರೆ ಬಳ್ಳಾರಿಯ ಸ್ಥಿತಿಯು ಉಳಿದ ಮೂರು ಜಿಲ್ಲೆಗಳಲ್ಲಿನ ಸ್ಥಿತಿಗಿಂತ ಕೆಳಮಟ್ಟದಲ್ಲಿದೆ. ವರಮಾನವೇ ಅಭಿವೃದ್ಧಿಯ ಅಂತಿಮ ಸಂಗತಿಯಲ್ಲ. ಇದಕ್ಕೆ ವಿವರಣೆಯನ್ನು ನೀಡುವುದು ಅಗತ್ಯ. ಈ ಅಧ್ಯಯನ ಏಕೆ ಮಹತ್ವವಾದುದು ಎಂಬುದಕ್ಕೆ ಇದು ಒಂದು ಕಾರಣ. ಇದಕ್ಕೆ ಮತ್ತೊಂದು ಕಾರಣವನ್ನು ದಲಿತರ ಅಭಿವೃದ್ಧಿಯ ಹಿನ್ನೆಲೆಯಲ್ಲಿ ತೋರಿಸಬಹುದು. ಕೋಷ್ಟಕ ೧.೧ರ ಅಂಕಣ ೫ರಲ್ಲಿ ತೋರಿಸಿರುವಂತೆ ಬಳ್ಳಾರಿ ಜಿಲ್ಲೆಯು ವರಮಾನದಲ್ಲಿ ಶ್ರೀಮಂತವಾಗಿದ್ದರೂ ಅದರ ಫಲಗಳು ಜಿಲ್ಲೆಯ ದಲಿತರಿಗೆ ಒದಗಿ ಬಂದಿಲ್ಲ. ಬಳ್ಳಾರಿ ಜಿಲ್ಲೆಯಲ್ಲಿ ಪ.ಜಾ.(ದಲಿತರು)ಯ ಸಾಕ್ಷರತಾ ಪ್ರಮಾಣ ೨೦೧೧ರಲ್ಲಿ ರಾಜ್ಯ ಮತ್ತು ಉಳಿದ ಮೂರು ಜಿಲ್ಲೆಗಳ ಸಾಕ್ಷರತೆ ಪ್ರಮಾಣಕ್ಕಿಂತ ಕೆಳಮಟ್ಟದಲ್ಲಿದೆ. ಅದೇ ರೀತಿಯಲ್ಲಿ ರಾಜ್ಯದಲ್ಲಿ ದಲಿತರ ಸಾಕ್ಷರತಾ ಪ್ರಮಾಣ(ಶೇ.೬೫.೩೨) ರಾಜ್ಯದ ಒಟ್ಟು ಸಾಕ್ಷರತಾ(ಶೇ.೭೫.೩೬) ಪ್ರಮಾಣಕ್ಕಿಂತ ಕೆಳಮಟ್ಟದಲ್ಲಿದೆ. ಇದು ಏನನ್ನು ತೋರಿಸುತ್ತದೆ ಎಂದರೆ ರಾಜ್ಯದ ಅಭಿವೃದ್ಧಿಯಲ್ಲಿ ದಲಿತರಿಗೆ ಸಮಪಾಲು ದೊರೆತಿಲ್ಲ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ವರಮಾನವು ಅಭಿವೃದ್ಧಿಯ ಮಾನದಂಡವಾಗಿ ಪರಿಗಣಿಸುವುದರಿಂದ ನಮಗೆ ಜನರ ಬದುಕಿನ ಜೀವನ ಮಟ್ಟದ ಬಗ್ಗೆ ಏನೇನೂ ತಿಳಿಯುವುದಿಲ್ಲ. ಇದನ್ನು ಅರ್ಥ ಮಾಡಿಕೊಳ್ಳಬೇಕಾದರೆ ಮಾನವ ಅಭಿವೃದ್ಧಿಯ ವಿವಿಧ ಆಯಾಮ ಗಳನ್ನು ಅರ್ಥ ಮಾಡಿಕೊಳ್ಳಬೇಕು. ಈ ಎರಡು ಕಾರಣಗಳಿಂದ ಪ್ರಸ್ತುತ ವಿಷಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

### ೧.೩. ಈ ಅಧ್ಯಯನದ ಅಗತ್ಯತೆ

ಈ ಹಂತದಲ್ಲಿ ನಮಗೆ ಎದುರಾಗುವ ಮತ್ತೊಂದು ಪ್ರಶ್ನೆಯೆಂದರೆ ಏಕೆ ಅಧ್ಯಯನ ಮಾಡಬೇಕು ಎಂಬುದಾಗಿದೆ. ಇದಕ್ಕೆ ಬಹುಮುಖ್ಯ ಕಾರಣವೆಂದರೆ ಅಭಿವೃದ್ಧಿ ಅನ್ನುವುದು ಜನರ ಬದುಕಿನ ಶ್ರೀಮಂತಿಕೆಗೆ ಸಂಬಂಧಿಸಿದೆ ವಿನಃ ಆರ್ಥಿಕ ಅಭಿವೃದ್ಧಿಗೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ. ಈ ಅಧ್ಯಯನದಲ್ಲಿ ವರಮಾನಕ್ಕೆ ಪ್ರತಿಯಾಗಿ ಜನರ ಧಾರಣ ಸಾಮರ್ಥ್ಯವನ್ನು ಉತ್ತಮಪಡಿಸುವ ಸಾಕ್ಷರತೆ, ಶಿಕ್ಷಣ, ಆರೋಗ್ಯ, ಆಹಾರ ಭದ್ರತೆ ಮುಂತಾದವುಗಳ ವರ್ಧನೆಯು ಏಕೆ ಮಹತ್ವ ಅನ್ನುವುದನ್ನು ಸಿದ್ಧ ಮಾಡಬೇಕಾಗಿದೆ. ಎರಡನೆಯದಾಗಿ ಮಾನವ ಅಭಿವೃದ್ಧಿ ಪ್ರಣಾಳಿಕೆಗೆ ಸಂಬಂಧಿಸಿದ ವರದಿಗಳನ್ನು ಸಿದ್ಧಪಡಿಸುವುದರಲ್ಲಿ ಕರ್ನಾಟಕ ಮಹತ್ವದ ಸಾಧನೆ ಮಾಡಿದೆ. ಕರ್ನಾಟಕದಲ್ಲಿ ರಾಜ್ಯ, ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮ ಮಟ್ಟದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಮಾಪನ ಮಾಡಿ ವರದಿಗಳನ್ನು ಪ್ರಕಟಿಸಲಾಗಿದೆ(ಕರ್ನಾಟಕ ಸರ್ಕಾರ ೨೦೧೪,

*ಮಾನವ ಅಭಿವೃದ್ಧಿ: ಕರ್ನಾಟಕದ ಜಿಲ್ಲೆಗಳು, ತಾಲ್ಲೂಕುಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳ ಸಾಧನೆ, ಒಂದು ಕ್ಷಿಪ್ರ ನೋಟ,* ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಕರ್ನಾಟಕ ಸರ್ಕಾರ, ೨೦೧೫. *ಮಾನವ ಅಭಿವೃದ್ಧಿ: ಕರ್ನಾಟಕ ರಾಜ್ಯದ ಗ್ರಾಮ ಪಂಚಾಯತಿಗಳ ಸಾಧನೆ ೨೦೧೫,* ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಂಸ್ಥೆ ಮತ್ತು ರಾಜ್ಯ ಯೋಜನೆ, ಸಾಂಖ್ಯಿಕ ಇಲಾಖೆ, ಬೆಂಗಳೂರು. ಈ ವರದಿಗಳಲ್ಲಿನ ಮುಖ್ಯ ಸಂಗತಿಗಳನ್ನು ಗುರುತಿಸುವ ಅಗತ್ಯವಿದೆ. ಈ ಅಧ್ಯಯನದ ಮೂಲಕ ಅಂತಹ ಒಂದು ಪ್ರಯತ್ನವನ್ನು ಮಾಡಲಾಗಿದೆ. ಈ ಅಧ್ಯಯನಕ್ಕೆ ಮತ್ತೊಂದು ಕಾರಣವೆಂದರೆ ಕರ್ನಾಟಕವು ತನ್ನ ಮಾನವ ಅಭಿವೃದ್ಧಿ ವರದಿಗಳನ್ನು ಸಿದ್ಧಪಡಿಸುವಾಗ ಪ.ಜಾ. ಮತ್ತು ಪ.ಪಂ.ಗಳ ಮಾನವ ಅಭಿವೃದ್ಧಿಯ ಮಾಪನಕ್ಕೆ ಅವಕಾಶ ನೀಡುತ್ತಾ ಬಂದಿದೆ. ಉದಾಹರಣೆಗೆ ಕರ್ನಾಟಕ ರಾಜ್ಯದ ಮೊದಲನೆಯ ಮಾನವ ಅಭಿವೃದ್ಧಿ ವರದಿಯಲ್ಲಿ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಸ್ಥಿತಿಗತಿಗಳನ್ನು ಅನೇಕ ಸೂಚಿಗಳನ್ನು ಬಳಸಿ ಪ್ರತ್ಯೇಕ ಅಧ್ಯಾಯಗಳಲ್ಲಿ ಚರ್ಚೆ ಮಾಡಲಾಗಿತ್ತು. ಕರ್ನಾಟಕ ರಾಜ್ಯದ ಎರಡನೆಯ ಮಾನವ ಅಭಿವೃದ್ಧಿ ವರದಿಯಲ್ಲಿ ಪ.ಜಾ. ಮತ್ತು ಪ.ಪಂ.ಗಳ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ಮಾಪನ ಮಾಡುವ ಪ್ರಯತ್ನ ಮಾಡಲಾಗಿದೆ(ಪು.೨೯-೨೩೨ ಮತ್ತು ೨೩೩-೨೫೨). ಅದರ ಫಲಿತಗಳು ಹೀಗಿವೆ:

**ಕೋಷ್ಟಕ ೧.೨. ಪ.ಜಾ ಮತ್ತು ಪ.ಪಂ. ಮಾನವ ಅಭಿವೃದ್ಧಿ ಸೂಚ್ಯಂಕ ೨೦೦೪**

| ಸೂಚ್ಯಂಕ | ಕರ್ನಾಟಕ ೨೦೦೧ | ಪ.ಜಾತಿ ೨೦೦೪ | ಅಂತರ | ಪ.ಪಂಗಡ ೨೦೦೪ | ಅಂತರ |
|---|---|---|---|---|---|
| ಮಾನವ ಅಭಿವೃದ್ಧಿ ಸೂಚ್ಯಂಕ | ೦.೬೫೦ | ೦.೫೭೫ | ೦.೦೭೫ | ೦.೫೩೯ | ೦.೧೧೧ |
| ಮಹಿಳಾ ಸಂಬಂಧಿ ಅಭಿವೃದ್ಧಿ ಸೂಚ್ಯಂಕ | ೦.೬೩೭ | ೦.೫೬೪ | ೦.೦೭೩ | ೦.೫೨೭ | ೦.೧೧೦ |

ಮೂಲ: ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫.

ಕೋಷ್ಟಕ ೧.೨ರಲ್ಲಿ ದಲಿತರು(ಪ.ಜಾ.) ಮತ್ತು ಪ.ಪಂ.ಗಳು ಹಾಗೂ ಒಟ್ಟು ಜನಸಂಖ್ಯೆಗಳ ನಡುವಿನ ಮಾನವ ಅಭಿವೃದ್ಧಿಗೆ ಸಂಬಂಧಿಸಿದ ಅಂತರವನ್ನು ತೋರಿಸಲಾಗಿದೆ. ಅಭಿವೃದ್ಧಿಯ ಅವಕಾಶಗಳ ಏಕಪ್ರಕಾರವಾಗಿದ್ದ ಪಕ್ಷದಲ್ಲಿ ಸೂಚ್ಯಂಕಗಳಲ್ಲಿ ವ್ಯತ್ಯಾಸ ಏಕೆ ಉಂಟಾಗಿದೆ? ಇಲ್ಲಿ ಅಭಿವೃದ್ಧಿ ಅವಕಾಶಗಳನ್ನು ನೀಡುವುದರಲ್ಲಿಯೇ ತಾರತಮ್ಯಗಳಿವೆಯೋ? ಅಥವಾ ಅವಕಾಶಗಳನ್ನು ಉಪಯೋಗಿಸಿಕೊಳ್ಳುವ ಸಾಮರ್ಥ್ಯ ಪ.ಜಾ. ಮತ್ತು ಪ.ಪಂ.ಗಳಲ್ಲಿ ಕೊರತೆಯಲ್ಲಿವೆಯೋ? ಎಂಬುದನ್ನು ಚರ್ಚೆ ಮಾಡುವ ಉದ್ದೇಶ ಪ್ರಸ್ತುತ ಅಧ್ಯಯನಕ್ಕಿದೆ. ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫ರಲ್ಲಿ ಪ.ಜಾ. ಮತ್ತು ಪ.ಪಂ.ಗಳಿಗೆ ಸಂಬಂಧಿಸಿದಂತೆ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಮಾಪನ ಮಾಡಲಾಗಿದೆ. ಇಲ್ಲಿರುವ ಸಾಮಾನ್ಯ ಜನಸಂಖ್ಯೆಯ ಸೂಚ್ಯಂಕ ಮತ್ತು ಪ.ಜಾ. ಹಾಗೂ ಪ.ಪಂ.ಗಳ ಸೂಚ್ಯಂಕಗಳ ನಡುವಿನ ಅಂತರವನ್ನು ಕೋಷ್ಟಕ ೧.೨ರಲ್ಲಿ ತೋರಿಸಲಾಗಿದೆ.

೨೦೧೪ರಲ್ಲಿ ಪ್ರಕಟವಾದ ಜಿಲ್ಲಾ ಮಾನವ ಅಭಿವೃದ್ಧಿ ವರದಿಗಳಲ್ಲಿ ಪ್ರಾಯೋಗಿಕವಾಗಿ ರಾಜ್ಯದ ಮೂವತ್ತು ಜಿಲ್ಲೆಗಳ ದಲಿತ ಅಭಿವೃದ್ಧಿ ಸೂಚ್ಯಂಕವನ್ನು ಆಯ್ದ ದಲಿತ ಕುಟುಂಬಗಳನ್ನು ಆಧರಿಸಿ ಮಾಪನ ಮಾಡಲಾಗಿದೆ. ದಲಿತ ಮಾನವ ಅಭಿವೃದ್ಧಿ ಸೂಚ್ಯಂಕದ ವಿವರಗಳನ್ನು ಕೋಷ್ಟಕ ೧.೩ರಲ್ಲಿ ನೀಡಲಾಗಿದೆ.

**ಕೋಷ್ಟಕ ೧.೩. ಕರ್ನಾಟಕದ ವಿಭಾಗವಾರು ಜಿಲ್ಲಾ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ೨೦೧೪**

| ಬೆಂಗಳೂರು ವಿಭಾಗ | | ಮೈಸೂರು ವಿಭಾಗ | |
|---|---|---|---|
| **ಜಿಲ್ಲೆಗಳು** | **ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ** | **ಜಿಲ್ಲೆಗಳು** | **ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ** |
| ಬೆಂಗಳೂರು (ಗ್ರಾ) | ೦.೬೮ | ಮೈಸೂರು | ೦.೬೧ |
| ಬೆಂಗಳೂರು (ನಗರ) | ೦.೫೩ | ಚಾಮರಾಜನಗರ | ೦.೫೧ |
| ಕೋಲಾರ | ೦.೪೪ | ದಕ್ಷಿಣ ಕನ್ನಡ | ೦.೭೮ |
| ರಾಮನಗರ | ೦.೨೨ | ಉಡುಪಿ | ೦.೭೮ |
| ಚಿಕ್ಕಬಳ್ಳಾಪುರ | ೦.೧೬ | ಹಾಸನ | ೦.೪೪ |
| ಚಿತ್ರದುರ್ಗ | ೦.೩೬ | ಚಿಕ್ಕಮಗಳೂರು | ೦.೫೩ |
| ದಾವಣಗೆರೆ | ೦.೪೮ | ಕೊಡಗು | ೦.೬೦ |
| ತುಮಕೂರು | ೦.೫೦ | ಮಂಡ್ಯ | ೦.೫೭ |
| ಶಿವಮೊಗ್ಗ | ೦.೪೭ | | |
| **ಬೆಳಗಾವಿ ವಿಭಾಗ** | | **ಕಲಬುರಗಿ ವಿಭಾಗ** | |
| ಬೆಳಗಾವಿ | ೦.೪೪ | ಕಲಬುರಗಿ | ೦.೪೫ |
| ವಿಜಯಪುರ | ೦.೩೦ | ಯಾದಗಿರಿ | ೦.೪೦ |
| ಬಾಗಲಕೋಟೆ | ೦.೩೩ | ರಾಯಚೂರು | ೦.೩೬ |
| ಧಾರವಾಡ | ೦.೫೩ | ಕೊಪ್ಪಳ | ೦.೩೭ |
| ಗದಗ | ೦.೪೨ | ಬೀದರ್ | ೦.೩೬ |
| ಹಾವೇರಿ | ೦.೪೫ | ಬಳ್ಳಾರಿ | ೦.೩೯ |
| ಉತ್ತರ ಕನ್ನಡ | ೦.೫೫ | | |

ಮೂಲ: ಕರ್ನಾಟಕ ಜಿಲ್ಲಾ ಮಾನವ ಅಭಿವೃದ್ಧಿ ವರದಿ ೨೦೧೫.

ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಅನ್ನುವುದು ದಲಿತರ ಅಭಿವೃದ್ಧಿಗೂ ಅನ್ವಯವಾಗುತ್ತದೆ. ಕೋಷ್ಟಕ ೧.೩ರಲ್ಲಿ ಕಂಡು ಬರುವಂತೆ ರಾಜ್ಯದ ೩೦ ಜಿಲ್ಲೆಗಳಲ್ಲಿ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ೦.೫೦ ಮತ್ತು ಅದಕ್ಕಿಂತಲೂ ಅಧಿಕ ೧೨ ಜಿಲ್ಲೆಗಳಲ್ಲಿವೆ. ಆದರೆ ಅವುಗಳಲ್ಲಿ ೧೦ ದಕ್ಷಿಣ ಕರ್ನಾಟಕದಲ್ಲಿದ್ದರೆ ೨ ಮಾತ್ರ ಬೆಳಗಾವಿ ವಿಭಾಗದಲ್ಲಿವೆ. ಕಲಬುರಗಿ ವಿಭಾಗದಲ್ಲಿ ೦.೫೦ ಸೂಚ್ಯಂಕದ ಒಂದೂ ಜಿಲ್ಲೆಯೂ ಇಲ್ಲ. ಈ ವಿಭಾಗದಲ್ಲಿ ಅದು ೦.೪೫ರಿಂದ ೦.೩೬ರ ಮಧ್ಯದಲ್ಲಿದೆ. ಒಟ್ಟಾರೆ ಈ ಅಂಕಿ ಅಂಶಗಳಿಂದ ಅನೇಕ ಬಗೆಯ ತಾರತಮ್ಯವನ್ನು ಎದುರಿಸಬೇಕಾಗಿದೆ ಎನ್ನುವುದು ತಿಳಿದುಬರುತ್ತದೆ.

### ೧.೩.೧. ಅಧ್ಯಯನದ ಸೈದ್ಧಾಂತಿಕ ಆಯಾಮಗಳು

ಈಗಾಗಲೇ ತಿಳಿಸಿರುವಂತೆ ಆರ್ಥಿಕ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿಗಳ ನಡುವೆ ಅನೇಕ ಭಿನ್ನತೆಗಳಿವೆ. ಆಡಂಸ್ಮಿತ್, ಆಲ್‌ಫ್ರೆಡ್ ಮಾರ್ಷಲ್, ರಿಕಾರ್ಡೋ ಮುಂತಾದ ಅರ್ಥಶಾಸ್ತ್ರಜ್ಞರು ಮತ್ತು ಆಧುನಿಕ ಅರ್ಥಶಾಸ್ತ್ರಜ್ಞರಾದ ಜಾನ್ ಮೆನಾರ್ಡ್ ಕೇನ್ಸ್, ಸೈಮನ್ ಕುಜ್ನೆಟ್ಸ್, ಪಾಲ್ ಸಾಮ್ಯುಯಲ್‌ಸನ್, ಆರ್ಥರ್ ಲಿವೀಸ್, ಡಬ್ಲ್ಯೂ, ಡಬ್ಲ್ಯೂ. ರಾಸ್ಟೋ ಮುಂತಾದವರು ಪ್ರತಿಪಾದಿಸಿದ ಅಭಿವೃದ್ಧಿ ಮೀಮಾಂಸೆಯಲ್ಲಿ ಅಭಿವೃದ್ಧಿಯನ್ನು ವರಮಾನದ ಚೌಕಟ್ಟಿನಲ್ಲಿಯೇ ನಿರ್ವಚಿಸಿಕೊಂಡು ಬಂದಿರುವುದನ್ನು ಕಾಣಬಹುದು. ವಾಸ್ತವವಾಗಿ ೨೦ನೆಯ ಶತಮಾನದ ೧೯೪೦-೧೯೫೦ರ ದಶಕದವರೆಗೆ ಅಭಿವೃದ್ಧಿ ಅನ್ನುವುದನ್ನು ವರಮಾನ, ಬಂಡವಾಳ, ಬಡ್ಡಿ, ಉಳಿತಾಯ, ಉತ್ಪಾದಕತೆ, ತಂತ್ರಜ್ಞಾನ ಮುಂತಾದ ನೆಲೆಯಲ್ಲಿ ಪರಿಭಾವಿಸಿಕೊಂಡು ಬರಲಾಗಿತ್ತು. ಇದಕ್ಕೆ ಹ್ಯಾರೆಡ್-ಡೋಮರ್ ಮಾದರಿಗಳು ಅಪ್ಪಟ ಉದಾಹರಣೆಯಾಗಬಹುದು. ಇಲ್ಲಿ ಬಂಡವಾಳವೇ ಅಭಿವೃದ್ಧಿಯ ಕೀಲಿಕೈ ಎಂದು ನಂಬಲಾಗಿತ್ತು. ನಿಜ, ಅಭಿವೃದ್ಧಿಗೆ ಬಂಡವಾಳಬೇಕು. ಆದರೆ ಅದೇ ಅಭಿವೃದ್ಧಿಯಲ್ಲ. ಅಮೇರಿಕೆಯ ೧೯೪೦ರ ದಶಕದಲ್ಲಿನ ಅಧ್ಯಕ್ಷ ಹ್ಯಾರಿ ಟ್ರೂಮನ್ ಅವರು 'ಅಭಿವೃದ್ಧಿಯ ಕೀಲಿಕೈ ಹೆಚ್ಚು ಉತ್ಪಾದನೆ' ಎಂಬ ಸೂತ್ರವನ್ನು ನೀಡಿದರು. ಜಗತ್ತಿನ ಎಲ್ಲ ದೇಶಗಳು ಈ ಬಗೆಯಲ್ಲಿ ಬಂಡವಾಳ ಹೂಡಿಕೆಯನ್ನು ಏರಿಸುವುದಕ್ಕೆ, ಉತ್ಪಾದನೆಯನ್ನು ಏರಿಸುವುದಕ್ಕೆ, ಉಳಿತಾಯವನ್ನು ಹೆಚ್ಚಿಸುವುದಕ್ಕೆ ಪ್ರಯತ್ನ ನಡೆಸುತ್ತಾ ಬಂದವು. ಸೈದ್ಧಾಂತಿಕವಾಗಿ ಇಲ್ಲಿ ವರಮಾನದಲ್ಲಿ, ಉತ್ಪಾದನೆಯಲ್ಲಿ, ಬಂಡವಾಳ ಹೂಡಿಕೆಯಲ್ಲಿ, ಉಳಿತಾಯ ದಲ್ಲಿನ ಏರಿಕೆಯು ಸಮಾಜದಲ್ಲಿ ಬಡತನವನ್ನು, ಹಸಿವನ್ನು, ಅಪೌಷ್ಟಿಕತೆಯನ್ನು, ನಿರುದ್ಯೋಗವನ್ನು ನಿವಾರಿಸಿ ಬಿಡುತ್ತವೆ ಎಂದು ವಾದ ಮಾಡಲಾಗಿತ್ತು. ಬಡತನವನ್ನು ನೇರವಾಗಿ ಎದುರಿಸುವ, ನಿವಾರಿಸಲು ಪ್ರಯತ್ನಿಸುವ ಅಗತ್ಯವಿಲ್ಲ ಎಂದು ಪ್ರತಿಪಾದಿಸಲಾಗಿತ್ತು. ವರಮಾನದಲ್ಲಿನ ಏರಿಕೆಯು ಬಡತನವನ್ನು, ಹಸಿವನ್ನು ನಿವಾರಿಸಿಬಿಡುತ್ತದೆ. ಈ ಕಾರ್ಯವನ್ನು ಸರ್ಕಾರವು ಮಾಡುವ ಅಗತ್ಯವಿಲ್ಲ. ಮಾರುಕಟ್ಟೆ ಶಕ್ತಿಗಳು ಅವುಗಳನ್ನು ನಿರ್ವಹಿಸುತ್ತವೆ ಎಂದು ವಾದಿಸಲಾಯಿತು. ಇದನ್ನು **"ಟ್ರಿಕಲ್ ಡೌನ್ ಎಕನಾಮಿಕ್ಸ್"** ಎಂದು ಕರೆಯಲಾಯಿತು.

ಎರಡನೆಯ ಮಹಾಯುದ್ಧದ ನಂತರ ಜಗತ್ತಿನ ಎಲ್ಲ ದೇಶಗಳು ತಮ್ಮ ತಮ್ಮ ಆರ್ಥಿಕತೆಗಳ ವರಮಾನವನ್ನು ಏರಿಸುವ ಕ್ರಮಕ್ಕೆ ಆದ್ಯತೆಯನ್ನು ನೀಡತೊಡಗಿದವು. ಈ ಅಭಿವೃದ್ಧಿ ಸಿದ್ಧಾಂತಗಳಲ್ಲಿ ಶಿಕ್ಷಣ, ಆರೋಗ್ಯ, ಆಹಾರ, ಪೌಷ್ಟಿಕತೆ ಮುಂತಾದವುಗಳ ನಿವಾರಣೆಗೆ ಪ್ರತ್ಯೇಕ ಕಾರ್ಯನೀತಿಗಳ ಅಗತ್ಯವಿಲ್ಲವೆಂಬುದೇ ಇಲ್ಲಿನ ಸೂತ್ರವಾಗಿದೆ. ಜನರ ವರಮಾನದಲ್ಲಿ ಏರಿಕೆಯಾದರೆ ಅವರು ತಮ್ಮಷ್ಟಕ್ಕೆ ತಾನೇ ಶಿಕ್ಷಿತರಾಗುತ್ತಾರೆ ಎಂದು ಹೇಳಲಾಯಿತು.

ಈ ಅಭಿವೃದ್ಧಿ ಪ್ರಣಾಳಿಕೆಯನ್ನು 'ವರಮಾನ ಕೇಂದ್ರಿತ ಅಭಿವೃದ್ಧಿ ಮಾದರಿ' ಎಂದು ಕರೆಯಬಹುದು. ಈ ಅಭಿವೃದ್ಧಿ ಮಾದರಿಯು ಇಂದಿಗೂ ಚಾಲ್ತಿಯಲ್ಲಿದೆ. ಜಿಡಿಪಿಯ ಏರಿಕೆಯೇ ಅಭಿವೃದ್ಧಿ ಎಂದು ಜನರನ್ನು ನಂಬಿಸಲಾಯಿತು. ಈ ಅಭಿವೃದ್ಧಿ ಮಾದರಿಯಲ್ಲಿ ಸಮಾನತೆಯು ವರಮಾನ ಏರಿಕೆಯ ಉತ್ಪನ್ನವೇ ವಿನಃ ಅದನ್ನು ಪ್ರಜ್ಞಾಪೂರ್ವಕವಾಗಿ ನಿರ್ವಹಿಸುವ ಅಗತ್ಯವಿಲ್ಲ ಅನ್ನುವುದು ಇಲ್ಲಿನ ಸೂತ್ರ.

ಸೈದ್ಧಾಂತಿಕವಾಗಿ ಜನರನ್ನು ಕೇಂದ್ರವನ್ನಾಗಿ ಮಾಡಿಕೊಂಡಿರುವ ಅಭಿವೃದ್ಧಿ ಪ್ರಣಾಳಿಕೆಯನ್ನು ಯು.ಎನ್.ಡಿ.ಪಿಯು ತನ್ನ ಮೊದಲ ಮಾನವ ಅಭಿವೃದ್ಧಿ ವರದಿಯಲ್ಲಿ ಹೀಗೆ ನಿರ್ವಚಿಸಿದೆ. ಅಭಿವೃದ್ಧಿ ಅನ್ನುವುದು ಜನರ ಬದುಕಿಗೆ ಸಂಬಂಧಿಸಿದ ಆಯ್ಕೆಗಳ ವ್ಯಾಪ್ತಿಯನ್ನು ವಿಸ್ತೃತಗೊಳಿಸುವ ಪ್ರಕ್ರಿಯೆ. ಈ ಸಿದ್ಧಾಂತದ ಪ್ರಕಾರ ಆರ್ಥಿಕ ಅಭಿವೃದ್ಧಿ ಅನ್ನುವುದು ಮಾನವ ಅಭಿವೃದ್ಧಿಯ ಸಾಧನವೇ(ಮೀನ್ಸ್) ವಿನಃ ಅದು ಅದರ ಗುರಿಯಲ್ಲ(ಎಂಡ್). ಅಂದರೆ ಭೌತಿಕ ಸಮೃದ್ಧತೆಗಿಂತ ಇಲ್ಲಿ ಜನರ ಬದುಕಿನ ಸಮೃದ್ಧತೆಗೆ ಆದ್ಯತೆ ನೀಡಲಾಗುತ್ತದೆ. ಮಾನವ ಅಭಿವೃದ್ಧಿ ಅನ್ನುವುದು ತಮ್ಮ ಧಾರಣ ಸಾಮರ್ಥ್ಯವನ್ನು ಉತ್ತಮಪಡಿಸುವುದರ ಮೂಲಕ ಜನರು ತಮ್ಮ ಬದುಕನ್ನು ಉತ್ತಮಪಡಿಸಿಕೊಳ್ಳುವ ಪ್ರಕ್ರಿಯೆಯಾಗಿದೆ. ಜನರು ತಮ್ಮ ಧಾರಣ ಸಾಮರ್ಥ್ಯವನ್ನು ಉತ್ತಮಪಡಿಸಿಕೊಂಡರೆ ಅದರಿಂದ ಇತರೆ ಜನರ ಧಾರಣ ಸಾಮರ್ಥ್ಯವೂ ಉತ್ತಮವಾಗುತ್ತದೆ. ಇದಕ್ಕೆ ಅಗತ್ಯವಾದ ಸಂಗತಿಯೆಂದರೆ ಜನರ ಬದುಕಿನ ಸಮೃದ್ಧತೆಯನ್ನು ಸಾಧ್ಯಮಾಡಿ ಕೊಡುವ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಹಭಾಗಿಗಳಾಗುವುದು. ಇದನ್ನೇ ಸಹಭಾಗಿತ್ವ ಅಭಿವೃದ್ಧಿ ಎಂದು ಕರೆಯಲಾಗಿದೆ. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಭಾಗವಹಿಸುವವರು ಅದರ ಫಲಾನುಭವಿಗಳು ಆಗಬೇಕು.

ಯುಎನ್‌ಡಿಪಿಯ ಮಾನವ ಅಭಿವೃದ್ಧಿ ವರದಿಗಳಲ್ಲಿ ಮತ್ತೆ ಮತ್ತೆ ಗುರುತಿಸುತ್ತಿರುವ ಸಂಗತಿಯೆಂದರೆ ಪ್ರತಿ ಸಮಾಜದಲ್ಲಿಯೂ ಅನೇಕ ಸಾಮಾಜಿಕ ಗುಂಪುಗಳು ಅಭಿವೃದ್ಧಿಯಿಂದ ವಂಚಿತವಾಗಿರುತ್ತವೆ. ಇದಕ್ಕೆ ನಮ್ಮೆದುರಿಗಿರುವ ಉದಾಹರಣೆಯೆಂದರೆ ನಮ್ಮ ಸಮಾಜದಲ್ಲಿನ ದಲಿತರು. ಉದಾಹರಣೆಗೆ ಕರ್ನಾಟಕದ ಒಟ್ಟು ಪ.ಜಾ. ದುಡಿಮೆಗಾರರಲ್ಲಿ(ದಲಿತರ) ಸಾಗುವಳಿಗಾರರ ಪ್ರಮಾಣ ಶೇ. ೧೪.೬೧. ಆದರೆ ಒಟ್ಟು ಜನಸಂಖ್ಯೆಗೆ ಸಂಬಂಧಿಸಿದಂತೆ ಒಟ್ಟು ದುಡಿಮೆಗಾರರಲ್ಲಿ ಸಾಗುವಳಿಗಾರರ ಪ್ರಮಾಣ ಶೇ.೨೩.೨೯. ಸಾಕ್ಷರತೆಗೆ ಸಂಬಂಧಿಸಿದಂತೆಯೂ ಪ.ಜಾ. ಸಮುದಾಯದ ಬಹುಜನರು ವಂಚಿತರಾಗಿದ್ದಾರೆ. ಒಟ್ಟು ಜನಸಂಖ್ಯೆಯ ಸಾಕ್ಷರತಾ

ಪ್ರಮಾಣ ೨೦೧೧ರಲ್ಲಿ ಶೇ.೭೫.೩೬ರಷ್ಟಿದ್ದರೆ ದಲಿತರ(ಪ.ಜಾ.) ಸಾಕ್ಷರತಾ ಪ್ರಮಾಣ ಶೇ.೬೫.೩೨. ಇಲ್ಲಿರುವ ಅಂತರ ಶೇ. ೧೦.೦೪ ಅಂಶಗಳು. ಅಭಿವೃದ್ಧಿಯಲ್ಲಿ ಪ್ರತಿಯೊಬ್ಬರಿಗೂ ಸಮಪಾಲು ದೊರೆಯಬೇಕಾದರೆ ಜನರು ಅದರ ಉತ್ಪಾದನೆಯಲ್ಲಿ ಭಾಗವಹಿಸಬೇಕು. ಹೀಗೆಂದೇ ೨೦೧೬ರ ಯುಎನ್‌ಡಿಪಿ ವರದಿಯಲ್ಲಿ 'ಪ್ರತಿಯೊಬ್ಬರಿಗೂ ಮಾನವ ಅಭಿವೃದ್ಧಿ' ಎಂಬ ಉದ್ದೇಶವನ್ನು ಕೇಂದ್ರ ವಸ್ತುವನ್ನಾಗಿ ಮಾಡಿಕೊಳ್ಳಲಾಗಿದೆ. ಈ ಬಗೆಯ ಸೈದ್ಧಾಂತಿಕ ನೆಲೆಗಟ್ಟಿನಲ್ಲಿ ಕರ್ನಾಟಕದಲ್ಲಿ ಮಾನವ ಅಭಿವೃದ್ಧಿಯನ್ನು ಮತ್ತು ದಲಿತರ(ಪ.ಜಾ) ಮಾನವ ಅಭಿವೃದ್ಧಿಯನ್ನು ಕುರಿತಂತೆ ಚರ್ಚೆ ಮಾಡುವ ಉದ್ದೇಶವಿದೆ. ಹೀಗೆ ಇಲ್ಲಿ ಅಧ್ಯಯನಕ್ಕೆ ಆರಿಸಿಕೊಂಡಿರುವ ವಿಷಯವಸ್ತುವಿನ ಅರ್ಥ ಮಾಡಿಕೊಳ್ಳಬೇಕು.

### ೧.೩.೨. ಧಾರಣ ಸಾಮರ್ಥ್ಯ

ಮಾನವ ಅಭಿವೃದ್ಧಿ ಪ್ರಣಾಳಿಕೆಯಲ್ಲಿ ಉಪಯೋಗಿಸುವ ಪ್ರಮುಖ ಪರಿಭಾವನೆಯೆಂದರೆ ಧಾರಣ ಸಾಮರ್ಥ್ಯ(ಕೆಪಬಲಿಟಿ). ವಾಸ್ತವವಾಗಿ 'ಧಾರಣ ಸಾಮರ್ಥ್ಯದ ವಿಸ್ತೃತತೆ'ಯೇ ಮಾನವ ಅಭಿವೃದ್ಧಿಯ ನಿರ್ವಚನವಾಗಿದೆ. ಅಭಿವೃದ್ಧಿಯು ಸಮಾಜದಲ್ಲಿ ಅವಕಾಶಗಳನ್ನು ಹರಿಯ ಬಿಡುತ್ತದೆ. ಹೀಗೆ ಹರಿದು ಬರುತ್ತಿರುವ ಅವಕಾಶಗಳನ್ನು ತನ್ನದನ್ನಾಗಿ ಮಾಡಿಕೊಳ್ಳುವ ಜನರ ಶಕ್ತಿಯನ್ನು ಇಲ್ಲಿ ಧಾರಣ ಸಾಮರ್ಥ್ಯ ಎಂದು ನಿರ್ವಚಿಸಲಾಗಿದೆ. ಅಭಿವೃದ್ಧಿಯು ಹರಿಯ ಬಿಡುವ ಅವಕಾಶಗಳನ್ನು ದಕ್ಕಿಸಿಕೊಳ್ಳುವ, ಧಾರಣೆ ಮಾಡಿಕೊಳ್ಳುವ ಶಕ್ತಿಯೇ ಧಾರಣ ಸಾಮರ್ಥ್ಯ. ಧಾರಣ ಸಾಮರ್ಥ್ಯವನ್ನು ನಿರ್ಧರಿಸುವ ಸಂಗತಿಗಳೆಂದರೆ ಸಾಕ್ಷರತೆ ಪ್ರಮಾಣ, ಶಿಕ್ಷಣದ ಮಟ್ಟ, ಆರೋಗ್ಯ ಸ್ಥಿತಿಗತಿ, ಘನತೆಯಿಂದ ಕೂಡಿದ ಬದುಕು, ಅಭಿವೃದ್ಧಿಯಲ್ಲಿ ಸಹಭಾಗಿತ್ವದ ಅವಕಾಶಗಳು, ಮಹಿಳೆಯರ ಸ್ಥಿತಿಗತಿಗಳು, ಆಹಾರ ಭದ್ರತೆ, ಪೌಷ್ಟಿಕತೆ, ಆಸ್ತಿಯ ಮಾಲೀಕತ್ವ ಇತ್ಯಾದಿ. ಧಾರಣ ಸಾಮರ್ಥ್ಯವು ಸಮಾಜದಲ್ಲಿ ಎಲ್ಲರೂ ಸಮಾನವಾಗಿರುವುದಿಲ್ಲ. ಯಾರ ಧಾರಣ ಸಾಮರ್ಥ್ಯ ಉನ್ನತವಾಗಿರುತ್ತದೋ ಅವರು ಅಭಿವೃದ್ಧಿಯ ಮೇಲೆ ಹೆಚ್ಚಿನ ಅಧಿಕಾರವನ್ನು ಸ್ಥಾಪಿಸಿ ಬಿಡುತ್ತಾರೆ. ಮಹಿಳೆಯರ ಧಾರಣ ಸಾಮರ್ಥ್ಯವು ಪುರುಷರ ಧಾರಣ ಸಾಮರ್ಥ್ಯಕ್ಕಿಂತ ಕೆಳಮಟ್ಟದಲ್ಲಿರುತ್ತದೆ. ಇದು ಅಭಿವೃದ್ಧಿಯಲ್ಲಿ ಲಿಂಗ ಅಸಮಾನತೆಗೆ ಕಾರಣವಾಗುತ್ತದೆ. ನಮ್ಮ ಸಮಾಜದಲ್ಲಿ ಸಾಂಪ್ರದಾಯಿಕ ವಾಗಿ ಪ್ರತ್ಯೇಕತೆಯನ್ನು ಅನುಭವಿಸುವ ಜನವರ್ಗವಿದೆ. ಈ ಸಾಮಾಜಿಕ ಪ್ರತ್ಯೇಕತೆಯನ್ನು ಅನುಭವಿಸುತ್ತಿರುವ ಜನವರ್ಗದ ಧಾರಣ ಸಾಮರ್ಥ್ಯವು ಸಾಮಾನ್ಯ ಜನವರ್ಗದ ಧಾರಣ ಸಾಮರ್ಥ್ಯಕ್ಕಿಂತ ಕೆಳಮಟ್ಟದಲ್ಲಿರುತ್ತದೆ. ಇದು ನಮ್ಮ ಸಮಾಜದಲ್ಲಿ ಜಾತಿ ಅಸಮಾನತೆಗೆ ಕಾರಣ ವಾಗುತ್ತದೆ. ಮುಂದುವರಿದ ಪ್ರದೇಶಗಳ ಜನರ ಧಾರಣ ಸಾಮರ್ಥ್ಯವು ಹಿಂದುಳಿದ ಪ್ರದೇಶದ ಜನರ ಧಾರಣ ಸಾಮರ್ಥ್ಯಕ್ಕಿಂತ ಉನ್ನತವಾಗಿರುತ್ತದೆ. ಇದನ್ನು ಪ್ರಾದೇಶಿಕ ಅಸಮಾನತೆ ಎಂದು ಕರೆಯಬಹುದು. ಅಸಮಾನತೆಯು ಆರ್ಥಿಕ ಅಭಿವೃದ್ಧಿಯ ಅವಿಭಾಜ್ಯ ಸಂಗತಿಯಾಗಿದೆ. ಈ ಅಸಮಾನತೆಯನ್ನು ತೊಡೆದು ಹಾಕುವುದು ಮಾನವ ಅಭಿವೃದ್ಧಿಯ ಮುಖ್ಯ ಗುರಿಯಾಗಿದೆ.

ಕರ್ನಾಟಕದಲ್ಲಿ ೨೦೧೧ರ ಜನಗಣತಿ ಪ್ರಕಾರ ದಲಿತರ ಸಂಖ್ಯೆ ೧೦೪.೭೫ ಲಕ್ಷ. ಒಟ್ಟು ದಲಿತರ ಸಂಖ್ಯೆಯಲ್ಲಿ ಗ್ರಾಮೀಣವಾಸಿಗಳ ಸಂಖ್ಯೆ ೭೪.೯೬ ಲಕ್ಷವಾದರೆ, ನಗರವಾಸಿಗಳ ಸಂಖ್ಯೆ ೨೯.೭೯ ಲಕ್ಷ. ದಲಿತರ ಜನಸಂಖ್ಯೆಯಲ್ಲಿ ಗ್ರಾಮೀಣ ವಾಸಿಗಳ ಪ್ರಮಾಣ ಶೇ.೭೧.೫೬ರಷ್ಟಾದರೆ ನಗರವಾಸಿಗಳ ಪ್ರಮಾಣ ಶೇ.೨೮.೪೪. ಸಾಮಾನ್ಯ ಜನಸಂಖ್ಯೆಯಲ್ಲಿ ನಗರವಾಸಿಗಳ ಪ್ರಮಾಣ ಶೇ.೩೮.೬೭ರಷ್ಟಿದ್ದರೆ ಗ್ರಾಮೀಣವಾಸಿಗಳ ಪ್ರಮಾಣ ಶೇ.೬೧.೩೩.

ದಲಿತರ ಸ್ಥಿತಿಗತಿಯು ಸಾಮಾನ್ಯರ ಬದುಕಿನ ಸ್ಥಿತಿಗತಿಗಿಂತ ಕೆಳಮಟ್ಟದಲ್ಲಿರಲು ಕಾರಣವೇನು? ಅಭಿವೃದ್ಧಿ ಅನ್ನುವುದು ಸಾಮಾನ್ಯರಿಗೆ ಒಂದು ಬಗೆಯದ್ದಾಗಿ ದಲಿತರಿಗೆ ಮತ್ತೊಂದು ಬಗೆಯದ್ದಾಗಿದೆ ಏಕೆ? ದಲಿತರ ಸಾಕ್ಷರತಾ ಪ್ರಮಾಣ ಸಾಮಾನ್ಯರ ಸಾಕ್ಷರತಾ ಪ್ರಮಾಣಕ್ಕಿಂತ ಕೆಳಮಟ್ಟದಲ್ಲಿದೆ ಏಕೆ? ದಲಿತರ ಅಭಿವೃದ್ಧಿ ಒಳಗೊಳ್ಳುವಿಕೆ ದುರ್ಬಲವಾಗಿದ್ದರೆ ಅದಕ್ಕೆ ಕಾರಣಗಳೇನು? ದಲಿತರ ಪ್ರತ್ಯೇಕೀಕರಣ ಎಂದರೇನು? ಈ ಮಹಾ ಅಧ್ಯಯನದಲ್ಲಿ ಇಂತಹ ಪ್ರಶ್ನೆಗಳಿಗೆ ಉತ್ತರ ಕಂಡು ಕೊಳ್ಳುವುದು ಮುಖ್ಯ. ಅಭಿವೃದ್ಧಿಯ ಯಾವುದೇ ಸೂಚಿಯನ್ನು ತೆಗೆದುಕೊಂಡರೂ ದಲಿತರ ಅಭಿವೃದ್ಧಿಮಟ್ಟವು ದಲಿತೇತರರ ಅಭಿವೃದ್ಧಿಮಟ್ಟಕ್ಕಿಂತ ಕೆಳಗಿರುವುದು ವಿಚಿತ್ರವಾಗಿದೆ.

### ೧.೩.೩. ಅಭಿವೃದ್ಧಿ ಮತ್ತು ಮಾನವ ಹಕ್ಕು

ಮಾನವ ಅಭಿವೃದ್ಧಿ ಮೀಮಾಂಸೆಯ ಮತ್ತೊಂದು ಆಯಾಮವೆಂದರೆ ಅಭಿವೃದ್ಧಿಯನ್ನು ಹಕ್ಕುಗಳ ಪರಿಭಾಷೆಯಲ್ಲಿ ಅರ್ಥ ಮಾಡಿಕೊಳ್ಳುವುದು. ಈ ಮೀಮಾಂಸೆಯ ಪ್ರಕಾರ ಅಭಿವೃದ್ಧಿ ಅನ್ನುವುದು ಜನರ ಹಕ್ಕು. ಅದು ದತ್ತಿದಾನವಲ್ಲ. ವಿಶ್ವಸಂಸ್ಥೆಯು ೧೯೮೬ರಲ್ಲಿ ಅಭಿವೃದ್ಧಿಯನ್ನು ಮಾನವ ಹಕ್ಕನ್ನಾಗಿ ಘೋಷಿಸಿದೆ. ಈ ಘೋಷಣೆಯ ಮೊದಲಿನ ಪರಿಚ್ಛೇದವು ಹೀಗೆ ಅಭಿವೃದ್ಧಿ ಯನ್ನು ನಿರ್ವಚಿಸಿದೆ. 'ಅಭಿವೃದ್ಧಿ ಅನ್ನುವುದು ಜನರಿಂದ ಪ್ರತ್ಯೇಕಗೊಳಿಸಲಾಗದ ಹಕ್ಕಾಗಿದೆ. ಅದರ ಆಧಾರದಲ್ಲಿ ಪ್ರತಿಯೊಬ್ಬ ಮನುಷ್ಯ ಜೀವಿಯೂ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಅಭಿವೃದ್ಧಿಯಲ್ಲಿ ಭಾಗವಹಿಸುವ, ಅದಕ್ಕೆ ಕಾಣಿಕೆ ನೀಡುವ ಮತ್ತು ಅದನ್ನು ಅನುಭವಿಸುವ ಹಕ್ಕುದಾರರಾಗಿರುತ್ತಾರೆ. ಅಲ್ಲಿ ಮಾನವ ಹಕ್ಕುಗಳನ್ನು ಮತ್ತು ಮೂಲಭೂತ ಸ್ವಾತಂತ್ರ್ಯಗಳನ್ನು ಸಂಪೂರ್ಣವಾಗಿ ಸಾಧಿಸಿಕೊಳ್ಳಬಹುದು'. ಈ ನಿರ್ವಚನದಲ್ಲಿ 'ಅಭಿವೃದ್ಧಿಯು ಅನುಭವಿಸುವ ಒಂದು ಸಂಗತಿ' ಎಂಬ ಮಾತು ಮುಖ್ಯ. ಒಂದು ದೇಶ ಅಥವಾ ರಾಜ್ಯ ವರಮಾನದಲ್ಲಿ, ಉತ್ಪಾದನೆಯಲ್ಲಿ, ಬಂಡವಾಳ ಹೂಡಿಕೆಯಲ್ಲಿ ಶ್ರೀಮಂತವಾಗಿರಬಹುದು ಮತ್ತು ಉನ್ನತ ಸ್ಥಾನದಲ್ಲಿರಬಹುದು. ಆದರೆ ಅದರ ಫಲಗಳನ್ನು ಜನರು ಅನುಭವಿಸುವುದಕ್ಕೆ ಸಾಧ್ಯವಿಲ್ಲದಿದ್ದರೆ ಅದರಿಂದ ಏನು ಪ್ರಯೋಜನ? ಇದು ಮಾನವ ಅಭಿವೃದ್ಧಿ ಪ್ರಣಾಳಿಕೆಯು ಎತ್ತುವ ಪ್ರಶ್ನೆಯಾಗಿದೆ. ಕರ್ನಾಟಕದ ವರಮಾನ ಉತ್ತಮವಾಗಿದೆ. ಆದರೆ ದಲಿತರ ವರಮಾನವು ಉಳಿದ ಸಾಮಾನ್ಯ ಜನರ ವರಮಾನಕ್ಕಿಂತಲೂ ಕೆಳಮಟ್ಟದಲ್ಲಿದೆ. ಅವರ ಸಾಕ್ಷರತೆಯ ಸಾಮಾನ್ಯ ಸಾಕ್ಷರತೆ ಪ್ರಮಾಣಕ್ಕಿಂತ ಕೆಳಮಟ್ಟದಲ್ಲಿದೆ. ಇದರ ಅರ್ಥ ಅಭಿವೃದ್ಧಿಯನ್ನು ಸಮಾಜದ ಎಲ್ಲರೂ ಅನುಭವಿಸುವುದು

ಸಾಧ್ಯವಾಗಿಲ್ಲ. ಏಕೆ? ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ಪ್ರಯತ್ನವೇ ಸದ್ಯದ ಅಧ್ಯಯನ. ಅಮರ್ತ್ಯಸೇನ್ ಪ್ರಕಾರ ಹಕ್ಕು ಅನ್ನುವುದು ಅಂತಿಮವಾಗಿ ನೈತಿಕತೆಯ ಪ್ರಶ್ನೆಯಾಗಿದೆ. ಹಕ್ಕಿನ ಪರಿಭಾಷೆಯಲ್ಲಿ ಬಡತನ, ಹಸಿವು, ತಾರತಮ್ಯಗಳನ್ನು 'ಸ್ವಾತಂತ್ರ್ಯವನ್ನು ಸೀಮಿತಗೊಳಿಸುವ ಸಂಗತಿಗಳನ್ನಾಗಿ ಪರಿಭಾವಿಸಿಕೊಳ್ಳಲಾಗುತ್ತದೆ. ಹಕ್ಕುಗಳು ಎರಡು ಬಗೆ. ಮೊದಲನೆಯವು ನೆಗೆಟಿವ್ ಹಕ್ಕುಗಳು ಅಥವಾ ರಾಜಕೀಯ ಮತ್ತು ನಾಗರಿಕ ಹಕ್ಕುಗಳು. ಇವುಗಳನ್ನು ಮೊದಲ ತಲೆಮಾರಿನ ಹಕ್ಕುಗಳೆಂದು ಕರೆಯಲಾಗಿದೆ. ಆದರೆ ಅಭಿವೃದ್ಧಿಯ ಪರಿಧಿಯಲ್ಲಿ ಹಕ್ಕುಗಳು ಪಾಜಿಟಿವ್ ಹಕ್ಕು ಆಗಲು. ಇವು ಎರಡನೆಯ ತಲೆ ಮಾರಿನ ಹಕ್ಕುಗಳು. ಆಹಾರದ ಹಕ್ಕು, ಶಿಕ್ಷಣದ ಹಕ್ಕು, ಆರೋಗ್ಯದ ಹಕ್ಕು ಮುಂತಾದವು ಪಾಸಿಟಿವ್ ಹಕ್ಕು. ಯು.ಎನ್.ಡಿ.ಪಿ.ಯು ಪ್ರಕಟಿಸಿರುವ ೨೦೦೦ ಮಾನವ ಅಭಿವೃದ್ಧಿ ವರದಿಯ ವಿಷಯವಸ್ತು 'ಮಾನವ ಅಭಿವೃದ್ಧಿ ಮತ್ತು ಮಾನವ ಹಕ್ಕುಗಳು'. ಈ ವರದಿಯ ಪ್ರಕಾರ ಮಾನವ ಅಭಿವೃದ್ಧಿ ಮತ್ತು ಮಾನವ ಹಕ್ಕುಗಳ ಒಂದೇ ಆಶಯವನ್ನು ಮತ್ತು ಸಮಾನ ಉದ್ದೇಶವನ್ನು ಹೊಂದಿರುವ ಪ್ರಣಾಳಿಕೆಗಳಾಗಿವೆ. ಅವುಗಳಾವುವೆಂದರೆ ಎಲ್ಲರಿಗೂ ಸ್ವಾತಂತ್ರ್ಯವನ್ನು, ಸಮೃದ್ಧತೆಯನ್ನು ಮತ್ತು ಘನತೆಯನ್ನು ದೊರಕಿಸಿಕೊಡುವುದು.

ಈ ಬಗೆಯ ಅಧ್ಯಯನವು ಮುಖ್ಯ ಏಕೆಂದರೆ ಬಾಬಾ ಸಾಹೇಬ್ ಡಾ. ಬಿ.ಆರ್. ಅಂಬೇಡ್ಕರ್ ಹೇಳಿದಂತೆ ಅಭಿವೃದ್ಧಿ ಅನ್ನುವುದು ಜನರ ಘನತೆಯಿಂದ ಬದುಕುವ ಪ್ರಕ್ರಿಯೆಗೆ ಸಂಬಂಧಿಸಿದ ಸಂಗತಿಯಾಗಿದೆ.

### ೧.೪. ದಲಿತ ಮಾನವ ಅಭಿವೃದ್ಧಿ ಮತ್ತು ದುಸ್ಥಿತಿ ಅಧ್ಯಯನ

ಈಗಾಗಲೆ ತಿಳಿಸಿರುವಂತೆ ಪ್ರಸ್ತುತ ಅಧ್ಯಯನವು ಮಾನವ ಅಭಿವೃದ್ಧಿ ಹಿನ್ನೆಯಲ್ಲಿ ಕರ್ನಾಟಕದಲ್ಲಿನ ದಲಿತರ ಅಭಿವೃದ್ಧಿ ಸ್ಥಿತಿಗತಿಯ ಅಧ್ಯಯನವಾಗಿದೆ. ಅಭಿವೃದ್ಧಿ ಯಾವುದೇ ಸೂಚಿಯನ್ನು ತೆಗೆದುಕೊಂಡರೂ ದಲಿತರ ಸ್ಥಿತಿಗತಿಯು ಸಾಮಾನ್ಯ ವರ್ಗದ ಬದುಕಿನ ಸ್ಥಿತಿಗತಿಗಿಂತ ಕೆಳಮಟ್ಟದಲ್ಲಿರುವುದನ್ನು ಅಧ್ಯಯನದಲ್ಲಿ ತೋರಿಸಲಾಗಿದೆ. ಆದರೆ ಇಲ್ಲಿ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ರಚಿಸಲು ಸಾಧ್ಯವಾಗಿಲ್ಲ. ಏಕೆಂದರೆ ಪ.ಜಾ.ಗೆ ಸಂಬಂಧಿಸಿದಂತೆ ಮಾನವ ಅಭಿವೃದ್ಧಿ ಸೂಚಿಗಳ ಅಂಕಿಅಂಶಗಳು ದೊರೆಯುವುದಿಲ್ಲ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ದಲಿತರ ಅಭಿವೃದ್ದಿ ಸೂಚಿಗಳಿಗೆ ಗಮನ ನೀಡಿ ಅವರ ಸ್ಥಿತಿಗತಿಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಆದ್ದರಿಂದ ಇಲ್ಲಿ ಮಾನವ ಅಭಿವೃದ್ಧಿ ಬಗ್ಗೆ ಹೆಚ್ಚು ವಿವರಗಳಿದ್ದರೂ ಇದು ಪ್ರಧಾನವಾಗಿ ದಲಿತರ ಮಾನವ ಅಭಿವೃದ್ಧಿ ಅಧ್ಯಯನವಾಗಿದೆ. ಅವರ ಸಾಕ್ಷರತೆ, ಆರೋಗ್ಯ, ಆಸ್ತಿ ಮಾಲೀಕತ್ವ, ಉದ್ಯೋಗ, ದಾಖಲಾತಿ ಮುಂತಾದ ಸಂಗತಿಗಳನ್ನು ಆಧಾರ ಮಾಡಿಕೊಂಡು ಅಧ್ಯಯನವನ್ನು ನಡೆಸಲಾಗಿದೆ. ಮೇಲು ನೋಟಕ್ಕೆ ಇದು ಸಾಮಾನ್ಯ ಮಾನವ ಅಭಿವೃದ್ದಿ ಅಧ್ಯಯನದಂತೆ ಕಂಡರೂ ಇಲ್ಲಿ ದಲಿತರ ಮಾನವ ಅಭಿವೃದ್ಧಿ ಸೂಚಿಗಳಿಗೆ ಗಮನ ನೀಡಿ ಚರ್ಚೆ ಮಾಡಲಾಗಿದೆ. ಇಲ್ಲಿ ನಮಗೆ ದಲಿತರ ಬಗ್ಗೆ ಮಾನವ ಅಭಿವೃದ್ದಿ ಸ್ಪಂದಿ ಸೂಚಿಗಳ ಬಗ್ಗೆ ಮಾಹಿತಿ ಹೆಚ್ಚು ದೊರೆಯಲಿಲ್ಲ.

**೧.೫. ಅಧ್ಯಯನಗಳ ಸಮೀಕ್ಷೆ**

ಮಾನವ ಅಭಿವೃದ್ಧಿ ಮೀಮಾಂಸೆಯಲ್ಲಿ ಪರಿಗಣಿಸುವ ಸೂಚಿಗಳೆಂದರೆ ಸಾಕ್ಷರತೆ, ಶಿಕ್ಷಣ, ಆರೋಗ್ಯ ಮತ್ತು ಜೀವನಮಟ್ಟ, ಮಾನವ ಅಭಿವೃದ್ಧಿ ಸೂಚ್ಯಂಕದ ಗಣನೆಗೆ ಬಳಸುವ ಸೂಚಿಗಳೆಂದರೆ ಸಾಕ್ಷರತೆ, ಶಾಲಾ ದಾಖಲಾತಿ, ಜೀವನಾಯುಷ್ಯ ಅಥವಾ ಶಿಶು ಮರಣ ಪ್ರಮಾಣ, ವರಮಾನ, ಜೀವನಮಟ್ಟ ಇತ್ಯಾದಿ. ಈ ವಿಷಯಗಳಿಗೆ ಸಂಬಂಧಿಸಿದಂತೆ ಅಧ್ಯಯನಗಳ ಸಮೀಕ್ಷೆಯನ್ನು ಮಾಡಲಾಗಿದೆ.

ಈ ಅಧ್ಯಯನಗಳ ಸಮೀಕ್ಷೆಯನ್ನು ಮೂರು ಭಾಗಗಳಲ್ಲಿ ಮಾಡಲಾಗಿದೆ. ಮೊದಲನೆಯದು ವರಮಾನ ಮತ್ತು ಮಾನವ ಅಭಿವೃದ್ಧಿ ನಡುವಿನ ಸಂಬಂಧ ಎರಡನೆಯದು ಮಾನವ ಅಭಿವೃದ್ಧಿ ಕುರಿತ ಸೈದ್ಧಾಂತಿಕ ಅಧ್ಯಯನಗಳು ಮತ್ತು ಮೂರನೆಯದಾಗಿ ಆರೋಗ್ಯಕ್ಕೆ ಸಂಬಂಧಿಸಿದ ಅಧ್ಯಯನಗಳನ್ನು ಪರಿಶೀಲಿಸಲಾಗಿದೆ.

**೧.೫.೧. ವರಮಾನ ಮತ್ತು ಮಾನವ ಅಭಿವೃದ್ಧಿ ಅಧ್ಯಯನಗಳು**

೧೯೯೦ರಿಂದ ಯು.ಎನ್.ಡಿ.ಪಿ.ಯು ಮಾನವ ಅಭಿವೃದ್ಧಿ ವರದಿಗಳನ್ನು ಪ್ರಕಟಪಡಿಸುತ್ತಾ, ಆರ್ಥಿಕ ಬೆಳವಣಿಗೆಯು ತನ್ನಿಂದ ತಾನೇ ಮಾನವ ಅಭಿವೃದ್ಧಿಯಾಗಿ ಪರಿವರ್ತನೆಗೊಳ್ಳುವುದಿಲ್ಲ. ಅದಕ್ಕಾಗಿ ಸರ್ಕಾರಗಳ ಪ್ರಜ್ಞಾಪೂರ್ವಕ ಪಾಲ್ಗೊಳ್ಳುವ ವಿಚಾರವನ್ನು ಸಾರುತ್ತಲೇ ಬಂದಿವೆ. ೧೯೯೫ರ ಮಾನವ ಅಭಿವೃದ್ಧಿ ವರದಿಯು ಅಭಿವೃದ್ಧಿಯ ಲಿಂಗಸಂವೇದಿಯಾಗಿರದಿದ್ದರೆ ಅದು ಅಪಾಯಕಾರಿಯಾಗುತ್ತದೆ ಎಂಬ ಎಚ್ಚರಿಕೆಯನ್ನು ನೀಡಿದೆ. "Eradicating poverty every where is more than a moral imperative it is a practical possiblity" ಎಂಬುದು ೧೯೯೭ರ ಮಾನವ ಅಭಿವೃದ್ಧಿ ವರದಿಯ ಅಭಿಪ್ರಾಯವಾಗಿದೆ. ಮಾನವ ಅಭಿವೃದ್ಧಿ ವರದಿಗಳಲ್ಲಿ ಇದುವರೆವಗೂ ಮೂರು ಬಗೆಯ ಸೂಚ್ಯಂಕಗಳನ್ನು ರಚಿಸಿ ಅಭಿವೃದ್ಧಿಯನ್ನು ಮಾಪನ ಮಾಡುತ್ತಾ ಬರಲಾಗಿದೆ. ಅವುಗಳು ಯಾವುವೆಂದರೆ, ೧. ಮಾನವ ಅಭಿವೃದ್ಧಿ ಸೂಚ್ಯಂಕ (ಎಚ್.ಡಿ.ಐ), ೨. ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕ (ಜಿಡಿಐ) ಮತ್ತು ೩. ರಾಜಕೀಯ ಸಬಲೀಕರಣದ ಮಾಪನ.

೧೯೯೭ರ ಮಾನವ ಅಭಿವೃದ್ಧಿ ವರದಿಯಲ್ಲಿ ಜಗತ್ತಿನ ೧೭೫ ರಾಷ್ಟ್ರಗಳಿಗೆ ಸಂಬಂಧಿಸಿದಂತೆ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ನೀಡಲು ಅದರಲ್ಲಿ ಕೆನಡಾ, ಫ್ರಾನ್ಸ್, ನಾರ್ವೆ, ಯುಎಸ್‌ಎ ಮತ್ತು ಐಲ್ಯಾಂಡ್ ರಾಷ್ಟ್ರಗಳು ಕ್ರಮವಾಗಿ ಮೊದಲ ಐದು ಸ್ಥಾನಗಳನ್ನು ಹೊಂದಿದ್ದರೆ ಮಾಲಿ(Mali), ಬುರ್‌ಕಿನಾ(Burkina) ನೈಜರ್(Niger) ರೆವೆಂಡಾ, ಸಿಯಿರಾ ರಾಷ್ಟ್ರಗಳು ಕೊನೆಯ ಐದು ಸ್ಥಾನಗಳ ರಾಷ್ಟ್ರಗಳಾಗಿವೆ. ಈ ವರದಿಯಲ್ಲಿ ಜಾಗತಿಕ ರಾಷ್ಟ್ರಗಳನ್ನು ಅಧಿಕ, ಮಧ್ಯಮ, ಕಡಿಮೆ ಮಾನವ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಾಗಿ ವಿಭಾಗಿಸಲಾಗಿದೆ. ೧೭೫ ರಾಷ್ಟ್ರಗಳಲ್ಲಿ ೬೪ ರಾಷ್ಟ್ರಗಳು ಅಧಿಕ ಮಾನವ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಾಗಿದ್ದರೆ, ೬೬ ದೇಶಗಳು ಮಧ್ಯಮ ಮಾನವ ಅಭಿವೃದ್ಧಿ ಸಾಧಿಸಿರುವ ರಾಷ್ಟ್ರಗಳ ಸರದಿಯಲ್ಲಿ ಬರುತ್ತವೆ. ಭಾರತ ೧೩೮ನೇ ಸ್ಥಾನ ಪಡೆದು,

ಕಡಿಮೆ ಮಾನವ ಅಭಿವೃದ್ಧಿ ಹೊಂದಿರುವ ೪೫ ರಾಷ್ಟ್ರಗಳಲ್ಲಿ ಒಂದಾಗಿದೆ (**ಹೆಚ್‌ಡಿಆರ್, ೧೯೯೭; ೧೪೬-೪೭**). ಮಾನವ ಅಭಿವೃದ್ಧಿ ವರದಿಗಳಲ್ಲಿ ಜಗತ್ತಿನ ೧೪೬ ರಾಷ್ಟ್ರಗಳಿಗೆ ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕವನ್ನು ನೀಡಲಾಗಿದೆ. ೧೯೯೭ರ ಮಾನವ ಅಭಿವೃದ್ಧಿ ವರದಿಯಲ್ಲಿರುವ ೫೫, ಮತ್ತು ೩೬ ರಾಷ್ಟ್ರಗಳು ಕ್ರಮವಾಗಿ ಉತ್ತಮ, ಮಧ್ಯ ಮತ್ತು ಕಡಿಮೆ ಲಿಂಗಸಂಬಂಧಿ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಾಗಿವೆ. ಇದರಲ್ಲಿ ಭಾರತದ ಸ್ಥಾನ ೧೧೮ನೆಯದ್ದಾಗಿದೆ(ಹೆಚ್‌ಡಿಆರ್, ೧೯೯೭;೧೫೧). ಇದೇ ವರದಿಯಲ್ಲಿ ವಿಶ್ವದ ೯೪ ರಾಷ್ಟ್ರಗಳ ಲಿಂಗ ಸಶಕ್ತೀಕರಣ ಮಾಪನ(GEM)ವನ್ನು ನೀಡಲಾಗಿದೆ. ಈ ೯೪ ರಾಷ್ಟ್ರಗಳಲ್ಲಿ ಸಿಯಾರ್ ಕೊನೆಯ ಸ್ಥಾನದಲ್ಲಿದ್ದರೆ, ನಾರ್ವೆ ಮೊದಲ ಸ್ಥಾನದಲ್ಲಿದೆ. ೪೫ ರಾಷ್ಟ್ರಗಳು ಉನ್ನತ ಮಟ್ಟದ ಲಿಂಗ ಸಶಕ್ತೀಕರಣ ಹೊಂದಿರುವ ಮತ್ತು ೩೧ ರಾಷ್ಟ್ರಗಳು ಕಡಿಮೆ ಲಿಂಗ ಸಶಕ್ತೀಕರಣ ಹೊಂದಿರದ ರಾಷ್ಟ್ರಗಳಾಗಿವೆ. ಇದರಲ್ಲಿ ಭಾರತವು ೮೬ನೇ ಸ್ಥಾನವನ್ನು ಪಡೆದುಕೊಂಡಿದೆ. ಮಾನವ ಅಭಿವೃದ್ಧಿ ಪ್ರಣಾಳಿಕೆಯ ಪ್ರವರ್ತಕ ಮೆಹಬೂಬ್-ಉಲ್-ಹಕ್ ರವರ ನೇತೃತ್ವದಲ್ಲಿ ದಕ್ಷಿಣ ಏಷ್ಯಾ ರಾಷ್ಟ್ರಗಳ ಮಾನವ ಅಭಿವೃದ್ಧಿ ವರದಿಗಳನ್ನು ರಚಿಸಲಾಗಿದೆ. "ದಕ್ಷಿಣ ಏಷ್ಯಾದಲ್ಲಿ ಮಾನವ ಅಭಿವೃದ್ಧಿ-೧೯೯೭"ರಲ್ಲಿ ದಕ್ಷಿಣ ಏಷ್ಯಾದ ೭ ರಾಷ್ಟ್ರಗಳ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಅಭಿವೃದ್ಧಿ ಪಡಿಸಲಾಗಿದೆ.

ಈ ಏಳು ರಾಷ್ಟ್ರಗಳಲ್ಲಿ ಶ್ರೀಲಂಕಾ ಮಾನವ ಅಭಿವೃದ್ಧಿಯಲ್ಲಿ(೦.೬೯೮ರಷ್ಟು ಮೌಲ್ಯ) ಪ್ರಥಮ ಸ್ಥಾನದಲ್ಲಿದ್ದರೆ, ನೇಪಾಳ (೦.೩೩೫) ಕೊನೆಯ ಸ್ಥಾನದಲ್ಲಿದೆ(ಹಕ್, ೧೯೯೭;೨೮). ಈ ವರದಿಯು ತಿಳಿಸುವಂತೆ, ಜನಸಂಖ್ಯಾ ಬೆಳವಣಿಗೆಯ ನಡುವೆ ದಕ್ಷಿಣ ಏಷ್ಯಾ ದೇಶಗಳಲ್ಲಿ ವರಮಾನವು ವೃದ್ಧಿಗೊಂಡಿದೆ. ಆದರೆ ಸರಕಾರದ ನೀತಿಗಳ ದೋಷದಿಂದಾಗಿ ಅಧಿಕ ವರಮಾನ ಅಥವಾ ಉಚ್ಛ್ರಾಯ ಸ್ಥಿತಿ ಜನಸಾಮಾನ್ಯರ ಬಾಳಿನಲ್ಲಿ ಪ್ರತಿಫಲನಗೊಂಡಿಲ್ಲ. ಈ ರಾಷ್ಟ್ರಗಳು ವರಮಾನದ ಏರಿಕೆಯಲ್ಲಿ ತೋರಿಸಿದ ಸ್ಥಿತಿಸ್ಥಾಪಕತೆಯನ್ನು ಮಾನವ ಅಭಿವೃದ್ಧಿಯಲ್ಲಿ ತೋರಿಸಿಲ್ಲ (ಶ್ರೀಲಂಕ ಹೊರತುಪಡಿಸಿ). ಈ ರಾಷ್ಟ್ರಗಳಲ್ಲಿ ಲಿಂಗತಾರತಮ್ಯ ಜಾಸ್ತಿಯಿದ್ದು, ಅದನ್ನು ತೊಲಗಿಸ ಬೇಕೆಂದು ಈ ವರದಿ ಒತ್ತಿ ಹೇಳಿದೆ. ದಕ್ಷಿಣ ಏಷ್ಯಾ ರಾಷ್ಟ್ರಗಳ ವರಮಾನದಷ್ಟೆ ವರಮಾನ ಹೊಂದಿರುವ ರಾಷ್ಟ್ರಗಳು, ಈ ರಾಷ್ಟ್ರಗಳಿಗಿಂತಲೂ ಅಧಿಕ ಮಾನವ ಅಭಿವೃದ್ಧಿ ಇರುವುದನ್ನು ಈ ವರದಿಯು ತಿಳಿಸುತ್ತದೆ. (ಉದಾಹರಣೆಗೆ ಭಾರತ-ವಿಯಟ್ನಾಂ ಪಾಕಿಸ್ತಾನ-ಗಾಯನ) ಕೆಲವು ರಾಷ್ಟ್ರಗಳ ವರಮಾನವು ಮಾನವ ಅಭಿವೃದ್ಧಿಯಾಗಿ ಪರಿವರ್ತನೆ ಯಾಗಬೇಕಾದ ಅವಶ್ಯಕತೆಯನ್ನು ಒತ್ತಿ ಹೇಳುತ್ತದೆ.

ಇದೇ ವರದಿಯಲ್ಲಿ ಭಾರತದ ೧೫ ರಾಜ್ಯಗಳ ೧೯೯೩ರ ಅಂಕಿ-ಅಂಶಗಳನ್ನು ಬಳಸಿ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಅಭಿವೃದ್ಧಿಪಡಿಸಲಾಗಿದೆ(ಪು.೧೧೬). ಕೇರಳ ಅಧಿಕ ಮಾನವ ಅಭಿವೃದ್ಧಿ ಸೂಚ್ಯಂಕ(೦.೫೯೭)ದೊಂದಿಗೆ ದೇಶದಲ್ಲಿ ಮೊದಲ ಸ್ಥಾನದಲ್ಲಿದೆ. ಇದು ಅಂತರರಾಷ್ಟ್ರೀಯ ಮಟ್ಟದಲ್ಲಿ ಚೀನಾ ದೇಶಕ್ಕಿಂತಲೂ ಉತ್ತಮ ಸ್ಥಾನ ಪಡೆದಿದೆ. ಮಧ್ಯಪ್ರದೇಶ, ಮಾನವ ಅಭಿವೃದ್ಧಿಯಲ್ಲಿ

೦.೩೪೧ ಮೌಲ್ಯ ಪಡೆದಿದ್ದು, ಭಾರತದಲ್ಲಿ ಅತ್ಯಂತ ಕಡಿಮೆ ಮಾನವ ಅಭಿವೃದ್ಧಿ ಸೂಚ್ಯಂಕ ಹೊಂದಿರುವ ರಾಜ್ಯವಾಗಿದ್ದು, ಇದು ಅಂತರರಾಷ್ಟ್ರೀಯ ಮಟ್ಟದಲ್ಲಿ ಉಗಾಂಡಾ ದೇಶದ ಸ್ಥಾನಕ್ಕೆ ಬರುತ್ತದೆ. ಕರ್ನಾಟಕ ೦.೪೪೨ ಮಾನವ ಅಭಿವೃದ್ಧಿ ಸೂಚ್ಯಂಕದ ಮೌಲ್ಯದೊಂದಿಗೆ ೮ನೇ ಸ್ಥಾನದಲ್ಲಿದೆ. ೧೯೯೭ರ ದಕ್ಷಿಣ ಏಷ್ಯಾಗಳಲ್ಲಿ ಮಾನವ ಅಭಿವೃದ್ಧಿ ಅಧ್ಯಯನದಲ್ಲಿ ಭಾರತದಲ್ಲಿಯ ಭೂಸುಧಾರಣೆ, ದಲಿತರಿಗೆ ನೀಡಿರುವ ಅವಕಾಶಗಳ ಬಗ್ಗೆ ಮೆಚ್ಚುಗೆಯನ್ನು ಸೂಚಿಸಲಾಗಿದೆ. ಅದೇ ವೇಳೆಗೆ ಇಲ್ಲಿರುವ ದುಸ್ಥಿತಿಯನ್ನು ಸಹ ವಿವರಿಸಿದೆ. ಉದಾಹರಣೆಗೆ ಜಗತ್ತಿನಲ್ಲಿಯೇ ಅತ್ಯಧಿಕ ಅನಕ್ಷರಸ್ಥರನ್ನು ಹೊಂದಿರುವ ರಾಷ್ಟ್ರವೆಂದರೆ ಭಾರತ(ಪು.೩೧). ಭಾರತದಲ್ಲಿರುವ ಉದ್ಯೋಗ ರಹಿತ ಬೆಳವಣಿಗೆ(Jobless growth) ಬಗ್ಗೆ ಕಳವಳ ವ್ಯಕ್ತಪಡಿಸಿರುವ ಈ ಅಧ್ಯಯನವು, ಭಾರತದಲ್ಲಿ ಆರ್ಥಿಕ ಬೆಳವಣಿಗೆಯು–ಮಾನವ ಅಭಿವೃದ್ಧಿಯಾಗಿ ಪರಿವರ್ತಿತಗೊಳ್ಳಬೇಕಾದರೆ ಉದ್ಯೋಗಾವಕಾಶಗಳು ಸೃಷ್ಟಿಯಾಗಬೇಕು ಮತ್ತು ಶಿಕ್ಷಣ, ಆರೋಗ್ಯಗಳ ಮೇಲೆ ಅಧಿಕ ಬಂಡವಾಳ ವಿನಿಯೋಗವಾಗಬೇಕಾಗಿದೆ ಎಂಬುವುದನ್ನು ಎತ್ತಿ ಹಿಡಿದಿದೆ.

ಶ್ರೀಲಂಕಾ ಮಾನವ ಅಭಿವೃದ್ಧಿಯಲ್ಲಿ ಪವಾಡಸದೃಶ ಸಾಧನೆಯನ್ನು ಮಾಡಿದೆ. ಈ ಸಾಧನೆಯ ಹಿಂದಿರುವ ಸಂಗತಿಗಳನ್ನು 'ದಕ್ಷಿಣ ಏಷ್ಯಾ ರಾಷ್ಟ್ರಗಳಲ್ಲಿ ಮಾನವ ಅಭಿವೃದ್ಧಿ ವರದಿ ೧೯೯೭'ರಲ್ಲಿ ದಾಖಲಿಸಿದೆ. ಮಾನವ ಅಭಿವೃದ್ಧಿಯ ದೃಷ್ಟಿಯಲ್ಲಿ 'ಶ್ರೀಲಂಕಾ' ದಕ್ಷಿಣ ಏಷ್ಯಾ ರಾಷ್ಟ್ರಗಳಲ್ಲಿಯೇ ಉನ್ನತ ಸ್ಥಾನದಲ್ಲಿದೆ. ಶ್ರೀಲಂಕಾ ಮಾನವ ಅಭಿವೃದ್ಧಿಯಲ್ಲಿ ಇತರ ರಾಷ್ಟ್ರಗಳಿಗೆ ಮಾದರಿಯಾಗಿದೆ. "ಇಲ್ಲಿಯ ಸಾಕ್ಷರತಾ ಪ್ರಮಾಣ ಶೇ.೯೦. ಪ್ರಾಥಮಿಕ ಶಾಲೆಗಳಲ್ಲಿ ದಾಖಲಾತಿ ಪ್ರಮಾಣ ಶೇ. ೯೦ ಸಾಕ್ಷರತೆ, ಶಾಲಾ ದಾಖಲಾತಿಗಳಲ್ಲಿ ಅಧಿಕ ಲಿಂಗ ತಾರತಮ್ಯಗಳಿಲ್ಲ. ಶೇ. ೯೩ರಷ್ಟು ಜನತೆಗೆ ಆರೋಗ್ಯ ಸೌಲಭ್ಯಗಳು ದೊರೆಯುತ್ತಿವೆ" ಇವೆಲ್ಲವೂ ಅಲ್ಲಿಯ ಸರಕಾರಗಳ ಪ್ರಜ್ಞಾಪೂರ್ವಕ ನೀತಿಗಳಿಂದ ಸುಧಾರಣೆಯಾಗಿದೆ. ಇಲ್ಲಿಯ ಪ್ರಭುತ್ವ ಕಳೆದ ಐದು ದಶಕಗಳಿಂದಲೂ ಸಾಮಾಜಿಕ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಅಧಿಕ ಬಂಡವಾಳವನ್ನು ವಿನಿಯೋಗ ಮಾಡುತ್ತಿವೆ. ತಮಿಳರು ಸಿಂಹಳೀಯರ ನಡುವೆ ೧೯೫೦ರಿಂದಲೂ ಇದುವರೆಗೂ ಜನಾಂಗೀಯ ಘರ್ಷಣೆಗಳಿಂದ್ದರೂ ದೇಶದ ಮಾನವ ಅಭಿವೃದ್ಧಿಯಲ್ಲಿ ಪ್ರಗತಿ ಸಾಧಿಸಿರುವುದು ಒಂದು ಪವಾಡವೆಂದು ಹೇಳಬಹುದು. ಆದರೆ ದುರಾದೃಷ್ಟವೆಂದರೆ, ಹೆಚ್ಚಾದ ಮಾನವ ಅಭಿವೃದ್ಧಿಯನ್ನು ಕಾಯ್ದುಕೊಳ್ಳಲು ಅಲ್ಲಿ ವರಮಾನವು ಸಾಕಷ್ಟು ಪ್ರಮಾಣದಲ್ಲಿ ಅಧಿಕಗೊಳ್ಳುತ್ತಿಲ್ಲ. ಶ್ರೀಲಂಕಾ ರಾಷ್ಟ್ರಕ್ಕೆ ಮಾನವ ಅಭಿವೃದ್ಧಿ ಮತ್ತು ಆರ್ಥಿಕ ಬೆಳವಣಿಗೆ ನಡುವೆ ಸಮತೋಲನ ಕಾಯ್ದುಕೊಂಡು ಬರಲು ಆಗುತ್ತಿಲ್ಲ. ಶ್ರೀಲಂಕಾ ದೇಶ ಮಾನವ ಅಭಿವೃದ್ಧಿ ಮತ್ತು ಆರ್ಥಿಕ ಬೆಳವಣಿಗೆ ನಡುವೆ ಸಮತೋಲನ ಕಾಯ್ದುಕೊಳ್ಳಬೇಕಾದ ಅವಶ್ಯಕತೆಯನ್ನು ಈ ವರದಿ ಸ್ಪಷ್ಟಪಡಿಸಿದೆ.

**ಪಾಪುಲೇಶನ್ ಪೌಂಡೇಷನ್ ಆಫ್ ಇಂಡಿಯಾ** (೧೯೯೮)ದವರು ಭಾರತದ ೧೫ ರಾಜ್ಯಗಳ ಮಾನವ ಅಭಿವೃದ್ಧಿ ಸೂಚ್ಯಂಕ, ಲಿಂಗಸಂಬಂಧಿ ಆರೋಗ್ಯ ಸೂಚ್ಯಂಕ, ಪ್ರಜಾನೋತ್ಪತ್ತಿ ಆರೋಗ್ಯ

ಸೂಚ್ಯಂಕಗಳನ್ನು ಅಭಿವೃದ್ಧಿಪಡಿಸಿದ್ದಾರೆ. ಈ ಅಧ್ಯಯನದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ, ಭಾರತದ ರಾಜ್ಯಗಳಲ್ಲಿ ಕೇರಳ ಮೊದಲ ಸ್ಥಾನದಲ್ಲಿದೆ. ಹರಿಯಾಣ, ಹಿಮಾಚಲ ಪ್ರದೇಶ, ಮಹಾರಾಷ್ಟ್ರ, ಪಂಜಾಬ್, ತಮಿಳುನಾಡು ರಾಜ್ಯಗಳು ಮಾನವ ಅಭಿವೃದ್ಧಿ ಸಾಧಿಸಿರುವ ರಾಜ್ಯಗಳಾಗಿವೆ. ಉಳಿದ ರಾಜ್ಯಗಳು ಕಡಿಮೆ ಮಾನವ ಅಭಿವೃದ್ಧಿ ಹೊಂದಿರುವ ರಾಜ್ಯಗಳಾಗಿವೆ. ಅಸ್ಸಾಂ, ಹಿಮಾಚಲ ಪ್ರದೇಶ, ಕೇರಳ, ಒರಿಸ್ಸಾ, ತಮಿಳುನಾಡು ಮತ್ತು ಪಶ್ಚಿಮ ಬಂಗಾಳ ರಾಜ್ಯಗಳ ಆಂತರಿಕ ಉತ್ಪನ್ನದಲ್ಲಿ ಹೊಂದಿರುವ ಸ್ಥಾನಗಳಿಗಿಂತಲೂ ಮಾನವ ಅಭಿವೃದ್ಧಿಯಲ್ಲಿ ಉನ್ನತ ಸ್ಥಾನ ಪಡೆದಿದೆ. ಬಿಹಾರ, ಉತ್ತರ ಪ್ರದೇಶ ಮತ್ತು ಮಹಾರಾಷ್ಟ್ರ ರಾಜ್ಯಗಳು ಮಾನವ ಅಭಿವೃದ್ಧಿ ಮತ್ತು ರಾಜ್ಯ ಆಂತರಿಕ ಉತ್ಪನ್ನಗಳೆರಡರಲ್ಲಿಯೂ ಏಕರೂಪವಾದ ಸ್ಥಾನ ಪಡೆದಿವೆ. ಆಂಧ್ರಪ್ರದೇಶ, ಗುಜರಾತ್, ಹರಿಯಾಣ, ಕರ್ನಾಟಕ, ಮಧ್ಯಪ್ರದೇಶ, ಪಂಜಾಬ್ ಮತ್ತು ರಾಜಸ್ಥಾನ ರಾಜ್ಯಗಳು ರಾಜ್ಯ ಆಂತರಿಕ ಉತ್ಪನ್ನದಲ್ಲಿ ಉನ್ನತ ಸ್ಥಾನ ಪಡೆದಿದ್ದರೂ, ಮಾನವ ಅಭಿವೃದ್ಧಿಯಲ್ಲಿ ಈ ರಾಜ್ಯಗಳು ಕೆಳಸ್ಥಾನದಲ್ಲಿವೆ. ಹಕ್ ಅವರ (೧೯೯೭) ದಕ್ಷಿಣ ಏಷ್ಯಾ ರಾಷ್ಟ್ರಗಳಲ್ಲಿ ಮಾನವ ಅಭಿವೃದ್ಧಿಯ ಅಧ್ಯಯನದಲ್ಲಿ, ಭಾರತದ ರಾಜ್ಯಗಳ ಮಾನವ ಅಭಿವೃದ್ಧಿಯಲ್ಲಿ ಮಧ್ಯಪ್ರದೇಶ ಕೊನೆಯ ಸ್ಥಾನದಲ್ಲಿದ್ದರೆ, ಪಾಪುಲೇಶನ್ ಪೌಂಡೇಶನ್ ಆಫ್ ಇಂಡಿಯಾದವರು ಅಭಿವೃದ್ಧಿಪಡಿಸಿದ ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಬಿಹಾರ ರಾಜ್ಯವು ಭಾರತದ ರಾಜ್ಯಗಳಲ್ಲಿ ಕೊನೆಯ ಸ್ಥಾನದಲ್ಲಿದೆ. ಪಾಪುಲೇಶನ್ ಪೌಂಡೇಶನ್ ಆಫ್ ಇಂಡಿಯಾದವರ ಅಧ್ಯಯನದ ಪ್ರಕಾರ ಕರ್ನಾಟಕ ರಾಜ್ಯ ಸಾಪೇಕ್ಷವಾಗಿ ಭಾರತಕ್ಕಿಂತಲೂ ಉತ್ತಮ ಪರಿಸ್ಥಿತಿಯಲ್ಲಿದೆ ಎಂಬುದಾಗಿದೆ.

ಲಿಂಗಸಂಬಂಧಿ ಆರೋಗ್ಯ ಸೂಚ್ಯಂಕದಲ್ಲಿ ಯಥಾವತ್ತಾಗಿ ಕೇರಳ ರಾಜ್ಯ ಭಾರತದ ರಾಜ್ಯಗಳಲ್ಲಿಯೇ ಪ್ರಥಮ ಸ್ಥಾನದಲ್ಲಿದ್ದರೆ, ಮಧ್ಯಪ್ರದೇಶ ಮತ್ತು ಒರಿಸ್ಸಾ ರಾಜ್ಯಗಳು ಕೊನೆಯ ಸ್ಥಾನದಲ್ಲಿರುವ ಎರಡು ರಾಜ್ಯಗಳಾಗಿವೆ. ಅಧ್ಯಯನ ತಿಳಿಸಿರುವಂತೆ ಶಿಶುಮರಣ ಪ್ರಮಾಣವು ಅತ್ಯಾಧಿಕವಾಗಿರುವುದೇ ಈ ರಾಜ್ಯಗಳು ಲಿಂಗಸಂಬಂಧಿ ಆರೋಗ್ಯ ಸೂಚ್ಯಂಕದಲ್ಲಿ ಕೆಳಸ್ಥಾನ ಹೊಂದಿರುವುದಕ್ಕೆ ಕಾರಣವಾಗಿದೆ. ಹಿಮಾಚಲ ಪ್ರದೇಶ, ಮಹಾರಾಷ್ಟ್ರ, ಪಂಜಾಬ್, ತಮಿಳುನಾಡು, ಪಶ್ಚಿಮ ಬಂಗಾಳ ರಾಜ್ಯಗಳು ಅಧಿಕ ಲಿಂಗಸಂಬಂಧಿ ಆರೋಗ್ಯ ಸೂಚ್ಯಂಕ ಹೊಂದಿದ್ದರೂ, ಅದು ಕೇರಳ ರಾಜ್ಯದಷ್ಟು ಅಧಿಕವಾಗಿಲ್ಲ. ಬಿಹಾರ, ರಾಜಸ್ಥಾನ, ಉತ್ತರ ಪ್ರದೇಶ ರಾಜ್ಯಗಳಲ್ಲಿ ಲಿಂಗ ಸಂಬಂಧಿ ಆರೋಗ್ಯ ಸೂಚ್ಯಂಕದ ಮೌಲ್ಯವು ಕಡಿಮೆ ಇದೆ. ಗುಜರಾತ್ ಮತ್ತು ಕರ್ನಾಟಕ, ಆಂಧ್ರಪ್ರದೇಶ ಮತ್ತು ಅಸ್ಸಾಂ ರಾಜ್ಯಗಳ ಮೌಲ್ಯಗಳು ಒಂದೇ ತೆರನಾಗಿವೆ(ಪು.೫).

**ಶಿವಕುಮಾರ** ಅವರು (೧೯೯೬), ಭಾರತ ಮತ್ತು ಅದರ ೧೫ ರಾಜ್ಯಗಳಿಗೆ ಮಾನವ ಅಭಿವೃದ್ಧಿ ಸೂಚ್ಯಂಕ ಮತ್ತು ಲಿಂಗ ಸಂಬಂಧಿ ಅಭಿವೃದ್ಧಿ ಸ್ಯೂಚಂಕ(ಜಿಡಿಐ)ಗಳನ್ನು ರಚಿಸಿದ್ದಾರೆ. ಲಿಂಗ ಸಂಬಂಧಿ ಅಭಿವೃದ್ಧಿ ಸೂಚ್ಯಂಕವನ್ನು ಜಗತ್ತಿನ ೧೩೦ ರಾಷ್ಟ್ರಗಳೊಂದಿಗೆ ಹೋಲಿಕೆ ಮಾಡಿದ್ದಾರೆ. ಅವರ ಅಧ್ಯಯನದಿಂದ ಹೊರಬಂದ ತಥ್ಯಗಳೆಂದರೆ, ಮಾನವ ಅಭಿವೃದ್ಧಿ ಸೂಚ್ಯಂಕ

ಮತ್ತು ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕದ ಮೌಲ್ಯಗಳಲ್ಲಿ ಭಾರತದ ರಾಜ್ಯಗಳಲ್ಲಿ ಅಂತರ ಅಸಮಾನತೆಗಳಿವೆ. ಕೇರಳ, ಮಹಾರಾಷ್ಟ್ರ, ಗುಜರಾತ್ ರಾಜ್ಯಗಳು ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕದಲ್ಲಿ ಗರಿಷ್ಠ ಮೌಲ್ಯ ಹೊಂದಿದ್ದರೆ, ಉತ್ತರಪ್ರದೇಶ, ಬಿಹಾರ, ಮಧ್ಯಪ್ರದೇಶ ಮತ್ತು ರಾಜಸ್ಥಾನಗಳು ಕನಿಷ್ಠ ಜಿಡಿಐ ಮೌಲ್ಯ ಹೊಂದಿದ್ದು, ಈ ರಾಜ್ಯಗಳು ತೀವ್ರತರವಾದ ಲಿಂಗಸಂಬಂಧಿ ತಾರತಮ್ಯದ ಸಮಸ್ಯೆಯನ್ನು ಎದುರಿಸುತ್ತಿವೆ. ಜಗತ್ತಿನ ೧೩ ರಾಷ್ಟ್ರಗಳು ಮಾತ್ರ ಬಿಹಾರ ಮತ್ತು ಉತ್ತರ ಪ್ರದೇಶಗಳಿಗಿಂತ ಕಡಿಮೆ ಜಿಡಿಐ ಮೌಲ್ಯ ಹೊಂದಿವೆ. ಜಗತ್ತಿನ ೧೭೪ ರಾಷ್ಟ್ರಗಳಲ್ಲಿ ೬೪ ರಾಷ್ಟ್ರಗಳು ಕೇರಳದ ಎಚ್‌ಡಿಐ ಮೌಲ್ಯಕ್ಕಿಂತ ಕಡಿಮೆ ಮೌಲ್ಯ ಪಡೆದಿವೆ ಹಾಗೂ ಕೇವಲ ೨೪ ರಾಷ್ಟ್ರಗಳಲ್ಲಿ ಮಾತ್ರ ಹೆಚ್‌ಡಿಐ ಮೌಲ್ಯ ಉತ್ತರ ಪ್ರದೇಶದ ಹೆಚ್‌ಡಿಐ ಮೌಲ್ಯಕ್ಕಿಂತ ಕಡಿಮೆ ಇದೆ.

ಈ ಅಧ್ಯಯನ ತಿಳಿಸುವಂತೆ ಹಿಮಾಚಲ ಪ್ರದೇಶ, ಮಹಾರಾಷ್ಟ್ರ, ಕೇರಳ, ಗುಜರಾತ್ ಮತ್ತು ಕರ್ನಾಟಕ ರಾಜ್ಯಗಳಲ್ಲಿ ಮಾನವ ಅಭಿವೃದ್ಧಿ ಮತ್ತು ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕಗಳ ಮೌಲ್ಯದ ನಡುವೆ ಕನಿಷ್ಟ ಅಂತರವಿದೆ. ಆದರೆ ಹರಿಯಾಣ, ಪಂಜಾಬ್, ಉತ್ತರ ಪ್ರದೇಶ, ಬಿಹಾರ ಮತ್ತು ಪಶ್ಚಿಮಬಂಗಾಳ ರಾಜ್ಯಗಳಲ್ಲಿ ಈ ಎರಡು ಮೌಲ್ಯಗಳ ನಡುವೆ ಗರಿಷ್ಠ ಮಟ್ಟದ ಅಂತರವಿದೆ. ಹರಿಯಾಣ, ಪಂಜಾಬ್ ಮತ್ತು ಪಶ್ಚಿಮ ಬಂಗಾಳ ರಾಜ್ಯಗಳಲ್ಲಿ ವರಮಾನ ಗರಿಷ್ಠ ಪ್ರಮಾಣದಲ್ಲಿದ್ದರೂ, ಇವು ಲಿಂಗ ತಾರತಮ್ಯದ ಸಮಸ್ಯೆಯಿಂದ ಬಳಲುತ್ತಿವೆ. ಪಶ್ಚಿಮಬಂಗಾಳ ರಾಜ್ಯದಲ್ಲಿ ಪುರುಷ ಮಹಿಳೆಯರ ಅನುಪಾತ ಕಡಿಮೆಯಿರುವುದು ಮತ್ತು ಕೃಷಿಯೇತರ ವಲಯಗಳಲ್ಲಿ ಪುರುಷ ಮಹಿಳೆಯರ ಸರಾಸರಿ ಕೂಲಿಯಲ್ಲಿ ತಾರತಮ್ಯ ಇರುವುದರಿಂದ ಮೇಲಿನ ಎರಡು ಮೌಲ್ಯಗಳ ನಡುವೆ ಗರಿಷ್ಠ ಅಂತರವಿರುವುದಕ್ಕೆ ಪ್ರಮುಖ ಕಾರಣವಾಗಿದೆ ಎಂಬುದನ್ನು ಅಧ್ಯಯನ ಗುರುತಿಸಿದೆ. ಭಾರತದಲ್ಲಿ ಮಾನವ ಅಭಿವೃದ್ಧಿ ಮತ್ತು ಆರ್ಥಿಕ ಪ್ರಗತಿ ಸಾಧಿಸಬೇಕಾದರೆ, ಸಹಭಾಗಿತ್ವ ಅಭಿವೃದ್ಧಿಯನ್ನು ಪ್ರೋತ್ಸಾಹಿಸಿ, ಲಿಂಗ ತಾರತಮ್ಯವನ್ನು ಕಡಿಮೆ ಮಾಡಬೇಕೆಂದು ಈ ಅಧ್ಯಯನ ತಿಳಿಸಿದೆ.

**ಶಿವಕುಮಾರ್** ಅವರು ಭಾರತ ರಾಜ್ಯಗಳಿಗೆ ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕಗಳನ್ನು ರಚಿಸಿರುವಂತೆ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಸಹ ರಚಿಸಿದ್ದಾರೆ. ಇಲ್ಲಿಯೂ ಸಹ ಕೇರಳ ಭಾರತದ ರಾಜ್ಯಗಳಲ್ಲಿ ಮೊದಲ ಸ್ಥಾನದಲ್ಲಿದೆ. ಬಿಹಾರ(೧೩ನೇ ಸ್ಥಾನ) ಮಧ್ಯಪ್ರದೇಶ (೧೪ನೇ ಸ್ಥಾನ) ಮತ್ತು ಉತ್ತರ ಪ್ರದೇಶ (೧೫ನೇ ಸ್ಥಾನ) ರಾಜ್ಯಗಳು ಅಂತಿಮ ಸ್ಥಾನದಲ್ಲಿದೆ.

೧೯೯೫ರ ಮಾನವ ಅಭಿವೃದ್ಧಿ ವರದಿಯು ಲಿಂಗ ಸಶಕ್ತೀಕರಣ ಮಾಪನ(GEM) ಅಭಿವೃದ್ಧಿ ಪಡಿಸಿದ ನಂತರ, ಭಾರತದ ರಾಜ್ಯಗಳಿಗೆ ಆ ರೀತಿಯ ಮಾಪನಗಳನ್ನು ರಚಿಸುವ ಪ್ರಯತ್ನಗಳು ನಡೆದಿವೆ. ಇವುಗಳಲ್ಲಿ ಇಂದಿರಾ (೧೯೯೬) ಆಶಾ(೧೯೯೬) ಅವರ ಸಂಶೋಧನಾ ಅಧ್ಯಯನಗಳು ಪರ್ಯಾಯ ಲಿಂಗ ಸಶಕ್ತೀಕರಣ ಮಾಪನ ನೀಡಲು ಯತ್ನಿಸಿವೆ.

ಎರಡು ದಶಕಗಳ (೧೯೭೦-೯೧) ಅವಧಿಯಲ್ಲಿ ಭಾರತ ರಾಜ್ಯಗಳ ಮಾನವ ಅಭಿವೃದ್ಧಿಯಲ್ಲಿಯ ಅನುಭವಗಳನ್ನು ದತ್ತ (೧೯೯೭) ಅವರ ಅಧ್ಯಯನವು ತಿಳಿಸುತ್ತದೆ. ಈ ಅಧ್ಯಯನವು ೧೯೭೦-೯೦ರ ಅವಧಿಯಲ್ಲಿ ರಾಷ್ಟ್ರದ ೧೭ ರಾಜ್ಯಗಳಲ್ಲಿಯ ಮಾನವ ಅಭಿವೃದ್ಧಿ ಪ್ರವೃತ್ತಿಯನ್ನು(Pattern) ತಿಳಿಯುವ ಪ್ರಯತ್ನ ಮಾಡಿದೆ. ಈ ಅಧ್ಯಯನದ ತಥ್ಯಗಳೆಂದರೆ ಎರಡು ದಶಕಗಳ ಅವಧಿಯಲ್ಲಿ ಭಾರತದ ರಾಜ್ಯಗಳು ಆರೋಗ್ಯ ಮತ್ತು ಶಿಕ್ಷಣ ರಂಗಗಳಲ್ಲಿ ಗಣನೀಯ ಮಟ್ಟದಲ್ಲಿ ಸಾಧನೆ ಮಾಡಿವೆ. ಕೇರಳ ರಾಜ್ಯವು ವರಮಾನದ ದೃಷ್ಟಿಯಲ್ಲಿ ಕೆಳಹಂತದಲ್ಲಿದ್ದರೂ, ಆರೋಗ್ಯ ಮತ್ತು ಶಿಕ್ಷಣಗಳ ಸಾಧನೆಯಲ್ಲಿ ಪ್ರಧಾನ ಸ್ಥಾನವನ್ನು ಪಡೆದಿವೆ. ಆರೋಗ್ಯ ಶಿಕ್ಷಣಗಳಲ್ಲಿಯ ಸಾಧನೆ ಮತ್ತು ತಲಾ ವರಮಾನಗಳ ನಡುವೆ ಕಡಿಮೆ ಸಹ-ಸಂಬಂಧ ಇರುವುದನ್ನು ಈ ಅಧ್ಯಯನ ದೃಢಪಡಿಸಿದೆ. ಆರೋಗ್ಯ ಮತ್ತು ಶಿಕ್ಷಣ ರಂಗಗಳ ಮೇಲಿನ ವೆಚ್ಚವು ಮಾನವ ಅಭಿವೃದ್ಧಿಯ ಸುಧಾರಣೆಯಲ್ಲಿ ಮಹತ್ತರವಾದುದು ಎಂಬುದನ್ನು ಈ ಅಧ್ಯಯನದ ರಿಗ್ರೇಷನ್ ವಿಶ್ಲೇಷಣೆ ಮೂಲಕ ಕಾಣುತ್ತೇವೆ.

ರಾಷ್ಟ್ರಮಟ್ಟದಲ್ಲಿ ಮಾನವ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಜಡತೆ ಪ್ರವೃತ್ತಿ ಇರುವುದನ್ನು ಈ ಅಧ್ಯಯನ ಗುರುತಿಸಿದೆ. ಪ್ರಾದೇಶಿಕವಾಗಿ ಪಶ್ಚಿಮ ರಾಜ್ಯಗಳಲ್ಲಿ, ಪಶ್ಚಿಮ ಬಂಗಾಳ ರಾಜ್ಯ ಮಾನವ ಅಭಿವೃದ್ಧಿಯಲ್ಲಿ ಮಧ್ಯಮ ಸ್ಥಾನದಲ್ಲಿದ್ದರೆ, ಇತರ ರಾಜ್ಯಗಳಾದ ಅಸ್ಸಾಂ, ಬಿಹಾರಗಳು ಮಾನವ ಅಭಿವೃದ್ಧಿಯಲ್ಲಿ ಕೆಳಹಂತದಲ್ಲಿವೆ. ದಕ್ಷಿಣ ರಾಜ್ಯಗಳು ನಂತರದ ಸ್ಥಾನದಲ್ಲಿ ಬರುತ್ತವೆ. ಎರಡು ದಶಕಗಳ ಅವಧಿಯಲ್ಲಿ ರಾಜ್ಯಗಳ ಸಾಪೇಕ್ಷ ಸ್ಥಿತಿಗಳಲ್ಲಿ ಕ್ಲಿಷ್ಟ ಬದಲಾವಣೆ ಯಾಗಿರುವುದನ್ನು ಈ ಅಧ್ಯಯನವು ತಿಳಿಸಿದೆ (The relative positions of the states have hardly changed over the decades) ಈ ಅಧ್ಯಯನದ ಪ್ರಕಾರ ಮಾನವ ಅಭಿವೃದ್ಧಿಯಲ್ಲಿ, ಭಾರತದ ೧೭ ರಾಜ್ಯಗಳಲ್ಲಿ, ಕರ್ನಾಟಕ ರಾಜ್ಯ ೮ನೇ ಸ್ಥಾನದಲ್ಲಿದೆ.

**ಭಟ್ಟಾಚಾರ್ಯರು** (೧೯೯೮) ಸಾಕ್ಷರತೆ, ಶಿಶುಮರಣ ಪ್ರಮಾಣ ಮತ್ತು ವರಮಾನಗಳ ಮೂಲಕ ಪಶ್ಚಿಮ ಬಂಗಾಳದ ೧೬ ಜಿಲ್ಲೆಗಳಿಗೆ ಮತ್ತು ರಾಷ್ಟ್ರದ ೧೬ ರಾಜ್ಯಗಳಿಗೆ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಪಶ್ಚಿಮ ಬಂಗಾಳ ರಾಜ್ಯದ ಜಿಲ್ಲೆ ಜಿಲ್ಲೆಗಳ ನಡುವೆ ಮಾನವ ಅಭಿವೃದ್ಧಿಯಲ್ಲಿ ಇರುವ ಪ್ರಾದೇಶಿಕ ಅಸಮಾನತೆಗಳನ್ನು ತಿಳಿಯಲು ಉದ್ದೇಶಿಸಿದ್ದಾರೆ. ಈ ಅಧ್ಯಯನದ ಪ್ರಮುಖ ಫಲಿತಗಳೆಂದರೆ, ಭಾರತದ ರಾಜ್ಯಗಳಲ್ಲಿ ಮತ್ತು ಪಶ್ಚಿಮ ಬಂಗಾಳದ ಜಿಲ್ಲೆಗಳಲ್ಲಿ ಮಾನವ ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರಾದೇಶಿಕ ಅಸಮಾನತೆಗಳಿವೆ. ಪಶ್ಚಿಮ ಬಂಗಾಳ ರಾಜ್ಯದಲ್ಲಿ (೧೯೯೧ಕ್ಕೆ) ಕೋಲ್ಕತ್ತ, ಹೌರಾ, ಹೂಗ್ಲಿ, ಬೂರ್ಡಾನ್(Burdhan) ಜಿಲ್ಲೆಗಳು ಮಾನವ ಅಭಿವೃದ್ಧಿಯಲ್ಲಿ ಮೊದಲ ೪ ಸ್ಥಾನಗಳನ್ನು ಹೊಂದಿದ್ದರೆ, ಮಾಲಾಡಿ, ಮುರ್ಷಿದಾ ಬಾದ್, ಕೋಚ್‌ಬೇಹಾರ(Coachbehar) ಮತ್ತು ಪಶ್ಚಿಮ ದಿನಾಜಪುರ ಜಿಲ್ಲೆಗಳು ಕೊನೆಯ ೪ ಸ್ಥಾನಗಳನ್ನು ಪಡೆದಿವೆ. ಪಶ್ಚಿಮ ಬಂಗಾಳ ರಾಜ್ಯದ ಜಿಲ್ಲೆಗಳಲ್ಲಿ ವರಮಾನ ಮತ್ತು ಮಾನವ

ಅಭಿವೃದ್ಧಿ ಎರಡರಲ್ಲಿಯೂ ದುಸ್ಥಿತಿ ಇರುವುದನ್ನು ಈ ಅಧ್ಯಯನ ಗುರುತಿಸಿದೆ. ಈ ಅಧ್ಯಯನದ ಪ್ರಕಾರ ೧೯೮೧-೯೧ರ ಅವಧಿಯಲ್ಲಿ ಮಾನವ ಅಭಿವೃದ್ಧಿ ಮತ್ತು ಆಂತರಿಕ ಉತ್ಪನ್ನದ ತಲಾ ವರಮಾನ(PCDP)ಗಳ ನಡುವಿನ ಅಂತರ ಕಡಿಮೆಯಾಗಿದೆ.

ಇವರ ಅಧ್ಯಯನದಿಂದ ಹೊರಬಂದ ಮುಖ್ಯಾಂಶವೆಂದರೆ ಗ್ರಾಮೀಣ ಜನಸಂಖ್ಯೆಯನ್ನು ಅಧಿಕ ಹೊಂದಿರುವ ಜಿಲ್ಲೆಗಳಲ್ಲಿ ಮಾನವ ಅಭಿವೃದ್ಧಿಯ ಮಟ್ಟ ಕಡಿಮೆ ಇರುತ್ತದೆ. ಭಾರತದಲ್ಲಿಯ ರಾಜ್ಯಗಳಿಗೆ ಸಂಬಂಧಿಸಿದಂತೆ ೧೯೮೧-೯೧ರ ಅವಧಿಯಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕ ಮತ್ತು ನಗರೀಕರಣ, ಪ್ರಾಥಮಿಕ ವಲಯದ ಕೊಡುಗೆಗಳೊಂದಿಗಿನ ಸಂಬಂಧವು ವಿಲೋಮವಾಗಿದೆ. ಆದರೆ ಪಶ್ಚಿಮ ಬಂಗಾಲದ ಜಿಲ್ಲೆಗಳಲ್ಲಿ ನಗರೀಕರಣ ಮತ್ತು ಮಾನವ ಅಭಿವೃದ್ಧಿಗಳ ನಡುವಿನ ಸಂಬಂಧವು ಅನುಲೋಮವಾಗಿದೆ. ಅಂದರೆ ಪಶ್ಚಿಮ ಬಂಗಾಳದ ಜಿಲ್ಲೆಗಳಲ್ಲಿ ಹೆಚ್ಚು ನಗರೀಕರಣ ಹೊಂದಿರುವ ಜಿಲ್ಲೆಗಳು ಗರಿಷ್ಠಮಟ್ಟದ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ಹೊಂದಿದೆ. ತಲಾವರಮಾನ ಮತ್ತು ಮಾನವ ಅಭಿವೃದ್ಧಿ ಸೂಚ್ಯಂಕಗಳ ನಡುವಿನ ಸಹ ಸಂಬಂಧ ಗಟ್ಟಿಯಾಗಿಲ್ಲವೆಂದೂ, ದ್ವಿತೀಯ ಮತ್ತು ತೃತೀಯ ವಲಯಗಳು ಮತ್ತು ಮಾನವ ಅಭಿವೃದ್ಧಿಗಳ ನಡುವಿನ ಸಹ ಸಂಬಂಧ ಅನುಚಾನವಾಗಿದೆ ಎಂದು ತಿಳಿಯಬಹುದು.

ಒಟ್ಟಿನಲ್ಲಿ ಈ ಎಲ್ಲ ಅಧ್ಯಯನಗಳಲ್ಲಿ ಕೇರಳ ರಾಜ್ಯ ಮಾನವ ಅಭಿವೃದ್ಧಿಯ ದೃಷ್ಟಿಯಂದ ರಾಷ್ಟ್ರದಲ್ಲಿ ಅಗ್ರಸ್ಥಾನದಲ್ಲಿದ್ದರೆ, ಬಹುತೇಕ BIMARU ರಾಜ್ಯಗಳು ಮಾನವ ಅಭಿವೃದ್ಧಿಯಲ್ಲಿ ಕೆಳಹಂತದಲ್ಲಿವೆ. ರಾಷ್ಟ್ರಮಟ್ಟ ಮತ್ತು ಅಂತಾರಾಷ್ಟ್ರೀಯ ಮಟ್ಟದ ಅಂಶಗಳನ್ನು ಪರಿಶೀಲಿಸಿರುವುದರಿಂದ ನಾವು ಪ್ರಸ್ತಾಪಿಸಿರವ ವಿಷಯಕ್ಕೆ ಭೂಮಿಕೆಯಾಗಿರುತ್ತದೆ. ದೇಶದ ಹಲವು ರಾಜ್ಯಗಳು ಮತ್ತು ೧೬ ಇತರೆ ದೇಶಗಳ ಅಭಿವೃದ್ಧಿ ಫಲಗಳು ಅದರ ಮುನ್ನಡೆ ಮತ್ತು ಹಿನ್ನಡೆ ಆಧಾರವನ್ನು ಗಮನಿಸಿದಾಗ ಕರ್ನಾಟಕದ ದಲಿತ ಅಭಿವೃದ್ಧಿಯ ಸನ್ನಿವೇಶಗಳನ್ನು ಎಳೆ-ಎಳೆಯಾಗಿ ಸ್ಥಾನ ಗಣನೆಯ ರೂಪದಲ್ಲಿ ವಿಶ್ಲೇಷಿಸಲು ಯತ್ನಿಸಲಾಗಿದೆ.

ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಕುರಿತಂತೆ ಮುಖ್ಯವಾಗಿ ಎರಡು ಅಧ್ಯಯನಗಳು ನಡೆದಿವೆ. ಮೊದಲನೆಯದಾಗಿ ಕರ್ನಾಟಕ ಸರಕಾರದ ಯೋಜನಾ ವಿಭಾಗವು ರಾಜ್ಯದ ಜಿಲ್ಲೆಗಳ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರಚಿಸಿದೆ. ಎರಡನೆಯದಾಗಿ ವಿನೋದ್ ವ್ಯಾಸಲು (೧೯೯೬) ಅವರು ಸ್ವತಂತ್ರವಾಗಿ ರಾಜ್ಯದ ಜಿಲ್ಲೆಗಳ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಅಭಿವೃದ್ಧಿಪಡಿಸಿದ್ದಾರೆ.

**ವಾಣಿ ಮತ್ತು ವ್ಯಾಸಲು (೧೯೯೬)** ಅವರು ಕರ್ನಾಟಕದ ೧೯ ಜಿಲ್ಲೆಗಳಿಗೆ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರಚಿಸಿದ್ದಾರೆ. ಸಾಕ್ಷರತೆ, ಜೀವನಾಯುಷ್ಯ ಮತ್ತು ವರಮಾನಗಳ ಕನಿಷ್ಠ ಮತ್ತು ಗರಿಷ್ಠ ಮೌಲ್ಯಗಳನ್ನು ಕರ್ನಾಟಕದ ಜಿಲ್ಲೆಗಳಿಂದ ಆಯ್ದು ಮಾನವ ಅಭಿವೃದ್ಧಿಯ ಸೂಚ್ಯಂಕ ಅಭಿವೃದ್ಧಿಪಡಿಸಿದ್ದು, ಈ ಮೂರು ಚಲಕಗಳ ಮೌಲ್ಯಗಳನ್ನು ರಾಷ್ಟ್ರೀಯ ಮಟ್ಟದಿಂದ ಆರಿಸಿಕೊಂಡು ಎರಡನೆಯ ಮಾನವ ಅಭಿವೃದ್ಧಿ ಸೂಚ್ಯಂಕ ರಚಿಸಿದ್ದಾರೆ.

ಇವರು ಒಟ್ಟು ಆರು ಪರ್ಯಾಯ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರಚಿಸಿದ್ದಾರೆ. ಇವರ ಅಧ್ಯಯನದಿಂದ ಬಂದ ಫಲಿತಾಂಶವೆಂದರೆ ಮಾನವ ಅಭಿವೃದ್ಧಿಯಲ್ಲಿ ಕರ್ನಾಟಕ ರಾಜ್ಯದ ಜಿಲ್ಲೆಗಳ ನಡುವೆ ಅಂತರಗಳಿವೆ. ಮಾನವ ಅಭಿವೃದ್ಧಿಯಲ್ಲಿ ದಕ್ಷಿಣ ಕನ್ನಡ ಮತ್ತು ಬೆಂಗಳೂರು ಜಿಲ್ಲೆಗಳು ರಾಜ್ಯದಲ್ಲಿ ಪ್ರಥಮ ಮತ್ತು ದ್ವಿತೀಯ ಸ್ಥಾನದಲ್ಲಿದ್ದರೆ, ಹೈದ್ರಾಬಾದ್-ಕರ್ನಾಟಕ ಪ್ರದೇಶದ ಗುಲ್ಬರ್ಗಾ, ಬಳ್ಳಾರಿ, ಬೀದರ್ ಮತ್ತು ರಾಯಚೂರು ಜಿಲ್ಲೆಗಳ ಕ್ರಮವಾಗಿ ೧೫, ೧೭, ೧೮ ಮತ್ತು ೧೯ನೇ ಸ್ಥಾನದಲ್ಲಿವೆ. ಆರು ಪರ್ಯಾಯ ಮಾನವ ಅಭಿವೃದ್ಧಿ ಸೂಚ್ಯಂಕಗಳಲ್ಲಿ ಇವುಗಳ ಸ್ಥಾನ ಸರಿಸಮಾನವಾಗಿ ಏಕರೂಪತೆಯಿಂದ ಕೂಡಿದೆ. ಕರ್ನಾಟಕದಲ್ಲಿ ಅತಿ ಹೆಚ್ಚು ಮಾನವ ಅಭಿವೃದ್ಧಿ ಮೌಲ್ಯ ಹೊಂದಿರುವ ಜಿಲ್ಲೆಗಳು, ರಾಷ್ಟ್ರದಲ್ಲಿಯೇ ಹೆಚ್ಚು ಮಾನವ ಅಭಿವೃದ್ಧಿ ಸೂಚ್ಯಂಕ ಮೌಲ್ಯ ಪಡೆದಿರುವ ಕೇರಳ ರಾಜ್ಯಕ್ಕೆ ಹೋಲಿಸಿದರೆ, ಅವು ಸಾಮಾನ್ಯ ಜಿಲ್ಲೆಗಳಾಗಿ ಬಿಡುತ್ತವೆ. ಈ ಜಿಲ್ಲೆಗಳನ್ನೇ ಜಾಗತಿಕ ಮಟ್ಟಕ್ಕೆ ಹೋಲಿಸಿದರೆ ತುಂಬಾ ಹಿಂದುಳಿದ ಜಿಲ್ಲೆಗಳಾಗಿ ಗೋಚರಿಸುತ್ತವೆ. ಮಾನವ ಅಭಿವೃದ್ಧಿಯಲ್ಲಿ ಕೆಳಹಂತದಲ್ಲಿರುವ ಜಿಲ್ಲೆಗಳನ್ನು ಕನಿಷ್ಠ ರಾಜ್ಯಮಟ್ಟಕ್ಕಾದರೂ ತರುವ ಅಗತ್ಯವಿದೆ ಎಂಬುದನ್ನು ಈ ಅಧ್ಯಯನ ಒತ್ತಿ ಹೇಳಿದೆ. ಇದಕ್ಕಾಗಿ ಮಾನವ ಅಭಿವೃದ್ಧಿಯ ಚಾಲಕಶಕ್ತಿಯಾಗಿರುವ ಶಿಕ್ಷಣದಲ್ಲಿ ಹೆಚ್ಚಿನ ಬಂಡವಾಳ ವಿನಿಯೋಗವಾಗಬೇಕಾಗಿದೆ. ಅದೇ ವೇಳೆಗೆ ಕಲ್ಯಾಣ ಯೋಜನೆಗಳ ನಡುವೆ ಅಗತ್ಯ ಸಂಯೋಜನೆಯ ಅವಶ್ಯಕತೆ ಇದೆ. ರಾಜ್ಯದಲ್ಲಿ ಮಾನವ ಅಭಿವೃದ್ಧಿ ಸುಧಾರಿಸಬೇಕಾದರೆ ರಾಜಕೀಯವಾಗಿ ಉತ್ತಮ ಅಭಿಪ್ರಾಯವಾಗಿದೆ.

**ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ-೧೯೯೯** ವರದಿಯನ್ನು ಕರ್ನಾಟಕ ಸರಕಾರ ಪ್ರಕಟಿಸಿದೆ. ಈ ವರದಿಯು ರಾಜ್ಯದ ೨೦ ಜಿಲ್ಲೆಗಳ ಮಾನವ ಅಭಿವೃದ್ಧಿ ಮತ್ತು ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕಗಳನ್ನು ಸಿದ್ಧಪಡಿಸಿದೆ. ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಕೊಡಗು, ಬೆಂಗಳೂರು ನಗರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಕ್ರಮವಾಗಿ ಮೊದಲ ಮೂರು ಸ್ಥಾನದಲ್ಲಿದ್ದರೆ, ಹೈದ್ರಾಬಾದ್-ಕರ್ನಾಟಕ ಪ್ರದೇಶದ ಬಳ್ಳಾರಿ, ಬೀದರ್, ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಗಳು ಕೊನೆಯ ಸ್ಥಾನಗಳನ್ನು ಪಡೆದುಕೊಂಡಿವೆ. ಜಿಡಿಐ ದರ್ಜೆಗಳು, ಹೆಚ್‌ಡಿಐ ದರ್ಜೆಗಳನ್ನೇ ಬಹುತೇಕವಾಗಿ ಅನುಸರಿಸಿವೆ. ಉಪ ಸಹರಾ ಆಫ್ರಿಕನ್ ದೇಶಗಳ ಸಾಕ್ಷರತೆಗಿಂತಲೂ, ಹೈದ್ರಾಬಾದ್-ಕರ್ನಾಟಕ ಪ್ರದೇಶದ ಸಾಕ್ಷರತಾ ಪ್ರಮಾಣ ಕಡಿಮೆ ಎಂಬ ಸತ್ಯವನ್ನು ಈ ವರದಿ ಹೊರಹಾಕಿದೆ. ಮಾನವ ಅಭಿವೃದ್ಧಿಗೆ ಸಂಬಂಧಿಸಿದಂತೆ, ಜಾಗತಿಕ ಮಟ್ಟದಲ್ಲಿ ಭಾರತ ೧೩೪ನೇ ಸ್ಥಾನದಲ್ಲಿದ್ದರೆ, ಕರ್ನಾಟಕ ರಾಜ್ಯ ೧೩೧ನೇ ಸ್ಥಾನದಲ್ಲಿ ನಿಲ್ಲುತ್ತದೆ. ಜಾಗತಿಕ ಮಟ್ಟದಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶದ ನಾಲ್ಕು ಜಿಲ್ಲೆಗಳು ಅತ್ಯಂತ ಕೆಳಮಟ್ಟದ ಸ್ಥಾನಗಳನ್ನು ಪಡೆದಿರುವ ಜಿಲ್ಲೆಗಳಾಗಿವೆ ಎಂಬ ಕಳವಳಕಾರಿ ಸಂಗತಿಯನ್ನು ಕರ್ನಾಟಕದ ಮಾನವ ಅಭಿವೃದ್ಧಿಯ ವರದಿ ತೋರಿಸಿಕೊಟ್ಟಿದೆ. ಇದೇ ರೀತಿ ಜಿಡಿಐಗೆ ಸಂಬಂಧಿಸಿದಂತೆ ಕೊಡಗು ಜಾಗತಿಕ ಮಟ್ಟದಲ್ಲಿ ೬೫ನೇ ಸ್ಥಾನ ಪಡೆದಿದ್ದರೆ, ರಾಯಚೂರು

೧೦೧ನೇ ಸ್ಥಾನದಲ್ಲಿದೆ. ಕೊಡಗು, ಬೆಂಗಳೂರು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಕರ್ನಾಟಕದ ಮಟ್ಟಿಗೆ ಮೊದಲ ಸ್ಥಾನಗಳಲ್ಲಿ ಇರಬಹುದು. ಆದರೆ ಜಾಗತಿಕ ಮಟ್ಟದಲ್ಲಿ ಇವು 'ಮಧ್ಯಮ ಮಾನವ ಅಭಿವೃದ್ಧಿ' ಇರುವ ರಾಷ್ಟ್ರಗಳ ಗುಂಪಿಗೆ ಸೇರುತ್ತವೆ. ಹೈದ್ರಾಬಾದ್-ಕರ್ನಾಟಕ ಪ್ರದೇಶದ ಜಿಲ್ಲೆಗಳು ಕಡಿಮೆ ಮಾನವ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಸಾಲಿಗೆ ಸೇರ್ಪಡೆಗೊಳ್ಳುತ್ತವೆ. ಕರ್ನಾಟಕ ಸರಕಾರ ಹೊರತಂದಿರುವ ಮಾನವ ಅಭಿವೃದ್ಧಿ-೧೯೯೯ ವರದಿಯು ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಮಾನವ ಅಭಿವೃದ್ಧಿಯಲ್ಲಿ ಪ್ರಾದೇಶಿಕ ಅಸಮಾನತೆಗಳಿವೆ ಎಂಬುವುದನ್ನು ಸ್ಪಷ್ಟವಾಗಿ ತೋರಿಸಿವೆ. ಈ ವರದಿ ತಿಳಿಸುವಂತೆ, ಬೆಳಗಾವಿ ವಿಭಾಗದ ವಿಜಾಪುರ ಜಿಲ್ಲೆ, ಗುಲ್ಬರ್ಗಾ ವಿಭಾಗದ ನಾಲ್ಕು ಜಿಲ್ಲೆಗಳ ಜನಸಂಖ್ಯೆಗೆ ಸಂಬಂಧಪಟ್ಟ ಸಾಮಾಜಿಕ ಮತ್ತು ಆರೋಗ್ಯ ಸೂಚ್ಯಂಕಗಳಲ್ಲಿ ಅತ್ಯಂತ ಹಿಂದುಳಿದ ಪ್ರದೇಶಗಳಾಗಿವೆ. ಈ ವರದಿಯು ರಾಜ್ಯದಲ್ಲಿ ಆರೋಗ್ಯ ಕುರಿತಂತೆ ೧೧ ಸಮಸ್ಯೆಗಳನ್ನು ಗುರುತಿಸಿದ್ದು, ಅವುಗಳ ಸುಧಾರಣೆಗೆ ಕ್ರಮ ಜರುಗಿಸಲಾಗಿದೆ.

**ವಿನೋದ್ ವ್ಯಾಸಲು** ಅಭಿವೃದ್ಧಿಪಡಿಸಿರುವ ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ದಕ್ಷಿಣ ಕನ್ನಡ ಜಿಲ್ಲೆ ರಾಜ್ಯದಲ್ಲಿ ಮೊದಲ ಸ್ಥಾನದಲ್ಲಿದ್ದರೆ, ಕರ್ನಾಟಕದ ಮಾನವ ಅಭಿವೃದ್ಧಿ ವರದಿಯಲ್ಲಿ ಕೊಡಗು ಜಿಲ್ಲೆ ಮೊದಲ ಸ್ಥಾನದಲ್ಲಿದೆ. ವ್ಯಾಸಲು ಅವರ ಅಧ್ಯಯನದಲ್ಲಿ ಕೊಡಗು ಮೂರನೇ ಸ್ಥಾನದಲ್ಲಿದೆ. ಹೀಗೆ ಈ ಎರಡು ಅಧ್ಯಯನಗಳ ನಡುವೆ ರಾಜ್ಯದ ಸ್ಥಾನಗಳಲ್ಲಿ ಕೆಲವೊಂದು ವ್ಯತ್ಯಾಸವನ್ನು ಗಮನಿಸಬಹುದು.

**ಡಾ. ಡಿ.ಎಂ. ನಂಜುಂಡಪ್ಪ** "*ಪ್ರಾದೇಶಿಕ ಅಸಮಾನತೆ ಉನ್ನತಾಧಿಕಾರ ಸಮಿತಿಯ ವರದಿ*" ಯಲ್ಲಿ ಯಾವ ಯಾವ ಪ್ರದೇಶಗಳು ಅಥವಾ ಜಿಲ್ಲೆಗಳು ಅಭಿವೃದ್ಧಿ ಹೊಂದಿವೆ ಮತ್ತು ಯಾವ ಜಿಲ್ಲೆಗಳು ಅಭಿವೃದ್ಧಿಯ ದುಃಸ್ಥಿತಿಯನ್ನು ಅನುಭವಿಸುತ್ತವೆ ಎಂಬುದನ್ನು ಸ್ಪಷ್ಟವಾಗಿ ವರದಿಯಲ್ಲಿ ಉಲ್ಲೇಖಿಸಿದ್ದಾರೆ. ಈ ಸಮಿತಿಯ ವಿಸ್ತೃತ ರೂಪದಲ್ಲಿ ಪ್ರಾದೇಶಿಕ ಅಸಮಾನತೆಯನ್ನು ಮಾಪನ ಮಾಡಿ ಅದರ ತೀವ್ರತೆಯನ್ನು ತೋರಿಸಿಕೊಟ್ಟಿದ್ದಾರೆ. ಅದಕ್ಕಾಗಿ ಸಮಿತಿಯು ಐದು ವಲಯಗಳಿಗೆ ಸಂಬಂಧಿಸಿದ ೩೫ ಸೂಚಿಗಳನ್ನು ಒಳಗೊಂಡ "ಸಂಯುಕ್ತ ಸಮಗ್ರ ಅಭಿವೃದ್ಧಿ ಸೂಚ್ಯಂಕ"ವೆಂಬ ಮಾಪನವನ್ನು ಬಳಸಿದೆ. ಪೂರ್ಣ ಕರ್ನಾಟಕ ರಾಜ್ಯದ ಅಭಿವೃದ್ಧಿಯನ್ನು ಅವಲೋಕಿಸಿದಾಗ ಹೈದರಾಬಾದ್-ಕರ್ನಾಟಕ ಜಿಲ್ಲೆಗಳು ಅತ್ಯಂತ ಹಿಂದೆ ಉಳಿದಿರುವುದು ಗೋಚರಿಸುತ್ತದೆ. ಪ್ರಾದೇಶಿಕ ಅಸಮಾನತೆ ಅನಭಿವೃದ್ಧಿಯನ್ನು ಎತ್ತಿತೋರುತ್ತದೆ ಎಂದು ಅಧ್ಯಯನದಿಂದ ತಿಳಿಯಬಹುದಾಗಿದೆ.

**ಚಂದ್ರಶೇಖರ್ ಟಿ.ಆರ್** ಅವರು ಬರೆದ "*ಅಮರ್ತ್ಯ ಸೇನ್ ಅಭಿವೃದ್ಧಿ ಅಧ್ಯಯನಗಳು*" ಕೃತಿಯಲ್ಲಿ ಅಮರ್ತ್ಯ ಸೇನರು ಕಂಡುಕೊಂಡ ಅಭಿವೃದ್ಧಿ ಮಾದರಿ ಸಿದ್ಧಾಂತಗಳನ್ನು ಹಿಡಿದಿಟ್ಟಿದ್ದಾರೆ. ಅಮರ್ತ್ಯ ಸೇನ್‌ರ ಅಭಿವೃದ್ಧಿ ಮೀಮಾಂಸೆಯ ನವ ಅಭಿಜಾತ ಅಭಿವೃದ್ಧಿ ಮೀಮಾಂಸೆಯ ಟೀಕೆಯೂ ಆಗಿದೆ. ಅಭಿವೃದ್ಧಿ ಕುರಿತಂತೆ ನವ ಅಭಿಜಾತ ಸಂಕಥನ ಮನುಷ್ಯನನ್ನು ಕೇವಲ ಒಂದು ಸಾಧನವಾಗಿ ಸಂಪನ್ಮೂಲವನ್ನಾಗಿ ಮಾತ್ರ ಪರಿಭಾವಿಸಲಾಗಿದೆ. ಈ ಸಂಕಥನ ತಮ್ಮ

ವಿಕೃತ ವೈಚಾರಿಕೆ ನೆಲೆಯಲ್ಲಿ ಹಾಗೂ ಅಭಿವೃದ್ಧಿಗೆ ತಮ್ಮ ಬದ್ಧತೆ-ನಿಷ್ಠತೆಯನ್ನು ಸಾಬೀತುಮಾಡುವ ಉತ್ಸಾಹದಲ್ಲಿ "ಅಭಿವೃದ್ಧಿಗಾಗಿ ಮನುಷ್ಯ" ಎಂಬ ಘೋಷಣೆ ಕೂಗಲು ಹಿಂಜರಿಯಲಿಲ್ಲ. ಆದರೆ ಅಮರ್ತ್ಯ ಸೇನ್‌ರವರ ಮೂಲ ವಿಚಾರವೇನೆಂದರೆ "ಮನುಷ್ಯನಿಗಾಗಿ ಅಭಿವೃದ್ಧಿಯೇ ವಿನಃ ಅಭಿವೃದ್ಧಿಗಾಗಿ ಮನುಷ್ಯನಲ್ಲ". ಅಭಿವೃದ್ಧಿಯು ಮಾನವನ ಬದುಕಿಗೆ ಸಂಬಂಧಿಸಿದ ಒಂದು ಪ್ರಕ್ರಿಯೆ ಒಂದು ಹಂತದಲ್ಲಿ ಅಮರ್ತ್ಯ ಸೇನ್ "ಮಾನವನ ಬದುಕು ಉತ್ತಮಗೊಳ್ಳುವ ಪ್ರಕ್ರಿಯೆಯೇ ಅಭಿವೃದ್ಧಿ" ಎಂದು ಸಾರಿದರು. ಅಮರ್ತ್ಯ ಸೇನ್ ಬಹುಮುಖ್ಯವಾಗಿ ಜನರ "ಧಾರಣಾ ಸಾಮರ್ಥ್ಯ" ಮಾನವ ಮುಖಿ, ಲಿಂಗ ಸಮಾನತೆಯ ಅಭಿವೃದ್ಧಿಯನ್ನು ಪ್ರತಿಪಾದನೆ ಮಾಡಿರುವುದನ್ನು ಕೃತಿಯಲ್ಲಿ ವಿವರವಾಗಿ ಚರ್ಚಿಸಿದ್ದಾರೆ.

**ಚಂದ್ರಶೇಖರ್ ಟಿ.ಆರ್** ರವರ ***"ವಿಜಾಪುರ ಜಿಲ್ಲೆ ಅಭಿವೃದ್ಧಿ ಮತ್ತು ದುಸ್ಥಿತಿ ಒಂದು ಅಧ್ಯಯನ"*** ಕೃತಿಯಲ್ಲಿ ಆರ್ಥಿಕ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿಗಳ ನಡುವಣ ಸಂಬಂಧವನ್ನು ಕೂಲಂಕುಷವಾಗಿ ಪರಿಶಿಲಿಸುವ ಅಗತ್ಯವಿದೆ. ಏಕೆಂದರೆ ಆರ್ಥಿಕ ಅಭಿವೃದ್ಧಿಯೆಂಬುದು ತನ್ನಷ್ಟಕ್ಕೆ ತಾನೆ ಮಾನವ ಅಭಿವೃದ್ಧಿಯಾಗಿ ಪರಿವರ್ತನೆಗೊಳ್ಳುವುದಿಲ್ಲ. ಆರ್ಥಿಕ ಅಭಿವೃದ್ಧಿ ಉನ್ನತ ಮಟ್ಟ ತಲುಪಿದರೂ ಜನರ ಜೀವನ ಮಟ್ಟವು ತೀವ್ರ ಸಂಕಷ್ಟದಲ್ಲೇ ಇರಬಹುದು. ಒಂದು ಪ್ರಸಿದ್ಧ ಪ್ರಬಂಧದಲ್ಲಿ ಖ್ಯಾತ ಅರ್ಥ ವಿಜ್ಞಾನಿ ದೀಪಕ್ ನಯ್ಯರ್ (೨೦೦೬) ಸ್ವಾತಂತ್ರ್ಯಾನಂತರದ ಕಾಲಾವಧಿಯಲ್ಲಿ ವರಮಾನ ವರ್ಧನೆಯನ್ನು ಅಭಿವೃದ್ಧಿಯನ್ನಾಗಿ ಪರಿವರ್ತಿಸಿಕೊಳ್ಳುವಲ್ಲಿ ಸೋತಿರುವುದೇ ಭಾರತದ ಅತಿಮುಖ್ಯ ವೈಫಲ್ಯವೆಂದು ಗುರುತಿಸಿದ್ದಾರೆ. ಆರ್ಥಿಕ ಅಭಿವೃದ್ಧಿಯು ಮಾನವ ಅಭಿವೃದ್ಧಿಯಾಗಿ ಪರಿವರ್ತನೆಯಾಗದಿರುವ ಸಂಗತಿಯನ್ನೇ ಅವರು ಇಲ್ಲಿ ಹೇಳುತ್ತಿದ್ದಾರೆ. ಹನ್ನೊಂದನೆಯ ಯೋಜನೆಯ ಆಶಯ ಪತ್ರಿಕೆಯಲ್ಲಿ ಆರ್ಥಿಕ ಅಭಿವೃದ್ಧಿಯನ್ನು "ಜನರನ್ನು ಒಳಗೊಳ್ಳುವ ಪ್ರಕ್ರಿಯೆ' ಯನ್ನಾಗಿ ಪರಿವರ್ತಿಸುವ ಅಗತ್ಯದ ಬಗ್ಗೆ ಒತ್ತಿ ಹೇಳಲಾಗಿದೆ(ಭಾರತ ಸರ್ಕಾರ: ೨೦೦೬). ಇದರ ಆಧಾರದಲ್ಲಿ ಕೃತಿಯಲ್ಲಿ ವ್ಯಕ್ತವಾಗುವುದೇನೆಂದರೆ, ವಿಜಾಪುರ ಜಿಲ್ಲೆಯ ಅಭಿವೃದ್ಧಿಯು ವರಮಾನ ವರ್ಧನೆಯ ದೃಷ್ಟಿಯಿಂದ ಮತ್ತು ಮಾನವ ಅಭಿವೃದ್ಧಿ ದೃಷ್ಟಿಯಿಂದ ಕೆಳಮಟ್ಟದಲ್ಲಿರುವುದು ಪ್ರಸ್ತುತ ಅಧ್ಯಯನದಿಂದ ತಿಳಿಯುತ್ತದೆ. ಕಳೆದ ೫೦ ವರ್ಷಗಳಲ್ಲಿ ಜಿಲ್ಲೆಯಲ್ಲಿ ಕೃಷಿಯೇತರ ಚಟುವಟಿಕೆಗಳು ವಿಸ್ತೃತವಾಗಿ ಬೆಳೆಯಲಿಲ್ಲ. ಈ ಜಿಲ್ಲೆಯಲ್ಲಿ ಭೂರಹಿತ ಕೃಷಿ ಕೂಲಿಕಾರರ ಪ್ರಮಾಣ ಅಧಿಕವಾಗಿದೆ. ಈ ಜಿಲ್ಲೆಯ ಅಭಿವೃದ್ಧಿ ಸಮಸ್ಯೆಯು ರಾಚನಿಕವಾದುದು ಎಂಬುದು ಇಲ್ಲಿ ಸ್ಪಷ್ಟವಾಗ ಕಂಡುಬರುತ್ತದೆ. ಜನರ ಧಾರಣಾ ಸಾಮರ್ಥ್ಯವನ್ನು ಮಾಪನ ಮಾಡುವ ಮಾನವ ಅಭಿವೃದ್ಧಿ ಸೂಚ್ಯಾಂಕದಲ್ಲೂ ಜಿಲ್ಲೆಯ ಸ್ಥಾನ ಕಳವಳಕಾರಿಯಾಗಿದೆ. ಈ ಕಾರಣದಿಂದಾಗಿಯೇ ಈ ಜಿಲ್ಲೆಯ ಅಭಿವೃದ್ಧಿ ಸವಾಲು ಅಗಾಧವಾದುದೆಂದು ಹೇಳಲಾಗುತ್ತದೆ.

**ಚಂದ್ರಶೇಖರ್ ಟಿ.ಆರ್** ಬರೆದ *"ಜನರನ್ನು ಒಳಗೊಳ್ಳುವ ಅಭಿವೃದ್ಧಿ; ಹೈದರಾಬಾದ್ ಕರ್ನಾಟಕ ಪ್ರದೇಶ"* ಎಂಬ ಗ್ರಂಥದಲ್ಲಿ ಈಗಾಗಲೇ ನಮ್ಮ ಅನುಭವಕ್ಕೆ ಬಂದಿರುವಂತೆ ಅಭಿವೃದ್ಧಿಯು

ತನ್ನಷ್ಟಕ್ಕೆ ತಾನು ಜನರನ್ನು ಒಳಗೊಳ್ಳುವುದು ಸಾಧ್ಯವಿಲ್ಲ. ಅದಕ್ಕೆ ಅಂತಹ ಗುಣವಿರುವುದಿಲ್ಲ. ಅದು ಸಾಮಾನ್ಯವಾಗಿ ಕೆಲವು ಪ್ರಶಸ್ತ ಪ್ರದೇಶಗಳಲ್ಲಿ ಕೆಲವು ಪ್ರತಿಷ್ಠಿತ ಸಾಮಾಜಿಕ ಗುಂಪುಗಳಲ್ಲಿ ಮತ್ತು ಪುರುಷ ವರ್ಗದಲ್ಲಿ ಮಡುಗಟ್ಟಿಕೊಳ್ಳುವ ಪ್ರವೃತ್ತಿ ಹೊಂದಿರುತ್ತದೆ. ಈ ಬಗೆಯ ಪ್ರವೃತ್ತಿಯಿರುವ ಅಭಿವೃದ್ಧಿಯು ಜನರನ್ನು ಒಳಗೊಳ್ಳುವಂತೆ ಮಾಡುವುದು ಸುಲಭವಲ್ಲ. ಇದೊಂದು ಸವಾಲು. ಈ ಸವಾಲನ್ನು ಅವಕಾಶವನ್ನಾಗಿ ಪರಿವರ್ತಿಸಿಕೊಳ್ಳಬೇಕಾಗುತ್ತದೆ. ಜನರನ್ನು ಒಳಗೊಳ್ಳುವ ಅಭಿವೃದ್ಧಿಯೆಂಬುದನ್ನು ಈಗ ಸರ್ಕಾರವು ಹನ್ನೊಂದನೆಯ ಯೋಜನೆಯ ಅಭಿವೃದ್ಧಿಗೆ ಸಂಬಂಧಿಸಿ ದಂತೆ ಅನೇಕ ಬಗೆಯ ಒಡಕುಗಳಿವೆ. ಅದು ಪುರುಷ ಮಹಿಳೆಯರ ನಡುವಿನ ಅಸಮಾನತೆ ಯಿರಬಹುದು. ನಗರ–ಗ್ರಾಮೀಣ ನಡುವಿನ ಒಡಕು ಇರಬಹುದು, ಕೃಷಿ–ಕೈಗಾರಿಕೆಗಳ ನಡುವಿನ ಅಂತರವಿರಬಹುದು ಅಥವಾ ಪ್ರಾದೇಶಿತ ಅಸಮಾನತೆಯಿರಬಹುದು. ಈ ಬಗೆಯ ಅಸಮಾನತೆಗಳನ್ನು ಅಂತರಗಳನ್ನು, ಒಡಕುಗಳನ್ನು ಸರಿಪಡಿಸಿಕೊಳ್ಳಲು ಅವಕಾಶವಿದೆ. ಕರ್ನಾಟಕವು ತನ್ನ ಅಭಿವೃದ್ಧಿ ನೀತಿಯನ್ನು ಮರುರೂಪಿಸಿ ಕೊಳ್ಳಬೇಕಾಗುತ್ತದೆ. ಅಭಿವೃದ್ಧಿಯೆಂಬುದನ್ನು ಕೇವಲ ವರಮಾನವನ್ನು ಹೆಚ್ಚಿಸಿಕೊಳ್ಳುವ ದಿಶೆಯಲ್ಲಿ ನಿರ್ವಹಿಸುವ ಅಗತ್ಯವಿಲ್ಲ. ಅದು ಬೇಕು ಅದಕ್ಕಿಂತ ಅಧಿಕವಾಗಿ ಏರಿಕೆಯಿಂದ ವರಮಾನವು ಜನರ ಬದುಕಾಗಿ ಪರಿವರ್ತನೆಯಾಗಬೇಕು. ಅದು ಜನರ ಅಕ್ಷರವಾಗಬೇಕು. ಜನರ ಆಹಾರ ಭದ್ರತೆಯಾಗಬೇಕು. ಆಗ ಮಾತ್ರ ಅದು ಜನರನ್ನು ಒಳಗೊಳ್ಳುವಂತಾಗುತ್ತದೆ.

ಜನಸಂಖ್ಯೆಯ ಅತಿಯಾದ ಬೆಳವಣಿಗೆ ಒತ್ತಡವೂ ಹೈದರಾಬಾದ್–ಕರ್ನಾಟಕ ಪ್ರದೇಶ ದಲ್ಲಿರುವುದಕ್ಕೂ, ಅಲ್ಲಿ ಭೂರಹಿತ ಕೃಷಿ ಕೂಲಿಕಾರರು ಅಗಾಧವಾಗಿರುವುದಕ್ಕೂ ಮತ್ತು ಸಾಕ್ಷರತಾ ಪ್ರಮಾಣವು ಕೆಳಮಟ್ಟದಲ್ಲಿರುವುದಕ್ಕೂ ನಡುವೆ ಸಂಬಂಧಗಳಿವೆ. ಒಟ್ಟಾರೆ ಇದು ಅತ್ಯಂತ ಸಂಕೀರ್ಣವಾದ ಹಾಗೂ ಬಹುಮುಖಿಯಾದ ಸಂಗತಿಯಾಗಿದೆ. ಕೇವಲ ಬಂಡವಾಳ ವಿನಿಯೋಜನೆ ಸಂಪನ್ಮೂಲಕ ಹಂಚಿಕೆ, ಹೈಕೋರ್ಟ್ ಪೀಠ, ಸಿಈಟಿಯಲ್ಲಿ ಮೀಸಲಾತಿ ಮುಂತಾದ ಸಂಗತಿಗಳಾದ ಸಮಸ್ಯೆಯನ್ನು ಬಗೆಹರಿಸುವುದು ಸಾಧ್ಯವಿಲ್ಲ. ಇವೆಲ್ಲವೂ ಬೇಕು. ಬಂಡವಾಳ ಸಂಪನ್ಮೂಲವಿಲ್ಲದೆ ಅಭಿವೃದ್ಧಿ ಸಾಧ್ಯವಿಲ್ಲ. ಆದರೆ ಸಮಸ್ಯೆಯು ಅನೇಕರು ಭಾವಿಸಿರುವಂತೆ ಸರಳವಾಗಿಲ್ಲ. ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆಯ ಗತಿಶೀಲ ನೆಲೆಗಳನ್ನು ಕುರಿತಂತೆ ವ್ಯಾಪಕವಾಗಿ ಅಧ್ಯಯನಗಳು ನಡೆಯಬೇಕಾದ ಅಗತ್ಯವಿದೆ. ಈ ದಿಶೆಯಲ್ಲಿ ಇದೊಂದು ಸಣ್ಣ ಪ್ರಯತ್ನವಾಗಿದೆ ಎಂದು ವ್ಯಕ್ತವಾಗಿದೆ.

**ಚಂದ್ರಶೇಖರ್ ಟಿ.ಆರ್** ಅವರ *"ಅಮರ್ತ್ಯ ಸೇನರ ಅಭಿವೃದ್ಧಿ ಕಥನ"* ಎಂಬ ಕೃತಿಯಲ್ಲಿ ಅಮರ್ತ್ಯಸೇನ್‌ರ ಜನಾಂದೋಳನ ಸಿದ್ಧಾಂತ(Theory of public Action) ಸಮಾನತೆ–ಅಸಮಾನತೆ ಕುರಿತು ವಿಚಾರ, ಪ್ರಭುತ್ವ ಮತ್ತು ಮಾರುಕಟ್ಟೆ ನಡುವಿನ ಘರ್ಷಣೆ ಮುಂತಾದ ವಿಷಯ ಕುರಿತಂತೆ ಅವರ ಕಾಣಿಕೆ ಮಹತ್ವದ್ದಾಗಿದೆ.

ಈ ಕೃತಿಯಲ್ಲಿ ಭಾರತದ ಸಂದರ್ಭದಲ್ಲಿ ಮುಖ್ಯವೆನಿಸಿರುವ ಕೆಲವು ಸಂಗತಿಗಳನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಸೇನ್ ಅವರಿಗೆ ನೋಬೆಲ್ ಪ್ರಶಸ್ತಿ ಸಂದ ತರುವಾಯ ಇಡೀ ಭಾರತ ಮಟ್ಟದಲ್ಲಿ ಇಂಗ್ಲೀಷ್‌ನಲ್ಲಿ ಮತ್ತು ಕರ್ನಾಟಕದ ಮಟ್ಟದಲ್ಲಿ ಕನ್ನಡದಲ್ಲಿ ಪತ್ರಿಕೆಗಳು ಹಾಗೂ ನಿಯತಕಾಲಿಕೆಗಳು ಲೇಖನಗಳನ್ನು ವರದಿಗಳನ್ನು ವಿಶೇಷವಾಗಿ ಪ್ರಕಟಿಸುತ್ತಿದ್ದವು. ಆದರೆ ಈ ಎಲ್ಲಾ ಲೇಖನ-ಬರಹ ಮತ್ತು ವರದಿಗಳಲ್ಲಿ ಸೇನ್ ಅವರ ಲಿಂಗಸಂಬಂಧಿ ವಿಚಾರಗಳು ಗೈರುಹಾಜರಾಗಿರುವುದು ಎದ್ದುಕಾಣುತ್ತದೆ. ಬದುಕಿನಲ್ಲಿ ಹೇಗೋ ಇಂತಹ ವಿಷಯದಲ್ಲೂ ಮಹಿಳೆಯರಿಗೆ ಸಂಬಂಧಿಸಿದ ವಿಷಯಗಳು ನಿಕೃಷ್ಟೀಕರಣಕ್ಕೆ ಒಳಗಾಗುವುದು ಅಚ್ಚರಿ ಹುಟ್ಟಿಸುತ್ತದೆ. ಅಭಿವೃದ್ಧಿ ಮತ್ತು ಲಿಂಗಸಂಬಂಧಗಳ ನಡುವಿನ ಆಶ್ಲೇಷವನ್ನು ಕುರಿತಂತೆ ಅವರು ನಡೆಸಿರುವ ಅಧ್ಯಯನಗಳು, ಅವರು ರೂಪಿಸಿರುವ ಪರಿಭಾವನೆಗಳು, ಅವರು ಕಟ್ಟಿರುವ ಸಿದ್ಧಾಂತಗಳು ತುಂಬಾ ಮಹತ್ವದ್ದಾಗಿವೆ. ಈ ಕುರಿತು ಪ್ರತ್ಯೇಕ ಅಧ್ಯಯನಗಳು ನಡೆಯಬೇಕಾದ ಅಗತ್ಯವಿದೆ. ಅಭಿವೃದ್ಧಿ ಕುರಿತ ಚರ್ಚೆಗೆ ಲಿಂಗಸಂಬಂಧಿ ಆಯಾಮವನ್ನು ನೀಡಿದ ಕೀರ್ತಿ ಸೇನ್‌ಗೆ ಸಲ್ಲಬೇಕು. ಈ ವಿಷಯ ಕುರಿತಂತೆ ಪ್ರಸ್ತುತ ಪ್ರಬಂಧದಲ್ಲಿ ಕೆಲವು ಸಂಗತಿಗಳನ್ನು ಚರ್ಚಿಸಲಾಗಿದೆ ಎಂದು ಕೃತಿಯಲ್ಲಿ ವ್ಯಕ್ತವಾಗುತ್ತದೆ.

**ಚಂದ್ರಶೇಖರ್ ಟಿ.ಆರ್** ಅವರ "*ಲಿಂಗಸಂಬಂಧಗಳು ಮತ್ತು ಅಭಿವೃದ್ಧಿ*" ಎಂಬ ಕೃತಿಯಲ್ಲಿ ಲಿಂಗ ಸಂಬಂಧಗಳು ಎಂಬ ನುಡಿಯನ್ನು ಜೆಂಡರ್‌ಗೆ ಸಂವಾದಿಯಾಗಿ ಬಳಸಲಾಗಿದೆ. ಅಭಿವೃದ್ಧಿ ಮತ್ತು ಮಹಿಳೆಯರ ನಡುವಿನ ಸಂಬಂಧವನ್ನು ಎಸ್ತರ್ ಬೋಸರ್ ಆರಂಭಿಸಿದ 'ಅಭಿವೃದ್ಧಿಯಲ್ಲಿ ಮಹಿಳೆಯರನ್ನು ಸಂಯೋಜಿಸಬೇಕು' ಎಂಬ ಸೈದ್ಧಾಂತಿಕ ನೆಲೆಯಿಂದ ಚರ್ಚೆಯು ಅಭಿವೃದ್ಧಿ ಮತ್ತು ಲಿಂಗಸಂಬಂಧಗಳ ಎಂಬಲ್ಲಿಗೆ ಬಂದುಮುಟ್ಟಿದೆ. ಸಮಾಜದ ರಾಚನಿಕ ಸಂಗತಿಗಳನ್ನು ಬದಲಾಯಿಸದೆ ಮಹಿಳೆಯರ ಶೋಷಣೆಯನ್ನು ಪರಿಹರಿಸುವುದು ಸಾಧ್ಯವಿಲ್ಲ. ಉದಾರವಾದ ಸ್ತ್ರೀ ವಾದವನ್ನು ಆಧರಿಸಿದ ಬೋಸರಫಳ ಅಭಿವೃದ್ಧಿಯಲ್ಲಿ ಮಹಿಳೆಯರನ್ನು ಸಂಯೋಜಿಸುವ ಪ್ರಣಾಳಿಕೆಯ ಮಿತಿಗಳನ್ನು ಸಮೂಹವಾದಿ – ಮಾರ್ಕ್ಸಿಸ್ಟ್ ಸ್ತ್ರೀವಾದಿಗಳು ಚರ್ಚೆಯ ಮುಂಚೂಣಿಗೆ ತಂದಿದ್ದಾರೆ. ಬಂಡವಾಳಶಾಹಿ ವ್ಯವಸ್ಥೆಯನ್ನು ನಿರ್ಮೂಲನ ಮಾಡುವುದರಿಂದ ಮಹಿಳೆಯರು ಕಾರ್ಮಿಕ ವರ್ಗದ ಭಾಗವಾಗುವುದರಿಂದ ಲಿಂಗ ಅಸಮಾನತೆಯನ್ನು ನಿವಾರಿಸಬಹುದು ಎಂಬುದು ಎಷ್ಟು ಭ್ರಮಾತ್ಮಕವಾದುದು ಎಂಬುದನ್ನು ಉಗ್ರ ಸ್ತ್ರೀವಾದಿಗಳು ತೋರಿಸಿಕೊಟ್ಟಿದ್ದಾರೆ. ಪೇಟ್ರಿಯಾರ್ಕಿ ಮತ್ತು ಬಂಡವಾಳಶಾಹಿ ಎರಡನ್ನೂ ಇಂದು ನಾವು ಏಕಕಾಲಕ್ಕೆ ಎದುರಿಸಬೇಕಾಗಿದೆ. ಸಮೀಕರಣ ರೂಪದ ಕಾರ್ಯಕ್ರಮಗಳಿಂದ ಮಹಿಳೆಯರ ಶೋಷಣೆಯನ್ನು ಮುಕ್ತಗೊಳಿಸಲು ಬರುವುದಿಲ್ಲ. ಲಿಂಗ ಅಸಮಾನತೆಗೂ ಮತ್ತು ಇತರೆ ಅಸಮಾನತೆಗಳಿಗೂ ಇರುವ ಭಿನ್ನತೆಯನ್ನು ನಾವು ಪರಿಗಣಿಸಬೇಕು. ಇತರೆ ಅಸಮಾನತೆಗಳು ಭಾವನಾತ್ಮಕ ಸಂಬಂಧಗಳಿಗೆ ಸಂಬಂಧಿಸಿರುವುದಿಲ್ಲ. ವರ್ಗ ಸಂಬಂಧಿ ಅಸಮಾನತೆ ಇರಬಹುದು, ಉದ್ಯೋಗಕ್ಕೆ ಸಂಬಂಧಿಸಿದ ಅಸಮಾನತೆ ಇರಬಹುದು, ಪ್ರಾದೇಶಿಕ ಅಸಮಾನತೆ ಇರಬಹುದು. ಇವೆಲ್ಲ ಜನರಿಗೆ ಬಾಹ್ಯವಾದ ಸಂಗತಿಗಳಿಗೆ ಸಂಬಂಧಿಸಿದ

ಸಂಗತಿಗಳಾಗಿವೆ. ಆದರೆ ಲಿಂಗ ಅಸಮಾನತೆ ಎಂಬುದು ಮನುಷ್ಯ-ಮನುಷ್ಯರ ನಡುವಿನ, ತಾಯಿ-ಮಕ್ಕಳ ನಡುವಿನ, ಗಂಡ-ಹೆಂಡತಿಯ, ಅಣ್ಣ-ತಮ್ಮ, ತಂಗಿ-ಅಕ್ಕ ನಡುವಿನ ಅತ್ತೆ-ಸೊಸೆ ನಡುವಿನ ಸಂಬಂಧಗಳ ಪರಿಯು ಭಿನ್ನವಾದದು. ಆದ್ದರಿಂದ ಲಿಂಗ ಅಸಮಾನತೆಯೆಂಬುದು ಅನೇಕ ಸಂದರ್ಭದಗಳಲ್ಲಿ ಅಗೋಚರವಾದುದು. ಈ ಕಾರಣಕ್ಕೆ ಅದರ ನಿವಾರಣೆಯು ಸರಳವಾದ ಸಂಗತಿಯಲ್ಲ. ಈ ಅಸಮಾನತೆಯ ನಿವಾರಣೆ ಎಂದರೆ ಕೇವಲ ಮಹಿಳೆಯರು ಪುರುಷರಂತಾಗುವುದಲ್ಲ. ಇದರಿಂದ ಪ್ರಯೋಜನವಿಲ್ಲ, ಸಮಾನತೆಯಿಂದ ಕೂಡಿದ ಸಮೃದ್ಧವಾದ ಸಾಮಾಜಿಕ ನ್ಯಾಯವನ್ನು ಆಧರಿಸಿದ ನೆಲೆಯಲ್ಲಿ ಲಿಂಗ ಅಸಮಾನತೆಯನ್ನು ನಿವಾರಿಸುವ ಬಗ್ಗೆ ನಾವು ಯೋಚಿಸಬೇಕಾಗಿದೆ ಎಂಬ ಪ್ರಶ್ನೆಗಳನ್ನು ಎತ್ತುತ್ತಾ ಈ ಕೃತಿಯಲ್ಲಿ ಅಭಿಪ್ರಾಯಗಳು ಹೊರಹೊಮ್ಮಿವೆ.

ಸಾಂಪ್ರದಾಯಿಕ ಅಭಿವೃದ್ಧಿ ಸಿದ್ಧಾಂತಗಳಲ್ಲಿ ಸರಕು ಸಾಮಗ್ರಿಗಳಿಗೆ ನೀಡಿದಷ್ಟು ಮಹತ್ವವನ್ನು ಜನರಿಗೆ ಮಹಿಳೆಯರನ್ನು ಒಳಗೊಂಡಂತೆ ಜನರ ಧಾರಣಾ ಸಾಮರ್ಥ್ಯಕ್ಕೆ ನೀಡಿಲ್ಲ. ಅಭಿವೃದ್ಧಿ ಕುರಿತಂತೆ ಅಮರ್ತ್ಯ ಸೇನ್‌ರ ಬಹುಮುಖ್ಯ ಟೀಕೆ ಇದಾಗಿದೆ. ಅರ್ಥಶಾಸ್ತ್ರದ ಬಹುಪಾಲು ಸಂಗತಿಗಳು ಒಂದು ಕಡೆ ಸರಕು, ಸಾಮಗ್ರಿ, ಸೇವೆಗಳು ಮತ್ತು ಇನ್ನೊಂದು ಕಡೆ ಜನರು ಇವೆರಡರ ನಡುವೆ ಇರುವ ಸಂಬಂಧದ ಜಗತ್ತಿಗೆ ಸೇರುತ್ತದೆ. ಸರಕು ಸಾಮಗ್ರಿ ಮತ್ತು ಸೇವೆಗಳನ್ನು ಉತ್ಪಾದಿಸಲು, ಅವುಗಳನ್ನು ಹೇಗೆ ವ್ಯವಸ್ಥೆ ಮಾಡಿಕೊಳ್ಳುತ್ತಾರೆ, ಅವುಗಳ ಮೇಲೆ ಜನರು ಹೇಗೆ ತಮ್ಮ ಹಕ್ಕುದಾರಿಕೆ ಸ್ಥಾಪಿಸಿಕೊಳ್ಳುತ್ತಾರೆ, ಜನರು ಏನು ಮಾಡುತ್ತಾರೆ ಮತ್ತು ಅವುಗಳಿಂದ ಜನರು ಏನನ್ನು ಪಡೆಯುತ್ತಾರೆ? ಎಂಬ ಸಂಗತಿಗಳ ಅಧ್ಯಯನವೇ ಅರ್ಥಶಾಸ್ತ್ರ (೧೯೮೫).

**೧.೫.೨. ಮಾನವ ಅಭಿವೃದ್ಧಿ ಕುರಿತ ಸೈದ್ಧಾಂತಿಕ ಅಧ್ಯಯನಗಳ ಸಮೀಕ್ಷೆ**

ಈ ಭಾಗದಲ್ಲಿ ಅಮರ್ತ್ಯಸೇನ್ ಅವರ ಅಧ್ಯಯನಗಳಿಂದ ಆರಂಭ ಮಾಡದೆ ಬೇರೆ ಮಾರ್ಗವಿಲ್ಲ. ಮಾನವ ಅಭಿವೃದ್ಧಿ ಸಿದ್ಧಾಂತದ ರೂವಾರಿಗಳಾದ ಅಮಾರ್ತ್ಯಸೇನ್ ಮತ್ತು ಮೆಹಬೂಬ್ ಉಲ್ ಹಕ್ ಅವರ ಅಧ್ಯಯನಗಳು ಇಂದು ವಿಶ್ವಾದ್ಯಂತ ಮನ್ನಣೆಗೆ ಒಳಗಾಗಿವೆ. ಈ ವಿಷಯ ಕುರಿತು ಸೇನ್ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅವುಗಳೆಲ್ಲಾವು ಕಿರೀಟಪ್ರಾಯವಾದವು 'ಡೆವಲಪ್‌ಮೆಂಟ್ ಆಸ್ ಫ್ರೀಡಮ್'. (ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನವದೆಹಲಿ, ೧೯೯೯). ಈ ಕೃತಿಯಲ್ಲಿ ವಿವಿಧ ಅಧ್ಯಾಯಗಳಲ್ಲಿ ಅವರು ಮಾನವ ಅಭಿವೃದ್ಧಿ ವಿವಿಧ ಸೈದ್ಧಾಂತಿಕ ಆಯಾಮಗಳನ್ನು ಚರ್ಚಿಸಿದ್ದಾರೆ. ಈ ಕೃತಿಯಲ್ಲಿ ಪ್ರಮುಖ ಪ್ರತಿಪಾದನೆ ಅಂದರೆ 'ಸ್ವಾತಂತ್ರ್ಯ ಅನ್ನುವುದು ಅಭಿವೃದ್ಧಿ-ಮಾನವ ಅಭಿವೃದ್ಧಿಯ ಪ್ರಧಾನ ಸಾಧನವೂ ಹೌದು ಮತ್ತು ಅದು ಅದರ ಪ್ರಮುಖ ಗುರಿಯೂ ಹೌದು'. ಎರಡನೆಯ ಪ್ರತಿಪಾದನೆ 'ಅಭಿವೃದ್ಧಿಯು ಮಾನವ ಹಕ್ಕು'. ಮೂರನೆಯದು ಅಭಿವೃದ್ಧಿಯಲ್ಲಿ 'ಮಹಿಳೆಯರ ಪಾಲು, ಅಭಿವೃದ್ಧಿಗೆ ಮಹಿಳೆಯರ ಕಾಣಿಕೆಯು ಅಪಾರವಾಗಿದೆ. ನಾಲ್ಕನೆಯದು ಬರ ಅನ್ನುವುದು ಜನರ ಹಕ್ಕುದಾರಿಕೆಯ ಕುಸಿತದಿಂದ ಉಂಟಾಗುತ್ತದೆಯೇ ವಿನಃ ಅದು ಆಹಾರೋತ್ಪಾದನೆಯ ಕುಸಿತದಿಂದ ಉಂಟಾಗುವುದಿಲ್ಲ.

ಈ ಕೃತಿಯಲ್ಲಿ ಅಭಿವೃದ್ಧಿಯಲ್ಲಿ ಆರೋಗ್ಯ, ಅಕ್ಷರ, ಆಹಾರ, ಲಿಂಗ ಸಮಾನತೆ ಮುಂತಾದವುಗಳ ಪಾತ್ರವನ್ನು ಕುರಿತಂತೆ ಅವರು ಚರ್ಚೆ ಮಾಡಿದ್ದಾರೆ. ಇಲ್ಲಿ ಅವರು ಬಂಡವಾಳ, ಉತ್ಪಾದನೆ, ವರಮಾನ, ಉಳಿತಾಯ ಮುಂತಾದ ಶುದ್ಧ ಆರ್ಥಿಕ ಸಂಗತಿಗಳ ಬಗ್ಗೆ ಮಾತನಾಡುವುದಿಲ್ಲ. ಇಲ್ಲಿ ಒಂದು ಪ್ರಶ್ನೆ ಮೂಡಬಹುದು. ಈ ಸಿದ್ಧಾಂತಕ್ಕೂ ಮತ್ತು ದಲಿತರ ಅಭಿವೃದ್ಧಿಗೂ ಏನು ಸಂಬಂಧ ಎಂಬ ಪ್ರಶ್ನೆ ಇಲ್ಲಿ ಉದ್ಭವವಾಗಬಹುದು. ಇದಕ್ಕೆ ಉತ್ತರವೆಂದರೆ ಸೇನ್ ಪ್ರಕಾರ ಅಭಿವೃದ್ಧಿ ಅನ್ನುವುದು ಸ್ವಾತಂತ್ರ್ಯಗಳಿಂದ ವಂಚಿತರಾದ ಜನರಿಗೆ ಸಂಬಂಧಿಸಿದ ಸಂಗತಿಯೇ ವಿನಃ ಉಳ್ಳವರಿಗೆ ಸಂಬಂಧಿಸಿದ ಸಂಗತಿಯಲ್ಲ. ಈ ಕೃತಿಯಲ್ಲಿ ಸೇನ್ ಬಡತನ, ಹಸಿವು, ಅನಕ್ಷರತೆ, ಅನಾರೋಗ್ಯ, ಅಸಮಾನತೆ, ಮಹಿಳೆಯರ ದುಸ್ಥಿತಿ ಮುಂತಾದವುಗಳನ್ನು ಅಸ್ವಾತಂತ್ರ್ಯಗಳೆಂದು ಕರೆಯುತ್ತಾರೆ. ಈ ಅಸ್ವಾತಂತ್ರ್ಯಗಳನ್ನು ನಿವಾರಣೆ ಮಾಡುವುದೇ ಅಭಿವೃದ್ಧಿ ಎಂದು ನಿರ್ವಚಿಸುತ್ತಾರೆ. ಈ ಅಸ್ವಾತಂತ್ರ್ಯಗಳು ನಮ್ಮ ಸಮಾಜದಲ್ಲಿ ಯಾವ ವರ್ಗದಲ್ಲಿ ತೀವ್ರತರವಾಗಿದೆ? ಇದಕ್ಕೆ ಉತ್ತರ ದಲಿತರು ಎಲ್ಲ ಬಗೆಯ ಅಂದರೆ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಸ್ವಾತಂತ್ರ್ಯಗಳಿಂದ ವಂಚಿತರಾಗಿದ್ದಾರೆ. ಹೀಗೆ ವಂಚಿತರಾದ ಜನವರ್ಗದ ನೆಲೆಯಿಂದ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳಬೇಕು ಎಂಬುದು ಅವರ ಪ್ರಮುಖ ಪ್ರತಿಪಾದನೆಯಾಗಿದೆ. ಈ ಬಗೆಯ ಅಭಿವೃದ್ಧಿ ಪ್ರಣಾಳಿಕೆಯನ್ನು ಅವರು ಜಾನ್ ರಾಲ್ಸ್‌ನ ಸಾಮಾಜಿಕ ನ್ಯಾಯ ಸಿದ್ಧಾಂತದ ಮೂಲಕ ಸಾಧಿಸುತ್ತಾರೆ.

ಈ ಕೃತಿಯಲ್ಲಿ ಮತ್ತು ತಮ್ಮ ಮತ್ತೊಂದು ಅಭಿಜಾತ ಕೃತಿ **'ದಿ ಐಡಿಯಾ ಆಫ್ ಜಸ್ಟೀಸ್'** (ಫೆನ್‌ಗ್ವಿನ್ ಬುಕ್ಸ್, ಲಂಡನ್,೨೦೦೯)ನಲ್ಲಿ ರಾಲ್ಸ್‌ನ ಸಾಮಾಜಿಕ ನ್ಯಾಯದ ಎರಡನೆಯ ಸೂತ್ರವಾದ 'ಭಿನ್ನತೆಯ ನಿಯಮ'ದ ಬಗ್ಗೆ ಕೂಲಂಕಷವಾಗಿ ಚರ್ಚೆ ಮಾಡಿದ್ದಾರೆ. ಸೇನ್ ಪ್ರಕಾರ ಅಭಿವೃದ್ಧಿಯಲ್ಲಿ ಎರಡು ಪ್ರಮುಖ ಸಂಗತಿಗಳಿವೆ; ಸಮಾನತೆ ಮತ್ತು ಸಾಮಾಜಿಕ ನ್ಯಾಯ. ಬರಗಾಲ, ಹಸಿವು ಮತ್ತು ಅಭಿವೃದ್ಧಿ ನಡುವಿನ ಸಂಬಂಧ ಕುರಿತಂತೆ ಅವರ ಪ್ರಮುಖ ಕೃತಿ 'ಫಾವರ್ಟಿ ಆಂಡ್ ಫ್ಯಾಮೈನ್ಸ್: ಅನ್ ಎಸ್ಸೆ ಆನ್ ಎನ್‌ಟೈಟಲ್‌ಮೆಂಟ್ ಆಂಡ್ ಡಿಪ್ರೈವೇಶನ್'.(ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಆಕ್ಸಫರ್ಡ್, ೧೯೮೧). ಇದರಲ್ಲಿ ಅವರ ಅಭಿಜಾತ ಪ್ರತಿಪಾದನೆಯೆಂದರೆ 'ಹಸಿವು ಅನ್ನುವುದು ಜನರ ಹಕ್ಕುದಾರಿಕೆಯ ವೈಫಲ್ಯದಿಂದ ಉಂಟಾಗುತ್ತದೆ ವಿನಃ ಆಹಾರೋತ್ಪಾದನೆಯ ಕುಸಿತದಿಂದ ಉಂಟಾಗುವುದಿಲ್ಲ'. ಅವರ ಕೃತಿ ಸದರಿ ವಾಕ್ಯದಿಂದ ಆರಂಭವಾಗುತ್ತದೆ. ದಲಿತರು ದುಸ್ಥಿತಿಯನ್ನು ಅನುಭವಿಸುತ್ತಿದ್ದರೆ ಅದು ಉತ್ಪಾದನೆಯ, ವರಮಾನದ ಕೊರತೆಯ ಪರಿಣಾಮವಲ್ಲ. ಇದು ಅಸ್ಪೃಶ್ಯತೆಯ, ಸಾಮಾಜಿಕ ಪ್ರತ್ಯೇಕತೆಯ ಪರಿಣಾಮವಾಗಿದೆ. ದಲಿತರ ಅಭಿವೃದ್ಧಿ ದೃಷ್ಟಿಯಿಂದ ಸಾಮಾಜಿಕ ನ್ಯಾಯ ಮತ್ತು ಸಾಮಾಜಿಕ ಪರಿವರ್ತನೆಯ ಪಾತ್ರ ನಿರ್ಣಾಯಕವಾದುದಾಗಿದೆ ಎಂಬುದು ಸೇನ್ ಅವರ ಕೃತಿಯ ಒಳನೋಟವಾಗಿದೆ.

**ಮೆಹಬೂಬ್ ಉಲ್ ಹಕ್** ಅವರು ತಮ್ಮ 'ರಿಫ್ಲೆಕ್ಷನ್ ಆನ್ ಹ್ಯೂಮನ್ ಡೆವಲಪ್‌ಮೆಂಟ್' (ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನವ ದೆಹಲಿ ೧೯೯೭)ಯಲ್ಲಿ ಅವರು ಮಾನವ ಅಭಿವೃದ್ಧಿ

ಸೂಚ್ಯಂಕವನವನ್ನು ರಚಿಸಿದ ಕ್ರಮವನ್ನು, ಅದರ ಉದ್ದೇಶವನ್ನು ಪ್ರಸ್ತುತಪಡಿಸಿದ್ದಾರೆ. ಇವರು ತಮ್ಮ ಮೊದಲ ಮಾನವ ಅಭಿವೃದ್ಧಿ ವರದಿಯಲ್ಲಿ(೧೯೯೦) ಪ್ರತಿಪಾದಿಸಿದ್ದ 'ವರಮಾನವೇ ಜನರ ಬದುಕಿನ ಮೊತ್ತವಲ್ಲ' ಎಂಬ ಘೋಷಣೆಯ ಮೂಲದಲ್ಲಿರುವ ಪ್ರಮೇಯವನ್ನು ವಿವರಿಸಿದ್ದಾರೆ. ಸಾಂಪ್ರದಾಯಿಕ ಅಭಿವೃದ್ಧಿ ಸಿದ್ಧಾಂತದಲ್ಲಿ ಅಭಿವೃದ್ಧಿಯನ್ನು ಮಾಪನ ಮಾಡಲು ಜಿ.ಡಿ.ಪಿ ಅನ್ನುವ ಮಾಪನವಿತ್ತು. ಅದಕ್ಕಾಗಿ ಅವರು ಈ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ರೂಪಿಸಿದರು. ಜಿ.ಡಿ.ಪಿ.ಯು ಏಕಸೂಚಿ ಆಧಾರಿತ ಮಾಪನವಾದರೆ ಮಾನವ ಅಭಿವೃದ್ಧಿ ಸೂಚ್ಯಂಕವು ಬಹುಸೂಚಿ ಮಾಪನವಾಗಿದೆ. ಆರೋಗ್ಯ, ಶಿಕ್ಷಣ ಮತ್ತು ವರಮಾನ—ಮೂರನ್ನು ಸಮಗ್ರವಾಗಿ ಒಳಗೊಳ್ಳುವ ಮಾಪನ ಮಾನವ ಅಭಿವೃದ್ಧಿ ಸೂಚ್ಯಂಕವಾಗಿದೆ.

**ಮಾರ್ಥ ನುಸುಬೌಮ್** ಅವರು ತಮ್ಮ ಕೃತಿಯಲ್ಲಿ (ಹ್ಯೂಮನ್ ಡೆವಲಪ್‌ಮೆಂಟ್: ದಿ ಕೆಪಬಲಿಟಿ ಅಪ್ರೋಚ್) ಅಭಿವೃದ್ಧಿ ಮತ್ತು ಮಹಿಳೆಯರು ಹಾಗೂ ಮಾನವ ಹಕ್ಕುಗಳ ನಡುವಿನ ಸಂಬಂಧವನ್ನು ಇದರಲ್ಲಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಎಲ್ಲಕ್ಕಿಂತ ಮುಖ್ಯವಾಗಿ ಇದರಲ್ಲಿ ಅವರು 'ಧಾರಣ ಶಕ್ತಿ'ಯನ್ನು ನಿರ್ಧರಿಸುವ ಅನೇಕ ಸೂಚಿಗಳನ್ನು ಕುರಿತಂತೆ ಚರ್ಚೆ ಮಾಡಿದ್ದಾರೆ. ಅಮರ್ತ್ಯಸೇನ್ ಅವರು ಧಾರಣ ಶಕ್ತಿಯ ಕುರಿತು ಮಾತನಾಡುತ್ತಾರೆ. ಆದರೆ ಅವರು ಅದನ್ನು ನಿರ್ಧರಿಸುವ ಸೂಚಿಗಳನ್ನು ಬಗ್ಗೆ ಮಾತನಾಡುವುದಿಲ್ಲ. ನುಸುಬೌಮ್ ಅವರು ಆ ಕೊರತೆಯನ್ನು ಇಲ್ಲಿ ತುಂಬಿ ಕೊಟ್ಟಿದ್ದಾರೆ. ಈ ಸೂತ್ರಗಳನ್ನು ದಲಿತರ ಅಭಿವೃದ್ಧಿ ಕುರಿತ ಚರ್ಚೆಯಲ್ಲಿ ಬಳಸಬಹುದಾಗಿದೆ.

**ಅಮರ್ತ್ಯಸೇನ್ ಮತ್ತು ಜೀನ್ ಡ್ರೀಜ್** ಜೊತೆಯಾಗಿ ಪ್ರಕಟಿಸಿರುವ 'ಇಂಡಿಯಾ: ಡೆವಲಪ್‌ಮೆಂಟ್ ಆಂಡ್ ಆಪರ್ಚುನ್ಯುಟಿ'ಯಲ್ಲಿ (೧೯೯೯) ಮತ್ತು ಇತ್ತೀಚೆಗೆ ಪ್ರಕಟವಾಗಿರುವ ಅವರ 'ಆನ್ ಅನ್‌ಸರ್ಟನ್ ಗ್ಲೋರಿ ಆಂಡ್ ಇಟ್ಸ್ ಕಾಂಟ್ರಡಿಕ್ಷನ್ಸ್'ನಲ್ಲಿ ದಲಿತರ ಅಭಿವೃದ್ದಿ ಕುರಿತಂತೆ ಚರ್ಚೆ ಮಾಡಿದ್ದಾರೆ. ದಲಿತರು ಮತ್ತು ದಲಿತೇತರ ನಡುವಿನ ಅಭಿವೃದ್ಧಿ ಸಂಬಂಧಿ ಭಿನ್ನತೆಯನ್ನು ೧೯೦೧ರ ಸಾಕ್ಷರತೆಗೆ ಸಂಬಂಧಿಸಿದ ಮಾಹಿತಿ ಆಧಾರದ ಮೇಲೆ ಚರ್ಚಿಸುತ್ತಾರೆ. ಭಾರತದ ವಿವಿಧ ಭಾಗಗಳಲ್ಲಿ ೧೯೦೧ರಲ್ಲಿದ್ದ ಸಮುದಾಯವಾರು ಸಾಕ್ಷರತೆಯ ವಿವರವನ್ನು ಕೆಳಗಿನ ಕೋಷ್ಟಕದಲ್ಲಿ ನೀಡಿದ್ದಾರೆ.

**ಕೋಷ್ಟಕ ೧.೪. ಜಾತಿ, ಲಿಂಗ ಸಂಬಂಧಗಳು ಮತ್ತು ಸಾಕ್ಷರತೆ: ಚಾರಿತ್ರಿಕ ಹಿನ್ನೆಲೆ ೧೯೦೧**

| ಪ್ರಾಂತಗಳು | ಸಾಕ್ಷರತಾ ಪ್ರಮಾಣ(ಶೇ) ಬ್ರಾಹ್ಮಣರು | | ಸಾಕ್ಷರತಾ ಪ್ರಮಾಣ(ಶೇ) ಪರಿಶಿಷ್ಟ ಜಾತಿ | |
|---|---|---|---|---|
| | ಪುರುಷರು | ಮಹಿಳೆಯರು | ಪುರುಷರು | ಮಹಿಳೆಯರು |
| ಬರೋಡ ರಾಜ್ಯ | ೭೩ | ೫.೬ | ೧.೨ | ೦೦ |
| ಮೈಸೂರು ಸಂಸ್ಥಾನ | ೬೮.೧ | ೬.೪ | ೦.೯ | ೦.೧ |
| ಬಾಂಬೆ ಪ್ರಾಂತ | ೫೮.೦೦ | ೫.೪ | ೦.೭ | ೦೦ |
| ಮದರಾಸು ಪ್ರಾಂತ | ೫೭.೮ | ೪.೪ | ೧.೦ | ೦೦ |
| ಯುನೈಟೆಡ್ ಪ್ರಾಂತ | ೫೫.೩ | ೪.೬ | ೦.೨ | ೦೦ |
| ಸೆಂಟ್ರಲ್ ಪ್ರಾಂತ | ೩೬.೫ | ೦.೯ | ೦.೪ | ೦೦ |

ಮೂಲ: ಜೀನ್ ಡ್ರೀಜ್ ಮತ್ತು ಅಮರ್ತ್ಯ ಸೆನ್ ೨೦೧೪. **ಆನ್ ಅನ್‌ಸರ್ಟನ್ ಗ್ಲೋರಿ: ಇಂಡಿಯಾ ಆಂಡ್ ಇಟ್ಸ್ ಕಾಂಟ್ರಡಿಕ್ಷನ್ಸ್.** ಫೆಂಗ್ವಿನ್ ಬುಕ್ಸ್. ಪು ೨೧೪.

ಈ ಕೋಷ್ಟಕದಲ್ಲಿ ಸ್ಪಷ್ಟವಾಗುವಂತೆ ೧೯೦೧ರಲ್ಲಿ ಬ್ರಾಹ್ಮಣರು ಮತ್ತು ಪ.ಜಾ.ಗಳ ನಡುವಿನ ಸಾಕ್ಷರತೆಯಲ್ಲಿ ಅಸಮಾನತೆಯನ್ನು ಗಮನಿಸಿದರೆ ಹೇಗೆ ಅನೂಚಾನವಾಗಿ ದಲಿತರು ಅನುಭವಿಸಿಕೊಂಡು ಬರುತ್ತಿರುವ ತಾರತಮ್ಯ ಮತ್ತು ಸಾಮಾಜಿಕ ಪ್ರತ್ಯೇಕತೆಯ ಒಂದು ಚಿತ್ರಣವನ್ನು ತಿಳಿದುಕೊಳ್ಳಬಹುದು. ಇಂದಿಗೂ ಅದು ಮುಂದುವರಿದಿದೆ(ನೋಡಿ ಕೋಷ್ಟಕ ೧.೪). ಕರ್ನಾಟಕದಲ್ಲಿ ೨೦೧೧ರಲ್ಲಿ ಒಟ್ಟು ಜನಸಂಖ್ಯೆಯ ಸಾಕ್ಷರತೆಯು ಶೇ.೭೫.೩೬ರಷ್ಟಿದ್ದರೆ ದಲಿತರ ಸಾಕ್ಷರತಾ ಪ್ರಮಾಣ ಶೇ.೬೫.೬೨ರಷ್ಟಿದೆ. ಇಲ್ಲಿನ ತಾರತಮ್ಯದ ಪ್ರಮಾಣ ಶೇ.೭೪ ಅಂಶಗಳು.

### ೧.೫.೩. ಆರೋಗ್ಯಕ್ಕೆ ಸಂಬಂಧಿಸಿದ ಸಾಮಾಜಿಕ ಅಸಮಾನತೆ

ಕರ್ನಾಟಕಕ್ಕೆ ಸಂಬಂಧಿಸಿದಂತೆ ಮತ್ತು ದೇಶಕ್ಕೆ ಸಂಬಂಧಿಸಿದಂತೆ ಆರೋಗ್ಯದ ಸಾಮಾಜಿಕ ಗುಂಪುವಾರು ಸ್ಥಿತಿಗತಿಯ ಬಗ್ಗೆ ಅನೇಕ ಅಧ್ಯಯನಗಳು ಬೆಳಕು ಚೆಲ್ಲುತ್ತವೆ.

ಸೋಬಿನ್ ಜಾರ್ಜ್ ಅವರ ಅಧ್ಯಯನದಲ್ಲಿ ಕಂಡುಕೊಂಡ ಒಂದು ಸಂಗತಿಯೆಂದರೆ ಆರೋಗ್ಯ ಸೇವೆಯಲ್ಲಿರುವ ಮಾನವ ಸಂಪನ್ಮೂಲ ದಲಿತೇತರೇ ಆಗಿದ್ದಾರೆ. ವೈದ್ಯರು, ಅರೆ ವೈದ್ಯಕೀಯ ಸಿಬ್ಬಂದಿ, ಆಶಾ ಕಾರ್ಯಕರ್ತರು ಹೀಗೆ ಎಲ್ಲರೂ ಸಮಾಜದ ಉನ್ನತ ವರ್ಗಕ್ಕೆ ಸೇರಿದ್ದಾರೆ. ಸಹಜವಾಗಿ ಅವರೆಲ್ಲರೂ ದಲಿತರ ಕೇರಿಗೆ ಪ್ರವೇಶಿಸಲು ಹಿಂಜರಿಯುತ್ತಾರೆ. ಆದ್ದರಿಂದ ಸಾಮಾಜಿಕ ಪ್ರತ್ಯೇಕೀಕರಣದ ಕಾರಣವಾಗಿ ದಲಿತರು ಪ್ರಾಥಮಿಕ ಆರೋಗ್ಯ ಸೇವೆಯಿಂದ ವಂಚಿತರಾಗಿದ್ದಾರೆ. ವರಮಾನ, ಬಂಡವಾಳ, ಉದ್ಯೋಗ ಮುಂತಾದ ಕ್ಷೇತ್ರಗಳಲ್ಲಿ ಅವರು ಎದುರಿಸುತ್ತಿರುವ ಶೋಷಣೆಯು ಆರೋಗ್ಯ ವಿಸ್ತರಣೆ ಯಾಗಿರುವುದರಿಂದ ಅವರ ಬದುಕು ತೀವ್ರ

ದುಸ್ಥಿತಿಯಲ್ಲಿದೆ. ಹ್ಯೂಮನ್ ರೈಟ್ಸ್ ಪೋರಮ್ ಫಾರ್ ದಲಿತ್ ಲಿಬರೇಶನ್ ಸಂಸ್ಥೆಯು ೨೦೦೯-೧೦ನೆಯ ಸಾಲಿನಲ್ಲಿ ಕರ್ನಾಟಕದ ಉತ್ತರ ಭಾಗದ ಜಿಲ್ಲೆಗಳು ಅನುಭವಿಸಿದ ಪ್ರವಾಹ ಮತ್ತು ಅದರಿಂದ ಉಂಟಾದ ಹಾನಿಯನ್ನು ಹಾಗೂ ಅದಕ್ಕೆ ಸರ್ಕಾರವು ವ್ಯವಸ್ಥೆ ಮಾಡಿದ್ದ ಪರಿಹಾರ ಕಾರ್ಯಕ್ರಮದ ಬಗ್ಗೆ ಕ್ಷೇತ್ರಕಾರ್ಯ ಮಾಡಿ ವರದಿ ಸಿದ್ಧಪಡಿಸಿದ್ದಾರೆ. ಅವರ ಅಧ್ಯಯನದ ಪ್ರಕಾರ ಪ್ರವಾಹ ಸಂತ್ರಸ್ಥ ದಲಿತರಿಗೆ ಅದರ ಪರಿಹಾರ ವ್ಯವಸ್ಥಿವಾಗಿ ತಲುಪಲಿಲ್ಲ. ಅದನ್ನೆಲ್ಲ ಸಮಾಜನ ಉನ್ನತ ವರ್ಗವು ಸುಲಭವಾಗಿ ಮತ್ತು ಹೆಚ್ಚಾಗಿ ಪ್ರವಾಹ ಪರಿಹಾರ ಪಡೆದುದನ್ನು ವರದಿಯಲ್ಲಿ ತೋರಿಸಿದ್ದಾರೆ.

ಕೋಷ್ಟಕ ೧.೫. ಒಟ್ಟು ಮಕ್ಕಳಲ್ಲಿ ಶಿಫಾರಸ್ಸು ಮಾಡಿರುವುದಕ್ಕಿಂತ ಕಡಿಮೆ ತೂಕದ ಮಕ್ಕಳ ಶೇಕಡವಾರು ಪ್ರಮಾಣ

| ವಿವರಗಳು | ಎನ್ ಎಫ್ ಎಚ್ ಎಸ್ ೨. ೧೯೯೮–೯೯ | | | | ಎನ್ ಎಫ್ ಎಚ್ ಎಸ್ ೩. ೨೦೦೫–೦೬ | | | |
|---|---|---|---|---|---|---|---|---|
| | ಪ.ಜಾ. (ಶೇ.) | ಪ.ಪಂ. (ಶೇ.) | ಪರಿಶಿಷ್ಟರನ್ನು ಬಿಟ್ಟು ಇತರರು(ಶೇ.) | ಒಟ್ಟು (ಶೇ.) | ಪ.ಜಾ. (ಶೇ.) | ಪ.ಪಂ. (ಶೇ.) | ಪರಿಶಿಷ್ಟರನ್ನು ಬಿಟ್ಟು ಇತರರು (ಶೇ.) | ಒಟ್ಟು (ಶೇ.) |
| ಕರ್ನಾಟಕ | ೫೨.೭ | ೫೭.೧ | ೪೦.೫ | ೪೩.೯ | ೪೨ | ೪೬.೭ | ೩೫.೮ | ೩೭.೬ |
| ಭಾರತ | ೫೩.೩. | ೫೬.೩ | ೪೪.೧ | ೪೭.೧ | ೪೭.೮ | ೫೪.೪ | ೩೯.೪ | ೪೨.೬ |

ಕೋಷ್ಟಕದಲ್ಲಿ ತೋರಿಸಿರುವಂತೆ ಎರಡು ಕಾಲಘಟ್ಟದಲ್ಲಿ ಪರಿಶಿಷ್ಟ ಜಾತಿ ಮಕ್ಕಳ ತೂಕವು ಪರಿಶಿಷ್ಟೇತರ ಜನವರ್ಗದ ಮಕ್ಕಳಲ್ಲಿನ ತೂಕಕ್ಕಿಂತ ಕೆಳಮಟ್ಟದಲ್ಲಿದೆ. ಇದೇ ಅಧ್ಯಯನದಲ್ಲಿ ತಿಳಿಸಿರುವಂತೆ ಆರೋಗ್ಯ ಸಿಬ್ಬಂದಿ ಮತ್ತು ನರ್ಸುಗಳಲ್ಲಿ ಪ.ಜಾ. ಮತ್ತು ಪ.ಪಂ.ಗಳ ಪ್ರಮಾಣ ಅತ್ಯಂತ ಕೆಳಮಟ್ಟದಲ್ಲಿದೆ.

## ೧.೬. ಸಮಸ್ಯೀಕರಣ ಅಥವಾ ಸಂಶೋಧನ ಪ್ರಶ್ನೆಗಳು

ಮಾನವ ಅಭಿವೃದ್ಧಿ ಸಿದ್ಧಾಂತಕ್ಕೆ ಸಂಬಂಧಿಸಿದ ಅಧ್ಯಯನಗಳ ಸಮೀಕ್ಷೆಯಿಂದ ಮತ್ತು ಜಾತಿ ಹಾಗೂ ಮಾನವ ಅಭಿವೃದ್ಧಿಗಳ ನಡುವಿನ ಸಂಬಂಧಗಳನ್ನು ಪರಾಮರ್ಶಿಸಿದಾಗ ನಮಗೆ ಅನೇಕ ಪ್ರಶ್ನೆಗಳು ಎದುರಾಗುತ್ತವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಚರ್ಚಿಸಲಾಗಿದೆ.

ಅ) ಆರ್ಥಿಕ ಅಭಿವೃದ್ಧಿಯು, ಅಂದರೆ ವರಮಾನದಲ್ಲಿನ ಬೆಳವಣಿಗೆಯು ಜನರ ಬದುಕನ್ನು ತನ್ನಷ್ಟಕ್ಕೆ ಸಮೃದ್ಧಗೊಳಿಸುವುದು ಸಾಧ್ಯವಿಲ್ಲ. ಆರ್ಥಿಕ ಅಭಿವೃದ್ಧಿಯು ಉನ್ನತಮಟ್ಟದಲ್ಲಿ ನಡೆಯುತ್ತಿರಬಹುದು. ಆದರೆ ಅಲ್ಲಿ ಬಡತನ, ಹಸಿವು, ದುಸ್ಥಿತಿ, ಅಪೌಷ್ಟಿಕತೆ ಮುಂತಾದವು ಅಧಿಕವಾಗಿರಬಹುದು. ಇದಕ್ಕೆ ಕರ್ನಾಟಕದ ಬಳ್ಳಾರಿ ಮತ್ತು ಕೊಡಗು, ಉತ್ತರ ಕನ್ನಡ ಮತ್ತು ಹಾಸನ ಜಿಲ್ಲೆಗಳ ನಡುವಿನ ಜನರ ಬದುಕಿನ ಚಿತ್ರವನ್ನು ಕೋಷ್ಟಕ ೧.೧ರಲ್ಲಿ ನೀಡಲಾಗಿದೆ. ಬಳ್ಳಾರಿ ಜಿಲ್ಲೆಯು ವರಮಾನದಲ್ಲಿ ಸಮೃದ್ಧಿಯಾಗಿದೆ. ಆದರೆ ಜನರ ಬದುಕು ದುಸ್ಥಿತಿಯಲ್ಲಿದೆ. ಆದರೆ ಉಳಿದ ಮೂರು ಜಿಲ್ಲೆಗಳ ವರಮಾನ ಕೆಳಮಟ್ಟದಲ್ಲಿದ್ದರೂ ಅಲ್ಲಿಯ ಜನರ ಬದುಕು ಉತ್ತಮವಾಗಿದೆ. ಏಕೆ ಹೀಗೆ? ಇದು ಮುಖ್ಯ ಪ್ರಶ್ನೆ.

ಆ) ಆರ್ಥಿಕ ಅಭಿವೃದ್ಧಿಯೇ ಅಭಿವೃದ್ದಿಯಲ್ಲ ಎಂಬುದನ್ನು ಅಮರ್ತ್ಯ ಸೇನ್, ಮೆಹಬೂಬ್ ಉಲ್ ಹಕ್, ಮಾರ್ತಾ ನುಸುಬೌಮ್ ಮುಂತಾದವರು ಪ್ರತಿಪದಿಸುತ್ತಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಇದನ್ನು ಕೂಲಂಕಷವಾಗಿ ಪರಿಶೀಲಿಸಲಾಗುತ್ತದೆ. ಕರ್ನಾಟಕದಲ್ಲಿನ ಸಾಮಾಜಿಕ ಗುಂಪುಗಳಲ್ಲಿ ಅಭಿವೃದ್ಧಿಯನ್ನು ಜಾನ್ ರಾಲ್ಸ್‌ನ ಸಾಮಾಜಿಕ ನ್ಯಾಯ ಸಿದ್ಧಾಂತದ ಎರಡನೆಯ ಭಿನ್ನತೆ ನಿಯಮದ ಆಧಾರದ ಮೇಲೆ ಚರ್ಚಿಸಲಾಗಿದೆ. ಇಲ್ಲಿ ಉದ್ಭವವಾಗುವ ಪ್ರಶ್ನೆ ಏನಂದರೆ ಅಸಮಾನತೆಯಿಂದ ಕೂಡಿರುವ ಸಮಾಜದಲ್ಲಿ ಅಭಿವೃದ್ಧಿ ನೀತಿಗಳು ಸಮಾನತೆಯನ್ನು ಆಧರಿಸಿದ್ದರೆ ಅಲ್ಲಿ ಅಸಮಾನತೆಯ ಉಲ್ಬಣಗೊಳ್ಳುತ್ತದೆ ವಿನಃ ಕಡಿಮೆಯಾಗುವುದಿಲ್ಲ. ಇದು ಸಾವಿರಾರು ವರ್ಷಗಳಿಂದ ಚರ್ಚೆಗೆ ಒಳಗಾಗಿರುವ ಸಂಗತಿಯಾಗಿದೆ. ಅರಿಸ್ಟಾಟಲ್ ಹೇಳುವಂತೆ "ಯಾವ ಸಮಾಜದಲ್ಲಿ ಅಭಿವೃದ್ಧಿಯ ಫಲಗಳು ಹೆಚ್ಚು ಹೆಚ್ಚಾಗಿ ಸಮಾಜದ ಕೆಳವರ್ಗಕ್ಕೆ ದೊರೆಯುತ್ತಿರುತ್ತದೋ ಅದು ಆದರ್ಶ ಸಮಾಜ ಅನ್ನಿಸಿಕೊಳ್ಳುತ್ತದೆ". ಇದನ್ನೇ ಜಾನ್ ರಾಲ್ಸ್ **"ಸಾಮಾಜಿಕ ನ್ಯಾಯ"** ಎಂದು ಕರೆದಿದ್ದಾನೆ. ಪ್ರಸ್ತುತ ಅಧ್ಯಯನದಲ್ಲಿ ರಾಲ್ಸ್‌ನ ಸಿದ್ಧಾಂತವನ್ನು ಪ.ಜಾ. ಮತ್ತು ಪ.ಪಂ.ಗಳ ಜನವರ್ಗಕ್ಕೆ ಅನ್ವಯಿಸಿ ಚರ್ಚೆ ಮಾಡಲಾಗಿದೆ. ಉದಾಹರಣೆಗೆ ಕನಾಟಕದಲ್ಲಿ ದಲಿತರಿಗೆ ಮೀಸಲಾತಿಯನ್ನು ಬಡ್ತಿಗೆ ಸಂಬಂಧಿಸಿದಂತೆ ನೀಡಬಾರದು ಎಂದು ಚಳುವಳಿ ನಡೆಯುತ್ತಿದೆ.

ಆದರೆ ಕನಾಟಕ ಸರ್ಕಾರವು ಅದನ್ನು ಜಾರಿಗೊಳಿಸುವುದಕ್ಕೆ ಪ್ರಯತ್ನ ನಡೆಸುತ್ತಿದೆ. ಜಾನ್ ರಾಲ್ಸ್‌ನ ನಿಯಮದ ಪ್ರಕಾರ ಮೀಸಲಾತಿಯನ್ನು ಬಡ್ತಿಯಲ್ಲಿಯೂ ನೀಡಬೇಕಾಗುತ್ತದೆ. ಇದೇನು ಅನ್ಯಾಯದ ಕ್ರಮವಲ್ಲ. ಇದನ್ನು ಸಾಮಾಜಿಕ ವಾಸ್ತವದ ನೆಲೆಯಲ್ಲಿ ಪರಿಶೀಲಿಸಬೇಕಾಗುತ್ತದೆ. ಕೋಷ್ಟಕ ೧.೫ರಲ್ಲಿ ತೋರಿಸಿರುವಂತೆ ೧೯೦೧ರಲ್ಲಿ ದಲಿತರ ಸಾಕ್ಷರತಾ ಪ್ರಮಾಣ ಶೇ.೧ಕ್ಕಿಂತ ಸ್ವಲ್ಪ ಮೇಲಿತ್ತು. ಈ ಬಗೆಯ ಅಸಮಾನತೆಯನ್ನು ತೊಡೆದು ಹಾಕಲು ಮೀಸಲಾತಿಯಂತಹ ಕ್ರಮಗಳು ಬೇಕಾಗುತ್ತವೆ. ಇಲ್ಲಿ ಸರ್ಕಾರದ ಸೌಲಭ್ಯಗಳನ್ನು ಬಹುಸಂಖ್ಯಾತರಿಗೂ ನೀಡಬೇಕು ಎಂಬ ಬೇಡಿಕೆಯೂ ಕೇಳಿಬರುತ್ತಿದೆ. ಸಾಮಾಜಿಕ ನ್ಯಾಯದ ಬಗ್ಗೆ ತಿರಸ್ಕಾರ ಸಮಾಜದಲ್ಲಿದೆ. ಏಕೆ ಹೀಗೆ?

**ಅಧ್ಯಯನಗಳಲ್ಲಿ ಕಂಡುಕೊಂಡ ಸಂಶೋಧನ ಪ್ರಶ್ನೆಗಳು**

೧. ಆರ್ಥಿಕ ಅಭಿವೃದ್ಧಿ ಅನ್ನುವುದು ವರಮಾನದ ಏರಿಕೆಗೆ ಮಾತ್ರ ಸಂಬಂಧಿಸಿದೆ. ವರಮಾನದ ಏರಿಕೆಯೇ ಆರ್ಥಿಕ ಅಭಿವೃದ್ಧಿ. ಆದರೆ ಮಾನವ ಅಭಿವೃದ್ಧಿ ಅನ್ನುವುದು ವರಮಾನದ ಜೊತೆಗೆ ಇತರೆ ಅಭಿವೃದ್ಧಿ ಸೂಚಿಗಳಾದ ಸಾಕ್ಷರತೆ, ಶಿಕ್ಷಣ, ಆರೋಗ್ಯ, ಆಹಾರ, ಪೌಷ್ಟಿಕತೆ, ಮಹಿಳೆಯರ ಬದುಕಿನ ಸ್ಥಿತಿಗತಿ ಮುಂತಾದ ಸಂಗತಿಗಳನ್ನು ಒಳಗೊಂಡಿದೆ. ಈ ದೃಷ್ಟಿಯಿಂದ ಮಾನವ ಅಭಿವೃದ್ಧಿಯು ಆರ್ಥಿಕ ಅಭಿವೃದ್ಧಿ ಪ್ರಣಾಳಿಕೆಗಿಂತ ವಿಸ್ತೃತವಾದ ಪರಿಭಾವನೆಯಾಗಿದೆ.

೨. ಆರ್ಥಿಕ ಅಭಿವೃದ್ಧಿ ಅನ್ನುವುದು ಏಕಮಾನ ಅಭಿವೃದ್ಧಿ ಸೂಚಿಯಾಗಿದೆ. ವರಮಾನ ಒಂದು ಮಾಪನದ ಸೂಚಿಯಾಗಿದೆ. ಆದರೆ ಮಾನವ ಅಭಿವೃದ್ಧಿಯು ಬಹುಮಾನ ಅಭಿವೃದ್ಧಿ ಸೂಚಿಯಾಗಿದೆ.

೩. ಆರ್ಥಿಕ ಅಭಿವೃದ್ಧಿಯ ಮಾಪನವನ್ನು 'ಒಟ್ಟು/ನಿವ್ವಳ ಆಂತರಿಕ ಉತ್ಪನ್ನ'(ಜಿ.ಡಿ.ಪಿ.ಎನ್.ಡಿ.ಪಿ) ಎಂದು ಕರೆಯಲಾಗುತ್ತದೆ. ಆದರೆ ಮಾನವ ಅಭಿವೃದ್ಧಿಯನ್ನು ಅಳೆಯುವ ಕ್ರಮವನ್ನು ಮಾನವ ಅಭಿವೃದ್ಧಿ ಸೂಚ್ಯಂಕ ಎಂದು ಕರೆಯಲಾಗುತ್ತದೆ(ಎಚ್.ಡಿ.ಐ).

೪. ಆರ್ಥಿಕ ಅಭಿವೃದ್ಧಿ ಪ್ರಣಾಳಿಕೆಯಲ್ಲಿ ಮಹಿಳೆಯರ ಬದುಕಿನ ಸ್ಥಿತಿಗತಿಯನ್ನು ವಿಶೇಷವಾಗಿ ಅಧ್ಯಯನ ಮಾಡುವುದಿಲ್ಲ. ಅಭಿವೃದ್ಧಿ ಅನ್ನುವುದು ಮಹಿಳೆಯರಾಗಲಿ ಅಥವಾ ಪುರುಷರಾಗಲಿ ಭಿನ್ನ ಭಿನ್ನವಾಗಿರುವುದಿಲ್ಲ. ಅದು ಎಲ್ಲರಿಗೂ ಒಂದೇ ರೀತಿಯಲ್ಲಿರುತ್ತದೆ ಎಂಬುದು ಇಲ್ಲಿನ ಪ್ರತಿಪಾದನೆಯಾಗಿದೆ. ಈ ಪ್ರಣಾಳಿಕೆಯನ್ನು "ಲಿಂಗ ನಿರಪೇಕ್ಷ" ಎಂದು ಕರೆಯಲಾಗುತ್ತದೆ. ಅಂದರೆ ಮಹಿಳೆಯರು ಅಧ್ಯಯನದ ಸೂಚಿಯಲ್ಲ. ಮಹಿಳೆಯರಿಗೂ ಮತ್ತು ಪುರುಷರಿಗೂ ಅಭಿವೃದ್ಧಿ ಭಿನ್ನ ಭಿನ್ನವಾಗಿರುವುದಿಲ್ಲ ಎಂಬ ಆರ್ಥಿಕ ಅಭಿವೃದ್ಧಿ ಪ್ರಣಾಳಿಕೆಯ ಪ್ರತಿಪಾದನೆಯನ್ನು ಒಪ್ಪುವುದು ಸಾಧ್ಯವಿಲ್ಲ. ಏಕೆಂದರೆ ಅಭಿವೃದ್ಧಿ ಸೂಚಿಗಳಾದ ಸಾಕ್ಷರತೆ, ಶಿಕ್ಷಣದ ಮಟ್ಟ, ವರಮಾನ, ಪೌಷ್ಟಿಕತೆ, ಉದ್ಯೋಗ ಮುಂತಾದ ಸೂಚಿಗಳಲ್ಲಿ ಮಹಿಳೆಯರ ಸ್ಥಿತಿಗತಿಯು ಪುರುಷರ ಸ್ಥಿತಿಗತಿಗಿಂತ ಕೆಳಮಟ್ಟದಲ್ಲಿದೆ. ಉದಾಹರಣೆಗೆ ಕರ್ನಾಟಕದಲ್ಲಿ ೨೦೧೧ರ ಜನಗಣತಿ ಪ್ರಮಾಣ ಮಹಿಳೆಯರ

ಸಾಕ್ಷರತೆ ಪ್ರಮಾಣ ಶೇ.೬೮.೦೮. ಆದರೆ ಪುರುಷರ ಸಾಕ್ಷರತಾ ಪ್ರಮಾಣ ಶೇ.೮೨.೪೭. ಅಭಿವೃದ್ಧಿ ಇಬ್ಬರಿಗೂ ಸಮಾನವಾಗಿ ಒದಗಿ ಬಂದಿದ್ದರೆ ಅಲ್ಲಿ ಭಿನ್ನತೆ ಇರಬೇಕಾಗಿರಲಿಲ್ಲ. ಈ ಸಂಗತಿಯನ್ನು ಮನಗಂಡು ಮಾನವ ಅಭಿವೃದ್ಧಿ ಪ್ರಣಾಳಿಕೆಯಲ್ಲಿ ಮಹಿಳೆಯರ ಸ್ಥಿತಿಗತಿಯನ್ನು ವಿಶಿಷ್ಟವಾಗಿ ಅಧ್ಯಯನ ಮಾಡಲಾಗುತ್ತದೆ. ಇದನ್ನು 'ಮಹಿಳಾ ಸಂವೇದಿ' ಪ್ರಣಾಳಿಕೆ ಎಂದು ಕರೆಯಲಾಗುತ್ತದೆ.

೫. ಆರ್ಥಿಕ ಅಭಿವೃದ್ಧಿಯಲ್ಲಿ ಸಮಾಜದ ವಿವಿಧ ಸಮುದಾಯಗಳ ಅಭಿವೃದ್ಧಿ ಸಾಧನೆಗಳನ್ನು ಮಾಪನ ಮಾಡುವುದು ಸಾಧ್ಯವಿಲ್ಲ. ಆದರೆ ಮಾನವ ಅಭಿವೃದ್ಧಿಯಲ್ಲಿ ಸಮಾಜದ ವಿವಿಧ ಜನವರ್ಗಗಳ ಅಭಿವೃದ್ಧಿ ಸಾಧನೆಗಳನ್ನು ಅಧ್ಯಯನ ಮಾಡಲು ಮತ್ತು ಮಾಪನ ಮಾಡಲು ಸಾಧ್ಯವಿದೆ. ಈ ಹಿನ್ನೆಲೆಯಲ್ಲಿ  ಕರ್ನಾಟಕದ ದಲಿತರ ಮಾನವ ಅಭಿವೃದ್ಧಿ ಅನ್ನುವುದು ಪ್ರಸ್ತುತ ಅಧ್ಯಯನದ ವಿಷಯವಸ್ತುವಾಗಿದೆ.

೬. ಆರ್ಥಿಕ ಅಭಿವೃದ್ಧಿ ಸಮಾಜಮುಖಿ ಪರಿಭಾವನೆಯಾದರೆ ಮಾನವ ಅಭಿವೃದ್ಧಿಯು ಬಹುಮುಖಿ ಪರಿಭಾವನೆಯಾಗಿದೆ. ಅಭಿವೃದ್ಧಿ ಅನ್ನುವುದು ಮೂಲತಃ ಬಹುಮುಖಿಯಾದ ಪ್ರಕ್ರಿಯೆಯಾಗಿದೆ.

ಈ ದೃಷ್ಟಿಯಲ್ಲಿ ವರಮಾನವನ್ನು ಪ್ರಧಾನ ಮಾನದಂಡವನ್ನಾಗಿ ಮಾಡಿಕೊಂಡು ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವ ಕ್ರಮಕ್ಕೆ ಪ್ರತಿಯಾಗಿ ಇಂದು ಅಭಿವೃದ್ಧಿಯನ್ನು ಜನರ ಧಾರಣಾ ಸಾಮರ್ಥ್ಯವನ್ನು ಆಧರಿಸಿ ಪರಿಭಾವಿಸಿಕೊಳ್ಳುವ ಕ್ರಮವು ರೂಢಿಗೆ ಬಂದಿದೆ. ಈ ಬಗೆಯ ಅಭಿವೃದ್ಧಿಯನ್ನು ಕುರಿತ ಸೈದ್ಧಾಂತಿಕ ಪಲ್ಲಟವನ್ನು ಪ್ರಸ್ತುತ "ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಅಧ್ಯಯನ"ವು ಪ್ರತಿನಿಧಿಸುತ್ತದೆ.

### ೧.೭. ಅಧ್ಯಯನದ ಉದ್ದೇಶಗಳು

ಒಂದು ಅಧ್ಯಯನಕ್ಕೆ ಉದ್ದೇಶಗಳು ಮುಖ್ಯ. ಅದು ಅಧ್ಯಯನಕ್ಕೆ ಒಂದು ಚೌಕಟ್ಟನ್ನು ನೀಡುತ್ತದೆ. ಅಧ್ಯಯನವು ರೂಪಿಸಿಕೊಂಡ ಉದ್ದೇಶಗಳ ಚೌಕಟ್ಟಿನಲ್ಲಿಯೇ ನಡೆಯಬೇಕು. ಅಧ್ಯಯನ ಅನ್ನುವುದು ಆಯ್ಕೆ ಮಾಡಿಕೊಂಡ ಸಮಸ್ಯೆಗೆ ಉತ್ತರವನ್ನು ಕಂಡುಕೊಳ್ಳುವುದಾಗಿರುತ್ತದೆ. ಇಲ್ಲವೇ ವಿವರಣೆಯನ್ನು ಕಂಡುಕೊಳ್ಳುವುದಾಗಿರುತ್ತದೆ. ಅಧ್ಯಯನಕ್ಕೆ ಆರಿಸಿಕೊಂಡ ವಿಷಯಕ್ಕೆ ಅನೇಕ ಮುಖಗಳಿರುವುದು ಸಾಧ್ಯ. ಅದಕ್ಕೆ ಅನೇಕ ಆಯಾಮಗಳಿರಬಹುದು. ಆದರೆ ಒಂದು ನಿರ್ದಿಷ್ಟ ಅಧ್ಯಯನದಲ್ಲಿ ಆ ಎಲ್ಲ ಮುಖಗಳನ್ನು, ಆಯಾಮಗಳನ್ನು ಪರಿಗಣಿಸುವುದು ಸಾಧ್ಯವಿಲ್ಲ. ಅಧ್ಯಯನವನ್ನು ಒಂದು ನಿಗದಿಪಡಿಸಿದ ಅವಧಿಯಲ್ಲಿ ಮುಗಿಸಬೇಕಾಗುವುದರಿಂದ ಅಧ್ಯಯನ ವಿಷಯದ ಎಲ್ಲ ಮುಖಗಳನ್ನು ಮತ್ತು ಆಯಾಮಗಳನ್ನು ಪರಿಶೀಲನೆಗೆ ಒಳಪಡಿಸುವುದು ಅಸಾಧ್ಯ. ಈ ಕಾರಣಗಳಿಮದ ಅಧ್ಯಯನಕ್ಕೆ ಉದ್ದೇಶಗಳು ಅಗತ್ಯ.

ಅಧ್ಯಯನಕ್ಕೆ ಸಂಬಂಧಿಸಿದಂತೆ ಉದ್ದೇಶಗಳನ್ನು ರೂಪಿಸಿಕೊಳ್ಳುವಾಗ ಆ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಏನು ಸಂಶೋಧನ ಪ್ರಶ್ನೆಗಳಿವೆ ಎಂಬುದು ಮುಖ್ಯವಾಗುತ್ತದೆ. ಅಧ್ಯಯನ

ವಿಷಯಕ್ಕೆ ಸಂಬಂಧಿಸಿದಂತೆ ಸಂಶೋಧನೆ ಪ್ರಶ್ನೆಗಳನ್ನು, ಅಂದರೆ ಅಧ್ಯಯನ ವಿಷಯದ ಸಮಸ್ಯೀಕರಣ ವನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಇದಕ್ಕೆ ಅಧ್ಯಯನ ವಿಷಯ ಕುರಿತ ವಿಸ್ತೃತ ಅಧ್ಯಯನ ಅಗತ್ಯವಾಗುತ್ತದೆ. ನಾವು ಆಯ್ಕೆ ಮಾಡಿಕೊಂಡಿರುವ ವಿಷಯದ ಬಗ್ಗೆ, ಅದರ ಬೇರೆ ಬೇರೆ ಮುಖಗಳ ಬಗ್ಗೆ ಈಗಾಗಲೇ ಅನೇಕ ಅಧ್ಯಯನಗಳು ನಡೆದಿರಬಹುದು. ಅವುಗಳ ಸಮೀಕ್ಷೆಯ ಆಧಾರದಲ್ಲಿ ಸಂಶೋಧನೆ ಪ್ರಶ್ನೆಗಳನ್ನು ರೂಪಿಸಿಕೊಳ್ಳಬಹುದು ಮತ್ತು ಹೀಗೆ ರೂಪಿಸಿಕೊಂಡ ಸಂಶೋಧನೆ ಪ್ರಶ್ನೆಗಳ ಚೌಕಟ್ಟಿನಲ್ಲಿ ಅಧ್ಯಯನದ ಉದ್ದೇಶಗಳನ್ನು ರೂಪಿಸಿಕೊಳ್ಳಬಹುದು. ಈಗಾಗಲೇ ಗಮನಿಸಿ ರುವಂತೆ ನಮ್ಮ ಅಧ್ಯಯನದ ವಿಷಯವಸ್ತು 'ಕರ್ನಾಟಕದಲ್ಲಿ ಮಾನವ ಅಭಿವೃದ್ಧಿಯ ಅಧ್ಯಯನ'. ಭಾರತದಲ್ಲಿ ಮಾನವ ಅಭಿವೃದ್ಧಿ ಕುರಿತಂತೆ ವರದಿಗಳನ್ನು ರಾಜ್ಯ, ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮ ಪಂಚಾಯತಿಗಳು ಹಾಗೂ ಗ್ರಾಮ ಮಟ್ಟದಲ್ಲಿ ಅಧ್ಯಯನ ನಡೆಸಿದ ಕೀರ್ತಿ ಕರ್ನಾಟಕಕ್ಕೆ ಸಲ್ಲುತ್ತದೆ. ಕರ್ನಾಟಕದ ಗ್ರಾಮ ಪಂಚಾಯತಿವಾರು ಮಾನವ ಅಭಿವೃದ್ಧಿ ಸೂಚ್ಯಂಕಗಳು ಲಭ್ಯವಿವೆ (ವಿವರಗಳಿಗೆ ನೋಡಿ: ಕರ್ನಾಟಕ ಸರ್ಕಾರ ೨೦೧೪. 'ಮಾನವ ಅಭಿವೃದ್ಧಿ: ಜಿಲ್ಲೆಗಳು, ತಾಲ್ಲೂಕುಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳ ಸಾಧನೆಗಳು, ೨೦೧೪ – ಒಂದು ಕ್ಷಿಪ್ರನೋಟ'. ಯೋಜನಾ ಇಲಾಖೆ, ಬೆಂಗಳೂರು. ಮಾನವ ಅಭಿವೃದ್ಧಿ: ಕರ್ನಾಟಕ ರಾಜ್ಯದ ಗ್ರಾಮ ಪಂಚಾಯತಿಗಳ ಸಾಧನೆ: ೨೦೧೫, ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಂಸ್ಥೆ ಮತ್ತು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು).

ಈ ಅಧ್ಯಯನದ **ಪ್ರಧಾನ ಉದ್ದೇಶಗಳು** ಹೀಗಿವೆ:

**೧. ಮಾನವ ಅಭಿವೃದ್ಧಿ ಪ್ರಣಾಳಿಕೆಯ ಚಾರಿತ್ರಿಕ ಬೆಳವಣಿಗೆಯನ್ನು ಪರಿಶೀಲಿಸುವುದು.**

**೨. ಕರ್ನಾಟಕದಲ್ಲಿ ದಲಿತರ ಮಾನವ ಅಭಿವೃದ್ಧಿಯ ವಿವಿಧ ಆಯಾಮಗಳನ್ನು ಚರ್ಚಿಸುವುದು.**

**೩. ದಲಿತರು ಮತ್ತು ಸಾಮಾನ್ಯ ಜನಸಂಖ್ಯೆಯ ಮಾನವ ಅಭಿವೃದ್ಧಿ ಭಿನ್ನತೆಗಳಿಗೆ ಕಾರಣಗಳನ್ನು ಚರ್ಚಿಸುವುದು.**

**೪. ದಲಿತ ಮಾನವ ಅಭಿವೃದ್ಧಿ ಸೂಚಿ ಮತ್ತು ಅದರ ಫಲಿತಗಳನ್ನು ಚರ್ಚಿಸುವುದು.**

ಮೊಟ್ಟಮೊದಲನೆಯದಾಗಿ ಪ್ರಸ್ತುತ ಅಧ್ಯಯನದಲ್ಲಿ ಮಾನವ ಅಭಿವೃದ್ಧಿ ಪ್ರಣಾಳಿಕೆಯು ನಡೆದು ಬಂದ ದಾರಿಯನ್ನು ವಿಶ್ಲೇಷಿಸಲಾಗಿದೆ. ಈ ಅಧ್ಯಯನವು ಮಾನವ ಅಭಿವೃದ್ಧಿಯನ್ನು ಕುರಿತದ್ದಾಗಿರುವುದರಿಂದ ಆ ಪ್ರಣಾಳಿಕೆಯ ಸೈದ್ಧಾಂತಿಕ ನೆಲೆಗಳನ್ನು, ಅದರ ಚಾರಿತ್ರಿಕ ಆಯಾಮಗಳನ್ನು, ಅದನ್ನು ರೂಪಿಸಿದ ವಿದ್ವಾಂಸರ ಕೊಡುಗೆಗಳನ್ನು ಚರ್ಚಿಸುವುದು ಅತ್ಯಂತ ಸೂಕ್ತ ಕ್ರಮವಾಗಿದೆ. ಈ ಅಧ್ಯಯನದಲ್ಲಿ ದಲಿತರ ಅಭಿವೃದ್ಧಿ ಸ್ಥಿತಿಗತಿಗಳನ್ನು ಚರ್ಚೆಯ ಮುಂಚೂಣಿಗೆ ತರಲು ಪ್ರಯತ್ನಿಸಲಾಗಿದೆ. ದಲಿತರು ಅನ್ನುವುದನ್ನು ಇಲ್ಲಿ ನಾಡಿನ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳನ್ನು ಅನುಲಕ್ಷಿಸಿ ಚರ್ಚೆ ಮಾಡಲಾಗಿದೆ. ಇಲ್ಲಿನ ಗ್ರಹಿಕೆಯೆಂದರೆ ಅಸಮಾನತೆಯಿಂದ

ಕೂಡಿರುವ ಸಮಾಜದಲ್ಲಿ ಅಭಿವೃದ್ಧಿಯ ಫಲಗಳು ಸಮಾಜದ ಎಲ್ಲ ವರ್ಗಗಳಿಗೂ ಸಮಾನವಾಗಿ ದೊರೆಯುವುದಿಲ್ಲ ಎಂಬುದಾಗಿದೆ. ನಮ್ಮದು ಮೂಲತಃ ಅಖಂಡ, ಏಕೀಕೃತ ಸಮಾಜವೇನಲ್ಲ. ಜಾತಿ, ಪಂಗಡ, ಧರ್ಮ, ವರ್ಣ, ಪ್ರದೇಶ, ಅಂತಸ್ತು, ಆಸ್ತಿ ಮಾಲೀಕತ್ವ ಮುಂತಾದ ಸಂಗತಿಗಳ ಆಧಾರದಲ್ಲಿ ಸಮಾಜವು ವಿಭಜಿಲ್ಪಟ್ಟಿದೆ. ದಲಿತರು ಹೇಗೆ ಮತ್ತು ಯಾವ ಪ್ರಮಾಣದಲ್ಲಿ ಅಭಿವೃದ್ಧಿಯಿಂದ ವಂಚಿತರಾಗಿದ್ದಾರೆ ಎಂಬುದನ್ನು ಇಲ್ಲಿ ಕೂಲಂಕಷವಾಗಿ ಚರ್ಚೆಗೆ ಒಳಪಡಿಸಲಾಗಿದೆ.

## ೧.೮. ಅಧ್ಯಯನದ ವೈಯುಕ್ತಿಕ ನೆಲೆಗಳು

ವಾಸ್ತವವಾಗಿ ಅಧ್ಯಯನಗಳಲ್ಲಿ ವೈಯುಕ್ತಿಕ ಸಂಗತಿಗಳಿಗೆ ಸ್ಥಾನವಿರಬಾರದು. ಆದರೆ ಅಧ್ಯಯನ ಗಳಲ್ಲಿ ವೈಯುಕ್ತಿಕ ಸಂಗತಿಗಳ ಪ್ರಭಾವ ಇರುತ್ತದೆ. ಇದು ಅನಿವಾರ್ಯ. ನಿಜ, ಅಧ್ಯಯನಗಳು ಮೌಲ್ಯ ನಿರಪೇಕ್ಷವಾಗಿರಬೇಕು ಎಂದು ಹೇಳಲಾಗುತ್ತದೆ. ವಿದ್ವಾಂಸರ ಪ್ರಕಾರ ಮೌಲ್ಯ ನಿರಪೇಕ್ಷತೆ ಅನ್ನುವುದೇ ಒಂದು ನಿಲುವಾಗಿದೆ. ಆದ್ದರಿಂದ ಅಧ್ಯಯನಕ್ಕೆ ಸಂಬಂಧಿಸಿದ ವೈಯುಕ್ತಿಕ ಸಂಗತಿಗಳನ್ನು ಅಧ್ಯಯನದ ಆರಂಭದಲ್ಲಿಯೇ ನಿರೂಪಿಸುವುದು ಅಪೇಕ್ಷಣೀಯ. ನಾನು ವೈಯುಕ್ತಿಕವಾಗಿ ಸಮಾಜದ ತಳವರ್ಗಕ್ಕೆ ಸೇರಿದವನು. ತಳವರ್ಗವು ಏನೆಲ್ಲ ಅವಮಾನ, ಅನ್ಯಾಯ, ತಾರತಮ್ಯ ಮತ್ತು ಶೋಷಣೆಯನ್ನು ಅನುಭವಿಸಲಾಗಿದೆಯೋ ಅವೆಲ್ಲವನ್ನೂ ಅನುಭವಿಸಿದ್ದೇನೆ. ನಮ್ಮ ತಂದೆ ತಾಯಿಯವರು ಈ ಬಗೆಯ ಅನ್ಯಾಯವನ್ನು ಅನುಭವಿಸಿದ್ದಾರೆ. ಸಮಾಜದಲ್ಲಿ ಒಂದು ವರ್ಗದ ಜನರು ಏಕೆ ಸಾಮಾಜಿಕ ಪ್ರತ್ಯೇಕತನವನ್ನು ಎದರಿಸಬೇಕಾಗಿದೆ? ಇದಕ್ಕೆ ಕಾರಣಗಳನ್ನು ಪ್ರಸ್ತುತ ಅಧ್ಯಯನದ ಮೂಲಕ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

## ೧.೯. ಅಧ್ಯಯನ ವಿಧಾನ

ಅಧ್ಯಯನದ ಸಮಸ್ಯೆ ಹಾಗೂ ಉದ್ದೇಶಗಳಿಗೆ ಅನುಗುಣವಾಗಿ ಅಧ್ಯಯನದ ವಿಧಾನವನ್ನು ರೂಪಿಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ಆನುಷಂಗಿಕ ಮೂಲಗಳಿಂದ ಪಡೆಯಲಾಗಿದೆ. ಮಾನವ ಅಭಿವೃದ್ಧಿ ಮತ್ತು ಆರ್ಥಿಕ ಅಭಿವೃದ್ಧಿಗಳಿಗೆ ಸಂಬಂಧಿಸಿದಂತೆ ರಾಜ್ಯಮಟ್ಟದಲ್ಲಿ ಪ್ರಕಟವಾಗಿರುವ ವರದಿಗಳನ್ನು ಮತ್ತು ಅವುಗಳ ಮುಖ್ಯ ಫಲಿತಗಳನ್ನು ಆಧಾರವಾಗಿಟ್ಟುಕೊಂಡು ಇಲ್ಲಿನ ಅಧ್ಯಯನ ನಡೆಸಲಾಗಿದೆ. ಆದರೂ ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲ ಸೈದ್ಧಾಂತಿಕ ಸಂಗತಿಗಳನ್ನು ಚರ್ಚೆ ಮಾಡಲಾಗಿದೆ. ಆರ್ಥಿಕ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿಗಳ ನಡುವಿನ ಭಿನ್ನತೆಯನ್ನು ಇಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ. ಇದಕ್ಕೆ ಸಂಬಂಧಿಸಿದ ಅಧ್ಯಯನಗಳ ಫಲಿತಗಳನ್ನು ಇಲ್ಲಿ ಬಳಸಲಾಗಿದೆ.

ಇಲ್ಲಿ ಮಾನವ ಅಭಿವೃದ್ಧಿ ಮತ್ತು ದಲಿತರ ಮಾನವ ಅಭಿವೃದ್ಧಿ ನಡುವಿನ ಅಸಮಾನತೆಯ ನೆಲೆಗಳನ್ನು ಮಾನವ ಅಭಿವೃದ್ಧಿ ಕುರಿತ ಅಧ್ಯಯನಗಳ ಆಧಾರದಲ್ಲಿ ಮತ್ತು ದಲಿತರ ಅಭಿವೃದ್ಧಿಯನ್ನು ಡಾ. ಚಂದ್ರ ಪೂಜಾರಿ ಅವರ ದಲಿತ ಅಭಿವೃದ್ಧಿ ಸೂಚ್ಯಂಕದ ಆಧಾರದಲ್ಲಿ ಸಾಧಿಸಲು ಪ್ರಯತ್ನಿಸ ಲಾಗಿದೆ(ಇದರ ವಿವರಗಳಿಗೆ ನೋಡಿ. *ಎಂ. ಚಂದ್ರ ಪೂಜಾರಿ, ೨೦೧೬. ದಲಿತ ಮಾನವ*

*ಅಭಿವೃದ್ಧಿ, ದಲಿತ ಹಕ್ಕುಗಳ ಸಮಿತಿ, ಕರ್ನಾಟಕ).* ಜಾಗತಿಕ ಮಟ್ಟದಲ್ಲಿ, ರಾಷ್ಟ್ರೀಯ ಮಟ್ಟದಲ್ಲಿ, ರಾಜ್ಯಮಟ್ಟದಲ್ಲಿ ಮತ್ತು ಸ್ಥಳೀಯ ಮಟ್ಟದಲ್ಲಿ ಮಾನವ ಅಭಿವೃದ್ಧಿ ಕುರಿತಂತೆ ನಡೆದಿರುವ ಅಧ್ಯಯನಗಳನ್ನು ಆಧಾರವಾಗಿಟ್ಟುಕೊಂಡು ಇಲ್ಲಿ ಮಾನವ ಅಭಿವೃದ್ಧಿಯ ಮಹತ್ವವನ್ನು ಗುರುತಿಸಲಾಗಿದೆ. ಇದಕ್ಕೆ ಅಗತ್ಯವಾದ ಅಂಕಿಅಂಶಗಳನ್ನು, ಎಂಪರಿಕಲ್ ಮಾಹಿತಿಯನ್ನು ವಿವಿಧ ಮೂಲಗಳಿಂದ ಸಂಗ್ರಹಿಸಿಕೊಳ್ಳಲಾಗಿದೆ. ದಲಿತರ ಅಭಿವೃದ್ಧಿಯನ್ನು ಮಾಪನ ಮಾಡುವ ಪ್ರಯತ್ನವು ವಿಶೇಷವಾಗಿ ಕರ್ನಾಟಕದಲ್ಲಿ ಅನೇಕ ಪ್ರಯತ್ನಗಳು ನಡೆದಿವೆ. ಕರ್ನಾಟಕ ಸರ್ಕಾರದ ಯೋಜನಾ ಇಲಾಖೆಯು ೨೦೦೫ರಲ್ಲಿ ಪ್ರಕಟಿಸಿರುವ 'ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫'ರಲ್ಲಿ ಕರ್ನಾಟಕದ ಪ.ಜಾ. ಮತ್ತು ಪ.ಪಂ.ಗಳ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಲೆಕ್ಕ ಹಾಕಲಾಗಿದೆ. ಅದನ್ನು ಇಲ್ಲಿ ಪರಾಮರ್ಶೆ ಮಾಡುವ ಮೂಲಕ ಸಮಸ್ಯೆಯ ಬಗ್ಗೆ ಬೆಳಕು ಚೆಲ್ಲಲಾಗುತ್ತದೆ. ಈ ಬಗ್ಗೆ ಇಲ್ಲಿ ಉಲ್ಲೇಖಿಸಬೇಕಾದ ಅಧ್ಯಯನವೆಂದರೆ ಡಾ. ಚಂದ್ರ ಪೂಜಾರಿ ಅವರ 'ದಲಿತ ಮಾನವ ಅಭಿವೃದ್ಧಿ' ಕೃತಿ(೨೦೧೬). ಈ ಅಧ್ಯಯನದಲ್ಲಿ ಡಾ. ಚಂದ್ರ ಪೂಜಾರಿ ಅವರು ದಲಿತ ಅಭಿವೃದ್ಧಿ ಸೂಚ್ಯಂಕ ಏಕೆ ಬೇಕು ಎಂಬುದನ್ನು ವಿವರಿಸುತ್ತಾ 'ಮಾನವ ಅಭಿವೃದ್ಧಿ ಸೂಚ್ಯಂಕವು ಒಂದು ಪ್ರದೇಶದ ಅಭಿವೃದ್ಧಿಯನ್ನು ಮಾಪನ ಮಾಡುತ್ತದೆ. ಆ ಪ್ರದೇಶದೊಳಗೆ ಬರುವ ವಿವಿಧ ಸಮುದಾಯ ಗಳ, ದಲಿತ, ಬುಡಕಟ್ಟು, ಅಲ್ಪಸಂಖ್ಯಾತರ, ಮಹಿಳೆಯರ ಅಭಿವೃದ್ಧಿಯನ್ನು ಪ್ರತ್ಯೇಕವಾಗಿ ಮಾಪನ ಮಾಡುತ್ತಿಲ್ಲ'. ಎರಡನೆಯದಾಗಿ ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಬಳಸುವ ಶಿಕ್ಷಣ ಮತ್ತು ಆರೋಗ್ಯ ಸೂಚಿಗಳು ಕೂಡ ಆದಾಯದ ಮತ್ತೊಂದು ಆಯಾಮವಾಗಿದೆ. ಮೂರನೆಯದಾಗಿ ಜಾತಿ, ಧರ್ಮ, ಲಿಂಗಗಳು ನಮ್ಮಲ್ಲಿ ನಿಜವಾದ ಸಾಮಾಜಿಕ ಸೂಚಿಗಳಾಗಿವೆ. ಇವುಗಳನ್ನು ಮಾನವ ಅಭಿವೃದ್ಧಿ ಸೂಚ್ಯಂಕ ಒಳಗೊಂಡಿಲ್ಲ(ವಿವರಗಳಿಗೆ ನೋಡಿ, ಡಾ. ಚಂದ್ರ ಪೂಜಾರಿ ೨೦೧೬. ದಲಿತ ಮಾನವ ಅಭಿವೃದ್ಧಿ ಪು. ೧೪–೧೫).

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವೂ ಡಾ. ಚಂದ್ರ ಪೂಜಾರಿ ಅವರ ಅಧ್ಯಯನಗಳ ಫಲಿತಗಳನ್ನು ಆಧರಿಸಿ ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಮತ್ತು ದಲಿತರ ಅಭಿವೃದ್ಧಿ ಕುರಿತಂತೆ ಕೆಲವು ತೀರ್ಮಾನಗಳನ್ನು ತಳೆಯಲು ಇಲ್ಲಿ ಪ್ರಯತ್ನಿಸಲಾಗಿದೆ.

ಈ ಅಧ್ಯಯನಕ್ಕೆ ಅನೇಕ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಲಾಗಿದೆ. ಯು ಎನ್.ಡಿ.ಪಿ ಮಾದರಿಯಲ್ಲಿ ಮಾನವ ಅಭಿವೃದ್ಧಿ ವರದಿಗಳನ್ನು ರಾಜ್ಯ, ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮ ಮಟ್ಟದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಗಣನೆ ಮಾಡಿದ ಏಕೈಕ ರಾಜ್ಯ ಕರ್ನಾಟಕ. ಇದಲ್ಲದೆ ಕೆಲವು ಇತಿಮಿತಿಗಳಲ್ಲಿ ದಲಿತರ ಅಭಿವೃದ್ಧಿಗೆ ಸಂಬಂಧಿಸಿದಂತೆ ಮಾಪನ ಮಾಡುವ ಪ್ರಯತ್ನಗಳನ್ನು ಕರ್ನಾಟಕ ಮಾನವ ಅಭಿವೃದ್ಧಿ ವರದಿಗಳಲ್ಲಿ ಪ್ರಶ್ನಿಸಲಾಗಿದೆ. ಹೀಗೆ ಅನೇಕ ವರದಿಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

೧. ಕರ್ನಾಟಕ ಮಾನವ ಅಭಿವೃದ್ಧಿ ವರದಿ ೧೯೯೯. ಇದು ಕರ್ನಾಟಕ ಸಿದ್ಧಪಡಿಸಿದ ಮೊದಲ ಮಾನವ ಅಭಿವೃದ್ಧಿ ವರದಿ. ಇದನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

೨. ಕರ್ನಾಟಕ ಮಾನವ ಅಭಿವೃದ್ಧಿ ೨೦೦೫. ಇದು ಎರಡನೆಯ ವರದಿ. ಇದರಲ್ಲಿ ದಲಿತರು(ಪ.ಜಾ) ಮತ್ತು ಪರಿಶಿಷ್ಟ ಪಂಗಡದವರಿಗೆ ಸಂಬಂಧಿಸಿದಂತೆ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಗಣನೆ ಮಾಡಲಾಗಿದೆ. ಸಾಮಾನ್ಯ ಜನರ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ೨೦೦೧ಕ್ಕೆ ಗಣನೆ ಮಾಡಿದ್ದರೆ ದಲಿತರ ಮತ್ತು ಪರಿಶಿಷ್ಟ ಪಂಗಡಗಳ ಮಾನವ ಅಭಿವೃದ್ಧಿಗೆ ಸೂಚ್ಯಂಕಗಳನ್ನು ೨೦೦೪ಕ್ಕೆ ಲೆಕ್ಕ ಹಾಕಲಾಗಿದೆ. ಏಕೆಂದರೆ ಸಾಮಾನ್ಯ ಜನರ ಮಾನವ ಅಭಿವೃದ್ಧಿ ಸೂಚ್ಯಂಕಗಳಿಗೆ ಆನುಷಂಗಿಕ ಅಂಕಿಅಂಶಗಳನ್ನು ಬಳಸಿದ್ದರೆ ದಲಿತರ ಮತ್ತು ಪ.ಪಂ.ಗಳ ಸೂಚ್ಯಂಕಕ್ಕೆ ಸಂಗ್ರಹ ಮಾಡಿದ ಅಂಕಿಅಂಶಗಳನ್ನು ಬಳಸಿಕೊಳ್ಳಲಾಗಿದೆ. ಈ ಕಾರಣದಿಂದ ಇಲ್ಲಿ ವರ್ಷಗಳ ಭಿನ್ನತೆ ಉಂಟಾಗಿದೆ.ಅದೇ ಮಾಹಿತಿಯನ್ನು ಇಲ್ಲಿ ಬಳಸಲಾಗಿದೆ.

೩. ಮಾನವ ಅಭಿವೃದ್ಧಿ: ರಾಜ್ಯ, ಜಿಲ್ಲೆ, ತಾಲ್ಲೂಕು ಮತ್ತು ನಗರ ಸ್ಥಳೀಯ ಸಂಸ್ಥೆಗಳ ಸಾಧನೆ ೨೦೧೪ ಒಂದು ಕ್ಷಿಪ್ರ ವರದಿ. ರಾಜ್ಯದ ೩೦ ಜಿಲ್ಲೆಗಳ ಜಿಲ್ಲಾ ಮಾನವ ಅಭಿವೃದ್ಧಿ ವರದಿಗಳ ಫಲಿತಗಳನ್ನು ಒಂದು ಸಂಪುಟದಲ್ಲಿ ಒಟ್ಟಿಗೆ ತರಲಾಗಿದೆ. ಈ ವರದಿಯಲ್ಲಿ ೩೦ ಜಿಲ್ಲೆಗಳ ಮತ್ತು ೧೭೬ ತಾಲ್ಲೂಕುಗಳ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಲೆಕ್ಕ ಹಾಕಿ ಸಂಬಂಧಿಸಿದ ೩೦ ಜಿಲ್ಲಾ ಮಾನವ ಅಭಿವೃದ್ಧಿ ವರದಿಗಳನ್ನು ಏಕಕಾಲಕ್ಕೆ ೨೦೧೫ರಲ್ಲಿ ಪ್ರಕಟಿಸಿದೆ. ಇದೊಂದು ಚರಿತ್ರಾರ್ಹ ಸಾಧನೆಯಾಗಿದೆ. ಇದರಲ್ಲಿ ವಿಶೇಷವಾಗಿ ಗಮನಿಸಬೇಕಾದ ಸಂಗತಿಯೆಂದರೆ ಮಾನವ ಅಭಿವೃದ್ಧಿ ಸೂಚ್ಯಂಕಗಳ ಜೊತೆಗೆ ಎಲ್ಲ ೩೦ ಜಿಲ್ಲೆಗಳ ದಲಿತ ಅಭಿವೃದ್ಧಿ ಸೂಚ್ಯಂಕಗಳನ್ನು ಲೆಕ್ಕ ಹಾಕಲಾಗಿದೆ. ಇದೊಂದು ವಿಶಿಷ್ಟವಾದ ಕ್ರಮವಾಗಿದೆ. ದಲಿತ ಅಭಿವೃದ್ಧಿ ಸೂಚ್ಯಂಕ ಎಂಬ ಪರಿಭಾವನೆಯನ್ನು ಮತ್ತು ಸೂಚ್ಯಂಕವನ್ನು ರೂಪಿಸಿದ ಕೀರ್ತಿ ಅಭಿವೃದ್ಧಿ ಅಧ್ಯಯನ ವಿಭಾಗ, ಪ್ರಾಧ್ಯಾಪಕರಾದ ಡಾ. ಚಂದ್ರಪೂಜಾರಿ ಕನ್ನಡ ವಿಶ್ವವಿದ್ಯಾಲಯದ ಅವರಿಗೆ ಸಲ್ಲಬೇಕು. ಈ ವರದಿಗಳು ನಮ್ಮ ಅಧ್ಯಯನಕ್ಕೆ ಅಡಿಪಾಯದಂತೆ ಉಪಕಾರವಾಗಿದೆ.

೪. ಸೆನ್ಸಸ್ ಆಫ್ ಇಂಡಿಯ ೨೦೧೧. ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್ ಕರ್ನಾಟಕ. ೨೦೧೧ರ ಜನಗಣತಿ ವಿವರಗಳನ್ನು ಬಳಸಿಕೊಳ್ಳಲಾಗಿದೆ.

೫. ಈ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಗಳನ್ನು ಜನಗಣತಿ ವರದಿಗಳಿಂದ ಪಡೆದುಕೊಳ್ಳಲಾಗಿದೆ. ಜನಸಂಖ್ಯೆ, ದಲಿತರ ಜನಸಂಖ್ಯೆ, ಸಾಕ್ಷರತೆ, ದುಡಿಮೆಗಾರರು, ಭೂರಹಿತ ಕೃಷಿ ದುಡಿಮೆಗಾರರು, ಸಾಗುವಳಿದಾರರು ಮುಂತಾದ ವಿಷಯಗಳಿಗೆ ಸಂಬಂಧಿಸಿದ ಅಂಕಿಅಂಶಗಳನ್ನು ಜನಗಣತಿ ವರದಿಗಳಿಂದ ಪಡೆದುಕೊಳ್ಳಲಾಗಿದೆ. ಜನಗಣತಿ ವರದಿಗಳಲ್ಲಿ ನಮಗೆ ಒಟ್ಟು ಜನಸಂಖ್ಯೆ, ಪರಿಶಿಷ್ಟ ಜಾತಿ ಜನಸಂಖ್ಯೆ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆ ಬಗ್ಗೆ ಮಾಹಿತಿ ದೊರೆಯುತ್ತದೆ.

೬. ಕರ್ನಾಟಕ ಸರ್ಕಾರವು ಪ್ರತಿ ವರ್ಷ ಪ್ರಕಟಿಸುವ ಕರ್ನಾಟಕ ಆರ್ಥಿಕ ಸಮೀಕ್ಷೆಯ ವರದಿಗಳು ಬಹಳ ಉಪಯುಕ್ತವಾಗಿವೆ. ನಮಗೆ ಅಗತ್ಯವಾದ ಮಾಹಿತಿಯನ್ನು ೨೦೧೦ರ ನಂತರ ಪ್ರಕಟವಾಗಿರುವ ಪ್ರತಿ ವರ್ಷದ ಆರ್ಥಿಕ ಸಮೀಕ್ಷೆಯನ್ನು ಅಧ್ಯಯನ ಮಾಡಿ ಅಗತ್ಯವಾದ ಅಂಕಿಅಂಶಗಳನ್ನು ಬಳಸಿಕೊಳ್ಳಲಾಗಿದೆ.

೭. ಡಾ. ಎಂ. ಚಂದ್ರ ಪೂಜಾರಿ ಅವರ 'ದಲಿತ ಮಾನವ ಅಭಿವೃದ್ಧಿ' ೨೦೧೬, ದಲಿತ ಹಕ್ಕುಗಳ ಸಮಿತಿ, ಬೆಂಗಳೂರು ಈ ಕೃತಿಯನ್ನು ನಮ್ಮ ಅಧ್ಯಯನದ ಸೈದ್ಧಾಂತಿಕ ತಳಹದಿಯನ್ನಾಗಿ ಉಪಯೋಗಿಸಲಾಗಿದೆ.

೮. ಅಮರ್ತ್ಯ ಸೇನ್ ಅವರ ಡೆವಲಪ್‌ಮೆಂಟ್ ಆಫ್ ಫ್ರೀಡಮ್(೧೯೯೯), ಮೆಹಬೂಬ್ ಉಲ್ ಹಕ್ ಅವರ ರಿಫ್ಲೆಕ್ಷನ್ ಆನ್ ಹ್ಯೂಮನ್ ಡೆವಲಪ್‌ಮೆಂಟ್ ೧೯೯೫ ಕೃತಿಗಳು ಪ್ರಸ್ತುತ ಅಧ್ಯಯನಕ್ಕೆ ಪೂರಕ ಮಾಹಿತಿಗಳನ್ನು ನೀಡುತ್ತವೆ. ಅಲ್ಲದೆ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದ ಡಾ. ಟಿ.ಆರ್. ಚಂದ್ರಶೇಖರ, ಡಾ. ಚಂದ್ರ ಪೂಜಾರಿ, ಡಾ. ಎಚ್.ಡಿ. ಪ್ರಶಾಂತ್, ಡಾ. ಜನಾರ್ದನ, ಡಾ, ಸಿದ್ದಗಂಗಮ್ಮ ಮತ್ತು ಡಾ. ಎ. ಶ್ರೀಧರ್ ಅವರುಗಳ ಮಾನವ ಅಭಿವೃದ್ಧಿಗೆ ಸಂಬಂಧಿಸಿದ ಪ್ರಕಟಣೆಗಳನ್ನು ಇಲ್ಲಿ ವಿಸ್ತೃತವಾಗಿ ಬಳಸಿಕೊಳ್ಳಲಾಗಿದೆ. ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗವು ಪ್ರಕಟಿಸುತ್ತಿರುವ ಅಭಿವೃದ್ಧಿ ಅಧ್ಯಯನ ಪತ್ರಿಕೆಯ ಸಂಚಿಕೆಗಳಲ್ಲಿ ಪ್ರಕಟವಾಗಿರುವ ಸಂಶೋಧನ ಪ್ರಬಂಧಗಳನ್ನು ಅಧ್ಯಯನ ಮಾಡಿ ಉಪಯುಕ್ತ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ.

೯. ಯು ಎನ್ ಡಿ ಪಿ ಪ್ರಕಟಿಸುತ್ತಿರುವ ಮಾನವ ಅಭಿವೃದ್ಧಿ ವರದಿಗಳು(೧೯೯೦, ೧೯೯೫, ೨೦೦೦)

ಈ ಎಲ್ಲ ಅಧ್ಯಯನಗಳಲ್ಲಿನ ಫಲಿತಗಳನ್ನು ಮತ್ತು ಅಲ್ಲಿ ಅಳವಡಿಸಿಕೊಂಡಿರುವ ವಿಧಾನಗಳನ್ನು ಬಳಸಿಕೊಂಡು ಇಲ್ಲಿ ಕೆಲವು ತೀರ್ಮಾನಗಳನ್ನು ಪಡೆದುಕೊಳ್ಳಲಾಗಿದೆ. ಈಗಾಗಲೆ ಹೇಳಿರುವಂತೆ ಅಧ್ಯಯನಕಾರರ ಸ್ವಂತ ಅನುಭವಗಳನ್ನು ಇಲ್ಲಿ ಚರ್ಚೆಗೆ ಬಳಸಿಕೊಳ್ಳಲಾಗಿದೆ.

ಸಮಾಜ ವಿಜ್ಞಾನಗಳಲ್ಲಿ ಅಧ್ಯಯನ ವಿಷಯಕ್ಕೆ ಎಷ್ಟು ಮಹತ್ವವಿದೆಯೋ ಅದರಷ್ಟೇ ಕೆಲವೊಮ್ಮೆ ಅದಕ್ಕಿಂತ ತುಸು ಹೆಚ್ಚು ಮಹತ್ವ ಅಧ್ಯಯನ ವಿಧಾನಕ್ಕಿದೆ. ಅಧ್ಯಯನ ವಿಧಾನ ಅನ್ನುವುದು ಕೇವಲ ಮಾಹಿತಿ ಸಂಗ್ರಹಕ್ಕೆ, ಅಂಕಿಅಂಶಗಳ ಸಂಗ್ರಹಕ್ಕೆ ಸಂಬಂಧಿಸಿದ ಸಂಗತಿಯಲ್ಲ. ನಮ್ಮ ಅಧ್ಯಯನವು ಮುಖ್ಯವಾಗಿ ಆನುಷಂಗಿಕ ಮೂಲಗಳ ಮಾಹಿತಿಯನ್ನು ಅವಲಂಬಿಸಿದ ಅಧ್ಯಯನ. ಈ ಅಧ್ಯಯನದ ಸಂದರ್ಭದಲ್ಲಿ ಅಗತ್ಯವಿದ್ದ ಕಡೆ ಅಭಿವೃದ್ಧಿ ಕುರಿತ ಸೈದ್ಧಾಂತಿಕ ಸಂಗತಿಗಳನ್ನು ಚರ್ಚೆ ಮಾಡಲಾಗಿದೆ. ಉಹಾಹರಣೆಗೆ ಅಧ್ಯಯನದ ಎಲ್ಲ ಹಂತಗಳಲ್ಲೂ ಮಾನವ ಅಭಿವೃದ್ಧಿ ಮತ್ತು ಆರ್ಥಿಕ ಅಭಿವೃದ್ಧಿಗಳ ನಡುವಿನ ಭಿನ್ನತೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಸಾಮಾನ್ಯವಾಗಿ ಸಮಾಜ ವಿಜ್ಞಾನಗಳ ಅಧ್ಯಯನದಲ್ಲಿ ಬಳಸುವ ಪರಿಮಾಣಾಮಾತ್ಮಕ ಪರಿಕಲ್ಪನೆಗಳನ್ನು ಅಖಂಡ ನೆಲೆಯಲ್ಲಿ ಬಳಸುವುದು ರೂಢಿಯಲ್ಲಿದೆ. ಒಬ್ಬರಿಗೆ ಅನ್ವಯಿಸುವ ಸಂಗತಿ ಎಲ್ಲರಿಗೂ ಅನ್ವಯಿಸುತ್ತದೆ ಎಂಬುದು ಇಲ್ಲಿನ ಗೃಹೀತ. ಆದರೆ ಮೂಲತಃ ಅಸಮಾನತೆಯಿಂದ, ಶ್ರೇಣೀಕರಣದಿಂದ ಕೂಡಿರುವ ನಮ್ಮ ಸಮಾಜದಲ್ಲಿ ಅಖಂಡ ನೆಲೆಯಲ್ಲಿ ಅಥವಾ ವಿಶ್ವಾತ್ಮಕ ನೆಲೆಯಲ್ಲಿ(ಅಗ್ರಿಗೇಟ್) ನಡೆಸುವ ಅಧ್ಯಯನಗಳು ಸಮಸ್ಯೆಯ ನಿಜ ಚಿತ್ರಣವನ್ನು ನೀಡಲಾರವು. ಏಕೆಂದರೆ ಅನೂಚಾನವಾಗಿ ಪ್ರತ್ಯೇಕೀಕರಣವನ್ನು ಅನುಭವಿಸಿಕೊಂಡು ಬರುತ್ತಿರುವ ದಲಿತರು ನಮ್ಮ ಸಮಾಜದಲ್ಲಿದ್ದಾರೆ. ಅವರ ಸಮಸ್ಯೆಗಳನ್ನು ಎಲ್ಲರ ಸಮಸ್ಯೆಗಳಿಗೆ ಸಮಾನ ಎಂದು ಭಾವಿಸಿ ಅಧ್ಯಯನ ನಡೆಸುವುದು, ಚರ್ಚೆ ಮಾಡುವುದು ಸರಿಯಲ್ಲ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಸಮಾಜದ ಅವಿಭಾಜ್ಯ ಅಂಗವಾದ, ಆದರೆ ಪ್ರತ್ಯೇಕೀಕರಣವನ್ನು ಅನುಭವಿಸುತ್ತಿರುವ ದಲಿತರ ಮಾನವ ಅಭಿವೃದ್ಧಿ ನೆಲೆಗಳನ್ನು ಶೋಧಿಸುವ ಕೆಲಸವನ್ನು ಮಾಡಲಾಗಿದೆ.

### ೧.೯.೧. ಅವಲೋಕನ

ಸಮಾಜ ವಿಜ್ಞಾನ ಸಂಶೋಧನೆಗಳಲ್ಲಿ ಮತ್ತೊಂದು ಪ್ರಮುಖ ಸಂಶೋಧನಾ ವಿಧಾನವೆಂದರೆ ಅವಲೋಕನ. ಪ್ರಸ್ತುತ ಅಧ್ಯಯನದಲ್ಲಿ ಆನುಷಂಗಿಕ ಮೂಲಗಳನ್ನು ಹೆಚ್ಚು ಬಳಸಲಾಗಿದೆಯಾದರೂ, ಒಂದು ಸಂಶೋಧನೆಯು ವಾಸ್ತವ ಸಂಗತಿಗಳನ್ನು ಹೇಳಬೇಕಾದರೆ ಕಾರ್ಯಕ್ಷೇತ್ರ ಮತ್ತು ಅವಲೋಕನಗಳನ್ನು ನಡೆಸುವುದು ಮುಖ್ಯ. ಹಾಗಾಗಿ ಅಧ್ಯಯನದಲ್ಲಿ ಬಳಸಲಾಗಿರುವ ವರದಿಗಳ ತಥ್ಯ ಮತ್ತು ಅಂಕಿ–ಅಂಶಗಳು ಎಷ್ಟರಮಟ್ಟಿಗೆ ಸತ್ಯ ಎಂಬ ಸಂಗತಿಗಳನ್ನು ತಿಳಿಯಲು, ನಾನು ಅಧ್ಯಯನಪೂರ್ವದಲ್ಲಿ ಚಿತ್ರದುರ್ಗ–ದಾವಣಗೆರೆ ಜಿಲ್ಲೆಗಳಲ್ಲಿ ಬರುವ ನಗರ ಮತ್ತು ಗ್ರಾಮಗಳನ್ನು ವೀಕ್ಷಣೆ ನಡೆಸಿ ಅವಲೋಕನ ನಡೆಸಲಾಗಿದೆ. ಸಾಂಸ್ಥಿಕ ಸೇರ್ಪಡೆ, ಸಾಮಾಜಿಕ ಸೇರ್ಪಡೆ, ಸಾಮಾಜಿಕ ಪರಿಗ್ರಹಣೆ ಇನ್ನು ಮುಂತಾದ ಸಿ.ಡಿ.ಡಿ.ಐ ಸೂಚಿಗಳ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನ ಕೆಲವು ಗ್ರಾಮಗಳಲ್ಲಿ ಮತ್ತು ದಾವಣಗೆರೆ ಜಿಲ್ಲೆಯ ಜಗಳೂರು ತಾಲೂಕಿನ ಕೆಲವು ಗ್ರಾಮಗಳಲ್ಲಿ ದಲಿತರ(ಪ.ಜಾತಿ(ಸ್ಪರ್ಶ ಮತ್ತು ಅಸ್ಪೃಶ್ಯ)ಮತ್ತು ಪ.ಪಂಗಡ) ಪರಿಸ್ಥಿತಿಯನ್ನು ಅವಲೋಕಿಸಲಾಗಿದೆ. ಅಂದರೆ ಅಧ್ಯಯನ ಯಾವುದೇ ರೀತಿಯಲ್ಲಿ ಹೆಚ್ಚು ಪೂರ್ವಗ್ರಹ ಪೀಡಿತರಾಗದೆ ನಾನು ಸ್ವತಃ ಕಂಡು ಅವಲೋಕಿಸಿದ ಮತ್ತು ವರದಿಗಳಲ್ಲಿ ಲಭ್ಯವಾಗಿರುವ ಸಂಗತಿಗಳನ್ನು ಹೋಲಿಕೆಮಾಡಿ ನೋಡಲಾಗಿದೆ.

### ೧.೧೦. ಅಧ್ಯಯನದ ಮಹತ್ವ

ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ಆನುಷಂಗಿಕ ಮೂಲಗಳಿಂದ ಸಂಗ್ರಹಿಸಿಕೊಳ್ಳಲಾಗಿದೆ. ಮಾನವ ಅಭಿವೃದ್ಧಿ ದಲಿತರ ಮಾನವ ಅಭಿವೃದ್ಧಿ ಧಾರಣ ಸಾಮರ್ಥ್ಯ, ಸಾಕ್ಷರತೆ, ಭೂಮಾಲಿಕತ್ವ ಮುಂತಾದ ವಿಷಯಗಳ ಬಗ್ಗೆ ಆಳವಾದ ಚರ್ಚೆಯನ್ನು ಇಲ್ಲಿ ಮಾಡಲಾಗಿದೆ. ಸಮಾಜದಲ್ಲಿ ಏಕೆ ಅಸಮಾನತೆಗಳಿವೆ, ದಲಿತರ ಅಭಿವೃದ್ಧಿ ಮಟ್ಟ ಏಕೆ ಉಳಿದ ಸಾಮಾನ್ಯ ಜನಸಂಖ್ಯೆಗಿಂತ ಕೆಳಮಟ್ಟ

ದಲ್ಲಿ ಎಂಬುದನ್ನು ಅರ್ಥ ಮಾಡಿಕೊಳ್ಳಲು ಇದೊಂದು ಉಪಯುಕ್ತ ದಾಖಲೆಯಾಗಿದೆ. ಕರ್ನಾಟಕವನ್ನು ಆಧಾರವಾಗಿಟ್ಟುಕೊಂಡು ನಡೆಸಿದ ಅಧ್ಯಯನ ಇದಾಗಿರುವುದರಿಂದ ಅದರ ಅಭಿವೃದ್ಧಿಯ ವಿವಿಧ ಆಯಾಮಗಳನ್ನು ಅರ್ಥ ಮಾಡಿಕೊಳ್ಳಲು ಇದೊಂದು ಮಹತ್ವದ ಅಧ್ಯಯನವಾಗಿದೆ. ಸಾಕ್ಷರತೆ, ದಲಿತರ ಜನಸಂಖ್ಯೆ, ಒಟ್ಟು ದುಡಿಮೆಗಾರರು, ದಲಿತರಲ್ಲಿ ದುಡಿಮೆಗಾರರು, ಭೂರಹಿತ ದುಡಿಮೆಗಾರರು ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಇತ್ತೀಚಿನ ಅಂದರೆ ೨೦೧೧ರ ಮಾಹಿತಿ ಇಲ್ಲಿರುವುದರಿಂದ ಕರ್ನಾಟಕದ ಅಭಿವೃದ್ಧಿಯನ್ನು ಅರ್ಥ ಮಾಡಿಕೊಳ್ಳಲು ಇದು ಸಹಾಯಕವಾಗುತ್ತದೆ.

ದಲಿತರ ಅಭಿವೃದ್ಧಿಯು ಕೆಳಮಟ್ಟದಲ್ಲಿರುವುದಕ್ಕೆ ಅವರು ಅನುಭವಿಸುತ್ತಿರುವ ಪ್ರತ್ಯೇಕೀಕರಣವು ಕಾರಣ ಎಂಬುದನ್ನು ಇಲ್ಲಿ ಸಾಧಿಸಲಾಗಿದೆ.

ಅಭಿವೃದ್ಧಿಯಲ್ಲಿ ವರಮಾನ, ಬಂಡವಾಳ ಮುಕ್ತ ಉತ್ಪಾದನೆಗಳಿಗಿಂತ ಅದರ ಸಾಮಾಜಿಕ ಸಂಗತಿಗಳಾದ ಸಾಕ್ಷರತೆ, ಆರೋಗ್ಯ, ಭದ್ರತೆ, ಅಸಮಾನತೆ, ಭೂಮಾಲೀಕತ್ವ ಮುಂತಾದ ಸಂಗತಿಗಳು ಏಕೆ ಮುಖ್ಯ ಎಂಬುದನ್ನು ಪ್ರಸ್ತುತ ಅಧ್ಯಯನ ವರದಿಯಿಂದ ತಿಳಿದುಕೊಳ್ಳಬಹುದು.

### ೧.೧೧. ಈ ಅಧ್ಯಯನದಲ್ಲಿ ಏನನ್ನು ಹೇಳಲಾಗುತ್ತಿದೆ?

ನಮ್ಮ ಸಮಾಜದಲ್ಲಿನ ಪ.ಜಾ ಮತ್ತು ಪ.ಪಂ. ಸಮುದಾಯಗಳನ್ನು ದಲಿತರು ಎಂದು ಕರೆಯಲಾಗಿದೆ. ಅಂದಮೇಲೆ ದಲಿತರನ್ನು ಬಿಟ್ಟು ಉಳಿದ ಸಮುದಾಯಗಳನ್ನು ದಲಿತೇತರರು ಎಂದು ಕರೆಯುವುದು ಸೂಕ್ತ. ಈ ಎರಡು ಸಮುದಾಯಗಳ ನಡುವೆ ಇರುವ ಭಿನ್ನತೆಗಳನ್ನು ದಾಖಲಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಈ ಎರಡು ಸಮುದಾಯಗಳ ನಡುವೆ ಭಿನ್ನತೆ ಅನ್ನುವುದು ಕೇವಲ ಆರ್ಥಿಕ ಸಂಗತಿಗಳಿಗೆ ಮಾತ್ರ ಸೀಮಿತವಲ್ಲ. ಇದಕ್ಕೆ ಅನೇಕ ಆಯಾಮಗಳಿವೆ. ಅದು ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಮಾನಸಿಕ ಮುಂತಾದ ಸಂಗತಿಗಳನ್ನು ಒಳಗೊಂಡಿದೆ. ನಮ್ಮ ಅಧ್ಯಯನದಲ್ಲಿ ಚರ್ಚೆಯನ್ನು ಆರ್ಥಿಕ ಮತ್ತು ಸಾಮಾಜಿಕ ಸಂಗತಿಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ.

ದಲಿತರು ಮತ್ತು ದಲಿತೇತರರ ನಡುವಿನ ಭಿನ್ನತೆಗೆ ಕಾರಣಗಳಾವುವು? ಅವುಗಳನ್ನು ಮೂಲದಲ್ಲಿನ ಸೈದ್ಧಾಂತಿಕ ಸಂಗತಿಗಳನ್ನು ಹಿಡಿಯಲು ಪ್ರಯತ್ನ ಮಾಡಲಾಗಿದೆ. ಒಟ್ಟಾರೆ ಪ್ರಸ್ತುತ ಅಧ್ಯಯನದ ಮೂಲಕ ನಮ್ಮ ಸಮಾಜವನ್ನು ಕಾಡುತ್ತಿರುವ ಅಸಮಾನತೆಯ ನೆಲೆಗಳನ್ನು ಶೋಧಿಸುವ ಪ್ರಯತ್ನ ನಡೆಸಲಾಗಿದೆ. ಅಸಮಾನತೆಯನ್ನು ಅರ್ಥ ಮಾಡಿಕೊಳ್ಳುವುದರ ಮೂಲಕ ಅದಕ್ಕೆ ಪರಿಹಾರಗಳನ್ನು ಕಂಡುಕೊಳ್ಳಬಹುದಾಗಿದೆ.

ಈ ಅಧ್ಯಯನದಲ್ಲಿ ಮುಖ್ಯ ಪ್ರಶ್ನೆ ನಮ್ಮ ಸಮಾಜದಲ್ಲಿ ದಲಿತರ ಅಭಿವೃದ್ಧಿಯು ಸಾಮಾನ್ಯ ಅಭಿವೃದ್ಧಿಗಿಂತ ಏಕೆ ಕೆಳಮಟ್ಟದಲ್ಲಿದೆ ಎಂಬುದರ ವಿಶ್ಲೇಷಣೆಯನ್ನು ಒಳಗೊಂಡ ಅಧ್ಯಯನವಾಗಿದೆ.

ಈ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನವೇ ಪ್ರಸ್ತುತ ಅಧ್ಯಯನ. ದಲಿತರು ಮತ್ತು ಸಾಮಾನ್ಯ ಜನರ ಅಭಿವೃದ್ಧಿಗಳ ನಡುವೆ ಏಕೆ ಭಿನ್ನತೆಗಳಿವೆ? ಅದರಲ್ಲಿ ದಲಿತ ಮಹಿಳೆಯರ ಅಭಿವೃದ್ಧಿ ಸ್ಥಿತಿಗತಿಯು ಸಾಮಾನ್ಯ ಮಹಿಳೆಯರ ಅಭಿವೃದ್ಧಿ ಸ್ಥಿತಿಗತಿಗಿಂತ ಏಕೆ ಕೆಳಮಟ್ಟದಲ್ಲಿದೆ ಎಂಬುದನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ದಲಿತರ ಅಭಿವೃದ್ಧಿ ಕುರಿತಂತೆ ವಿಶೇಷ ಕ್ರಮಗಳನ್ನು ಸಂವಿಧಾನಿಕ ನೆಲೆಯಲ್ಲಿ ಪಾಲಿಸುತ್ತಿದ್ದರೂ ಅವರ ಅಭಿವೃದ್ಧಿ ಏಕೆ ಕುಂಟಿತಗೊಂಡಿದೆ? ಅಭಿವೃದ್ಧಿಯ ಯಾವ ಸೂಚಿಗಳನ್ನು ತೆಗೆದುಕೊಂಡರೂ ದಲಿತ ಮತ್ತು ದಲಿತ ಮಹಿಳೆಯರ ಅಭಿವೃದ್ಧಿ ಏಕೆ ಕೆಳಮಟ್ಟದಲ್ಲಿದೆ? ಮಾನವ ಅಭಿವೃದ್ಧಿ ಮತ್ತು ಆರ್ಥಿಕ ಅಭಿವೃದ್ದಿಗಳ ನಡುವಿನ ಭಿನ್ನತೆಗಳನ್ನು ಗುರುತಿಸುವುದು ಅಧ್ಯಯನದ ಒಂದು ನೆಲೆಯಾದರೆ ಸಾಮಾನ್ಯದ ಅಭಿವೃದ್ಧಿ ಮತ್ತು ದಲಿತರ ಅಭಿವೃದ್ಧಿ ನಡುವಿನ ಭಿನ್ನತೆಯನ್ನು ಚರ್ಚಿಸುವುದು ಇದರ ಮತ್ತೊಂದು ಆಯಾಮವಾಗಿದೆ.

ನಮ್ಮ ಸಮಾಜದ ಸಂದರ್ಭದಲ್ಲಿ ಬಂಡವಾಳ, ಉತ್ಪಾದನೆ, ವರಮಾನ, ಉಳಿತಾಯ ಮುಂತಾದವು ಅಭಿವೃದ್ಧಿಯನ್ನು ನಿರ್ದರಿಸುವ ಸಂಗತಿಗಳಾಗಿಲ್ಲ. ಜನರ ಜಾತಿ, ಧರ್ಮ, ಲಿಂಗ ಪ್ರಮುಖ ಪಾತ್ರ ವಹಿಸುತ್ತವೆ. ಈ ಸಂಗತಿಗಳನ್ನು ಹೊರತು ಪಡಿಸಿ ಅಭಿವೃದ್ಧಿ ಅಧ್ಯಯನ ಮಾಡುವುದು ಸಾಧ್ಯವಿಲ್ಲ. ಇದನ್ನು ಡಾ, ಚಂದ್ರ ಪೂಜಾರಿ ಅವರು ತಮ್ಮ 'ದಲಿತ ಮಾನವ ಅಭಿವಧ್ಧಿ' (೨೦೧೬) ಕೃತಿಯಲ್ಲಿ ಸೋಧಾರಣವಾಗಿ ಸಾಧಿಸಿದ್ದಾರೆ. ಅದೇ ದೃಷ್ಟಿಕೋನದಿಂದ ಇಲ್ಲಿ ಕರ್ನಾಟಕದ ದಲಿತರ ಅಭಿವೃದ್ಧಿಯನ್ನು ಮಾನವ ಅಭಿವೃದ್ದಿ ದೃಷ್ಟಿಯಿಂದ ಮತ್ತು ಡಾ. ಚಂದ್ರ ಪೂಜಾರಿಯವರ 'ದಲಿತ ಅಭಿವೃದ್ಧಿ ಸೂಚ್ಯಂಕ'ಗಳನ್ನು ಆಧಾರವಾಗಿಟ್ಟುಕೊಂಡು ಅಧ್ಯಯನ ನಡೆಸಲಾಗಿದೆ. ದಲಿತರ ಮತ್ತು ದುರ್ಬಲ ವರ್ಗಗಳ ಅಭಿವೃದ್ದಿಯು ಕೇವಲ ಬಂಡವಾಳದ ಪ್ರಶ್ನೆಯಲ್ಲ, ಅದು ಉತ್ಪಾದನೆಯ ಪ್ರಶ್ನೆಯಲ್ಲ. ಅದು ಘನತೆಯಿಂದ ಬದುಕುವ ಪ್ರಶ್ನೆ.

ದಲಿತರ ಮಾನವ ಅಭಿವೃದ್ದಿ ಮಟ್ಟವು ಕೆಳಸ್ತರದಲ್ಲಿರಲು ಮುಖ್ಯ ಕಾರಣವೆಂದರೆ ಸಮಾಜ ಅವರ ಬಗ್ಗೆ ತೋರುತ್ತಿರುವ ತಾರತಮ್ಯ ಧೋರಣೆ, ಸಾಮಾಜಿಕ ಪ್ರತ್ಯೇಕತೆ, ಆರ್ಥಿಕ ದುಸ್ಥಿತಿ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ತೋರಿಸಲಾಗುತ್ತದೆ.

### ೧.೧೨. ಅಧ್ಯಯನದ ಅಧ್ಯಾಯಗಳ ವಿನ್ಯಾಸ(ಸ್ವರೂಪ)

ಈ ಅಧ್ಯಯನದಲ್ಲಿ ಆರು ಅಧ್ಯಾಯಗಳಿವೆ.

ಮೊದಲನೆಯ ಅಧ್ಯಾಯವು ಸಮಾಜ ವಿಜ್ಞಾನ ಸಂಶೋಧನೆಯಲ್ಲಿ ರೂಢಿಯಲ್ಲಿರುವಂತೆ ಪ್ರಸ್ತಾವನೆ ರೂಪದ್ದಾಗಿದೆ. ಈ ಅಧ್ಯಾಯದಲ್ಲಿ ವಿಷಯ ಪ್ರವೇಶ, ಸಮಸ್ಯೀಕರಣ, ಅಧ್ಯಯನ ವಿಷಯದ ಸ್ಥೂಲ ರೂಪುರೇಷೆ, ಅಧ್ಯಯನದ ಉದ್ದೇಶಗಳು, ಅಧ್ಯಯನ ವಿಧಾನ ಮತ್ತು ಅಧ್ಯಯನದ ಮಹತ್ವ ಮುಂತಾದ ವಿಷಯಗಳನ್ನು ಚರ್ಚೆ ಮಾಡಲಾಗಿದೆ. ಈ ಅಧ್ಯಾಯದ ಬಹುಮುಖ್ಯ ಭಾಗವೆಂದರೆ ಅಭಿವೃದ್ಧಿಯನ್ನು ಹಕ್ಕುಗಳ ಪರಿಭಾವನೆಯಲ್ಲಿ ನೋಡಬೇಕೆಂಬ ಚರ್ಚೆ.

ಎರಡನೆಯ ಅಧ್ಯಾಯದಲ್ಲಿ ಮಾನವ ಅಭಿವೃದ್ಧಿ ಪ್ರಣಾಳಿಕೆಯ ಚಾರಿತ್ರಿಕ ಬೆಳವಣಿಗೆಯನ್ನು ಕುರಿತಂತೆ ಚರ್ಚೆ ಮಾಡಲಾಗಿದೆ. ಜಾಗತಿಕ ಮಟ್ಟದಲ್ಲಿ ಅದು ಬೆಳೆದು ಬಂದ ಬಗೆ, ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರೂಪಿಸಿದ ಕ್ರಮ ಮುಂತಾದ ಸಂಗತಿಗಳನ್ನು ಚರ್ಚೆ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ದಲಿತರ ಮಾನವ ಅಭಿವೃದ್ಧಿ, ದಲಿತ ಅಭಿವೃದ್ಧಿ ಸೂಚ್ಯಂಕ ಮತ್ತು ಅವುಗಳ ವಿವಿಧ ಆಯಾಮಗಳನ್ನು ಕುರಿತಂತೆ ವಿವರಣೆ ನೀಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ದಲಿತರು ಮತ್ತು ದಲಿತೇತರರ ನಡುವಿನ ಅಭಿವೃದ್ಧಿಯ ಭಿನ್ನತೆಗಳನ್ನು ದಾಖಲಿಸಲಾಗಿದೆ. ಮುಖ್ಯವಾಗಿ ದಲಿತರು ಮತ್ತು ದಲಿತೇತರರ ನಡುವಿನ ಸಾಕ್ಷರತೆ, ದುಡಿಮೆಗಾರರು, ಭೂಮಾಲೀಕತ್ವ ಮುಂತಾದ ಸಂಗತಿಗಳ ಆಧಾರವಾಗಿಟ್ಟುಕೊಂಡು ಚರ್ಚಿಸಲಾಗಿದೆ. ದಲಿತರು ಮತ್ತು ದಲಿತೇತರರ ನಡುವೆ ಅಭಿವೃದ್ಧಿಗೆ ಸಂಬಂಧಿಸಿದಂತೆ ವ್ಯತ್ಯಾಸಗಳಿವೆ ಎಂಬ ಪ್ರಶ್ನೆಯನ್ನು ಕುರಿತಂತೆ ಚರ್ಚೆ ಮಾಡಲಾಗಿದೆ. ಇಲ್ಲಿ ಆರ್ಥಿಕ ವಿಷಯಗಳಿಗೆ ನೀಡದಷ್ಟೆ ಮಹತ್ವವನ್ನು ಆರ್ಥಿಕೇತರ ವಿಷಯಗಳಿಗೂ ನೀಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ದಲಿತ ಮಾನವ ಅಭಿವೃದ್ಧಿ ಸೂಚಿ ಮತ್ತು ಅದರ ರಾಜ್ಯ ಮಟ್ಟದಲ್ಲಿನ ಫಲಿತಗಳನ್ನು ತುಲಾನಾತ್ಮಕ ಅಧ್ಯಯನ ನಡೆಸಲಾಗಿದೆ.

ಈ ಅಧ್ಯಯನದ ಕೊನೆಯ ಅಧ್ಯಾಯವು ಅಧ್ಯಯನದ ಫಲಿತ ಮತ್ತು ಅಧ್ಯಯನದ ಆಧಾರದಲ್ಲಿ ಕೆಲವು ಶಿಫಾರಸ್ಸುಗಳನ್ನು ಒಳಗೊಂಡಿದೆ.

ಅಧ್ಯಾಯ ಎರಡು

# ಮಾನವ ಅಭಿವೃದ್ಧಿ ಪ್ರಣಾಳಿಕೆ ಚಾರಿತ್ರಿಕೆ ಹಿನ್ನೆಲೆ

ಪೀಠಿಕೆ

ಆರ್ಥಿಕ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿಗಳ ನಡುವಿನ ಭಿನ್ನತೆಗಳು

ವರಮಾನ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿ

ಟ್ರಿಕಲ್ ಡೌನ್ ಎಕನಾಮಿಕ್ಸ್

ಅಮರ್ತ್ಯ ಸೇನ್ ಮತ್ತು ಮೆಹಬೂಬ್ ಉಲ್ ಹಕ್ ಅವರ ವಿಚಾರಗಳು

ಉಪಸಂಹಾರ

ಅಧ್ಯಾಯ ಎರಡು

# ಮಾನವ ಅಭಿವೃದ್ಧಿ ಪ್ರಣಾಳಿಕೆಯ ಚಾರಿತ್ರಿಕ ಹಿನ್ನೆಲೆ

## ೨.೧. ಪೀಠಿಕೆ

ಪ್ರಸ್ತುತ ಅಭಿವೃದ್ಧಿಗಿಂತ ಸಮಾಜಮುಖಿ ಚಿಂತನೆಗಳು ಮುಖ್ಯ. ಇಂತಹ ಅಧ್ಯಯನಗಳನ್ನು ಮಾನವ ಅಭಿವೃದ್ಧಿ ಮಾಡುತ್ತದೆ. ಇದು ಜನರನ್ನು ಒಳಗೊಂಡ ಅಭಿವೃದ್ಧಿ. ಪ್ರಸ್ತುತ ಅಧ್ಯಾಯದಲ್ಲಿ ಆರ್ಥಿಕ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿಯ ಭಿನ್ನತೆಗಳನ್ನು ಅಮರ್ತ್ಯಸೇನ್ ಅವರ ಚಿಂತನಾ ಪಥ, ಯು.ಎನ್.ಡಿ.ಪಿ. ವರದಿಗಳು ಮತ್ತು ಕರ್ನಾಟಕದ ಮಾನವ ಅಭಿವೃದ್ಧಿಗಳನ್ನು ತಾತ್ವಿಕವಾಗಿ ಪರಾಮರ್ಶಿಸಲಾಗಿದೆ. ವಿಶೇಷವಾಗಿ ಸೇನ್‌ರವರ ಆಹಾರ, ಅರಿವೆ, ಅಕ್ಷರ, ಆರೋಗ್ಯ ಮತ್ತು ವಸತಿಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಜೊತೆಗೆ ಇತ್ತೀಚಿನ ದಿನಮಾನದಲ್ಲಿ ಚರ್ಚಿಸಲ್ಪಡುವ ಲಿಂಗ ತಾರತಮ್ಯ ಮಾನವ ಅಭಿವೃದ್ಧಿಯ ಪ್ರಣಾಳಿಕೆಗಳು ಆರ್ಥಿಕ ಅಭಿವೃದ್ಧಿಗಿಂತ ಅತಿ ಮುಖ್ಯವಾಗಿರುವ ಸಂಗತಿಗಳಾಗಿವೆ.

ಜೀವಪರ ಅಗತ್ಯ ಸೌಕರ್ಯಗಳ ಅಭಿವೃದ್ಧಿ ಎಷ್ಟು ಮುಖ್ಯವೋ ಅಷ್ಟೇ ಅಂಚಿನ ಸಮುದಾಯದ ಎಲ್ಲ ರೀತಿಯಲ್ಲಿ ಬದುಕುವ-ಹಕ್ಕಿನ ಸ್ವಾತಂತ್ರ್ಯ, ಎಲ್ಲರೂ ಪಾಲ್ಗೊಳ್ಳುವ ಮುಕ್ತ ಸ್ವಾತಂತ್ರ್ಯ ಅತಿ ಮುಖ್ಯವಾಗಿರುತ್ತದೆ. ಇದು ಮಾನವ ಅಭಿವೃದ್ಧಿಯ ಪ್ರಣಾಳಿಕೆಯಲ್ಲಿ ಪ್ರಸ್ತಾಪಿತವಾಗಿರಬೇಕೆಂಬುದು. ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

## ೨.೨. ಆರ್ಥಿಕ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿಗಳ ನಡುವಿನ ಭಿನ್ನತೆಗಳು

ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನದಲ್ಲಿ ಆರ್ಥಿಕ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿಗೆ ಸಂಬಂಧಿಸಿದಂತೆ ಹೊಸ-ಹೊಸ ಆಯಾಮಗಳಲ್ಲಿ ಚರ್ಚೆಗಳು ಆರಂಭಗೊಂಡಿವೆ. ಅದರಲ್ಲೂ ಜಾಗತೀಕರಣವು ಇಡೀ ಜಗತ್ತನ್ನು ಆವರಿಸಿದೆ. ಎಲ್ಲ ದೇಶಗಳ ಮೂಲಕಸುಬುಗಳಾದ ಕೃಷಿ, ಕೈಗಾರಿಕೆ ವ್ಯಾಪಾರ, ವಾಣಿಜ್ಯ ಇವುಗಳು ಬದಲಾದ ಆರ್ಥಿಕ ಸನ್ನಿವೇಶದಲ್ಲಿ ಆರ್ಥಿಕ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿ ಸಂಬಂಧವನ್ನು ಅರ್ಥ ಮತ್ತು ಅದರ ಸ್ವರೂಪ

ಬಹುಮುಖ್ಯವೆಂದು ಭಾವಿಸಬೇಕಾಗಿದೆ. ಏಕೆಂದರೆ ಅಭಿವೃದ್ಧಿ ಮತ್ತು ಅನಭಿವೃದ್ಧಿ ರಾಷ್ಟ್ರಗಳ ನಡುವಿನ ಗುಂಪಿನ ವ್ಯತ್ಯಾಸ ಅರಿಯಲು ಹಲವು ಮಾನದಂಡ(ಪ್ಯಾರಾಮೀಟರ್) ಅನುಸರಿಸ ಬೇಕಾಗುತ್ತದೆ. ಈ ಸಂಬಂಧವಾಗಿ ಸುಪ್ರಸಿದ್ಧ ಆರ್ಥಿಕ ಪಂಡಿತರಾದ ಸೈಮನ್ ಕುಜ್ನೆಟ್ಸ್, ಪಾಲ್ ಆಲ್ಬರ್ಟ್, ಯಂಗಸನ್, ಮೈಯರ್ ಮತ್ತು ಬಾಲ್ಡ್‌ವಿನ್ ಮೊದಲಾದ ಅರ್ಥಶಾಸ್ತ್ರಜ್ಞರು ಮತ್ತು ವಿದ್ವಾಂಸರುಗಳು ರಾಷ್ಟ್ರೀಯ ಆದಾಯದ ಮಾನದಂಡವನ್ನು ಬಳಕೆ ಮಾಡಿಕೊಂಡಿದ್ದಾರೆ. ಆದರೆ ಬೆಂಜಮಿನ್ ಹಿಗಿನ್ಸ್, ಆರ್ಥರ್ ಲೂಯಿಸ್, ವಿನಿಯರ್, ಹಾರ್ವೆಲೈಬೆನ್ ಸ್ಟೈನ್ ಅವರು ತಲಾ ಆದಾಯವನ್ನು ಆಯ್ಕೆ ಮಾಡಿಕೊಂಡಿದ್ದಾರೆ.

**ಪ್ರೊ. ಮೈಯರ್ ಮತ್ತು ಬಾಲ್ಡ್‌ವಿನ್ ಪ್ರಕಾರ** "ದೀರ್ಘಾವಧಿಯಲ್ಲಿ ಆರ್ಥಿಕತೆಯೊಂದರ ನೈಜ ತಲಾ ವರಮಾನ ವೃದ್ಧಿಯಾಗುವ ವಿವಿಧ ಆಯಾಮವೇ ಆರ್ಥಿಕಾಭಿವೃದ್ಧಿ". ನೈಜ ರಾಷ್ಟ್ರೀಯ ಆದಾಯ ಎಲ್ಲ ಅಂತಿಮ ಸರಕು ಸೇವೆಗಳ ಒಟ್ಟು ಉತ್ಪನ್ನವಾಗಿವೆ. ಆದ್ದರಿಂದ ನೈಜ ರಾಷ್ಟ್ರೀಯ ಆದಾಯವನ್ನು ಒಟ್ಟು ರಾಷ್ಟ್ರೀಯ ಉತ್ಪನ್ನ ಅಥವಾ ನಿವ್ವಳ ರಾಷ್ಟ್ರೀಯ ಉತ್ಪನ್ನ ಎಂದು ಪರಿಗಣಿಸಬಹುದು. ದೀರ್ಘ ಕಾಲಾವಧಿಯಲ್ಲಿ ಅಭಿವೃದ್ಧಿ ತ್ವರಿತವಾಗಲು ಇದು ಅತ್ಯಾವಶ್ಯಕವಾಗಿದೆ.

ಜಗತ್ತಿನ ಪ್ರತಿಷ್ಠಿತ ಆರ್ಥಿಕ ತಜ್ಞರ ಬಳಗ ಅಭಿವೃದ್ಧಿಯ ಬಗ್ಗೆ ಗಂಭೀರವಾಗಿ ಚಿಂತಿಸಿದೆ. ಜನರನ್ನು ಒಳಗೊಂಡ ಅಭಿವೃದ್ಧಿಯ ಚಲಕಗಳನ್ನು ಮೈಯರ್ ಮತ್ತು ಬಾಲ್ಡ್‌ವಿನ್, ಪ್ರೊ. ಬಾರನ್, ಕೋಲಿನ್‌ಕ್ಲಾರ್ಕ್, ಕಿಂಡ್ಲಬರ್ಜರ್, ಬರ್ನಾರ್ಡ್ ಓಕುನ್ ಮತ್ತು ಡಬ್ಲ್ಯೂ ರಿಜರ್ಡ್‌ಸನ್, ಪ್ರೊ. ಜೇಕಬ್ ವೈನರ್, ಮುಂತಾದವರು ಅಭಿವೃದ್ಧಿ ನೋಟವನ್ನು ದಾಖಲಿಸಿದ್ದಾರೆ.

**ವಿಶ್ವಸಂಸ್ಥೆಯ ತಜ್ಞ ಸಮಿತಿಯ ಪ್ರಕಾರ** "ಅಭಿವೃದ್ಧಿಯು ಮಾನವನ ಭೌತಿಕ ಅಗತ್ಯಗಳನ್ನು ಮಾತ್ರವಲ್ಲದೆ, ಅವನ ಜೀವನದ ಸಾಮಾಜಿಕ ಸ್ಥಿತಿಯ ಸುಧಾರಣೆಯನ್ನು ಒಳಗೊಂಡಿರುತ್ತದೆ. ಆದ್ದರಿಂದ ಅಭಿವೃದ್ಧಿಯೆಂದರೆ ಆರ್ಥಿಕ ಬೆಳವಣಿಗೆಯೊಂದಿಗೆ ಸಾಮಾಜಿಕ, ಸಾಂಸ್ಕೃತಿಕ, ಸಾಂಸ್ಥಿಕ ಮತ್ತು ಆರ್ಥಿಕ ಮಹಾ ಒಕ್ಕೂಟಗಳು ಬಡರಾಷ್ಟ್ರಗಳ ಹಿತ ಚಿಂತಕ 'ಏಷಿಯನ್ ಡ್ರಾಮ್'ದ ಕರ್ತೃವಾದ ಗುನ್ನಾರ್‌ಮಿರ್ಡಾಲ್ ಅವರೂ ಸಹ ಆರ್ಥಿಕ ಅಭಿವೃದ್ಧಿಯನ್ನು ಇಡೀ ಸಾಮಾಜಿಕ ವ್ಯವಸ್ಥೆ ಮೇಲ್ಮುಖವಾಗಿ ಚಲಿಸುವುದಾಗಿದೆ ಎನ್ನುತ್ತಾರೆ.

ಒಟ್ಟಾರೆಯಾಗಿ ಆರ್ಥಿಕ ಅಭಿವೃದ್ಧಿ ಎಂಬುದು ಒಂದು ದೀರ್ಘಕಾಲೀನ ಚಲನಾತ್ಮಕ ಪ್ರಕ್ರಿಯೆಯಾಗಿದ್ದು ಇದು ಬಹುರಾಷ್ಟ್ರಗಳು ಬಡತನದ ವಿಷವರ್ತುಲವನ್ನು ಭೇದಿಸಲು ಸಹಾಯವಾಗುತ್ತದೆ. ಆರ್ಥಿಕ ಅಭಿವೃದ್ಧಿ ಉತ್ತಮ ಭೌತಿಕ ಮಟ್ಟ ತಲುಪಲು ಸಹಾಯವಾಗುತ್ತದೆ. ಆರ್ಥಿಕ ಅಭಿವೃದ್ಧಿ ಭೌತಿಕ ಸರಕುಗಳ ಮತ್ತು ಜೀವನದ ಇತರೆ ಹಿತದಾಯಕ ಸರಕುಗಳನ್ನು ಸೇರ್ಪಡೆಗೊಳಿಸಲು ನೆರವಾಗುವುದಷ್ಟೇ ಅಲ್ಲದೆ ಆದಾಯ ಮತ್ತು ಸಂಪತ್ತಿನ ಸಮಾನ ಹಂಚಿಕೆಗೆ ಪ್ರಯತ್ನಿಸುತ್ತದೆ.

ವಿಶ್ವವಿಖ್ಯಾತ ಅಭಿವೃದ್ಧಿ ಜನಕರು ಆಗಿರುವ **ಅಮರ್ತ್ಯ ಸೇನ್** ಅರ್ಥಶಾಸ್ತ್ರ, ಅಭಿವೃದ್ಧಿ ಅಧ್ಯಯನ, ಲಿಂಗ ಸಂಬಂಧಗಳು ಮುಂತಾದವುಗಳಿಗೆ ಜಾಗತಿಕ ಹಂತದಲ್ಲಿ ಹೊಸ ಹೊಸ

ಆಯಾಮದ ಪರಿಭಾಷೆಯನ್ನು ನೀಡಿದರು. ಅವುಗಳ ಗಡಿರೇಖೆಗಳನ್ನು ವಿಸ್ತರಿಸಿ ಜಾಗತಿಕ ಹಂತದಲ್ಲಿ ಅಭಿವೃದ್ಧಿಗೆ ಒತ್ತು ನೀಡದ ಶ್ರೇಯಸ್ಸು ಅಮರ್ತ್ಯ ಸೇನ್‌ರವರಿಗೆ ಸಲ್ಲಬೇಕು. ತಮ್ಮ ಸೂಕ್ಷ್ಮ ಅಧ್ಯಯನಗಳಿಂದ ಸರಕಾರವು ತಮ್ಮ ನಿರೂಪಣೆಯನ್ನು ಬದಲಾಯಿಸುವಂತೆ ಮಾಡಿರುವ ಇವರು ಜನರು ಆರ್ಥಿಕವಾಗಿ ಉತ್ತಮಗೊಳ್ಳಲು ಕಾರಣರಾಗಿದ್ದಾರೆ. ಬಂಗಾಳದ ಬರಗಾಲದಲ್ಲಿ ಸುಮಾರು ಮೂವತ್ತೈದು ಲಕ್ಷ ಜನರು ಹಸಿವಿನಿಂದ ಸತ್ತ ಸಂಗತಿ ಸೇನ್ ಮೆದುಳಲ್ಲಿ ಕೆಲಸ ಮಾಡುತ್ತಿತ್ತು. ಶ್ರೀಮತಿ ಇಂದಿರಾ ಗಾಂಧೀಜಿಯವರು ಪ್ರಧಾನ ಮಂತ್ರಿಯಾಗಿದ್ದ ಕಾಲದಲ್ಲಿ ಬರಗಾಲ ಅಪ್ಪಳಿಸಿದಾಗ "ಗರೀಭೀ ಹಟಾವೋ" ಕಾರ್ಯಕ್ರಮಗಳಿಗೆ ಸೇನ್ ಬೆನ್ನಾಗಿದ್ದು 'ಕೂಲಿಗಾಗಿ ಕಾಳು ಯೋಜನೆಯಿಂದ-ಅನ್ನಭಾಗ್ಯ' ಹೊಂದುವ ಸ್ಥಿತಿಗೆ ಕಾರಣರಾಗಿದ್ದರು.

ಸೇನ್ ಅಭಿಪ್ರಾಯದಂತೆ ಹಾಗೂ ಪ್ರತಿಪಾದಿಸಿದಂತೆ ಆಹಾರ, ಅರಿವೆ, ಅಕ್ಷರ, ಆರೋಗ್ಯ ಮತ್ತು ವಸತಿ ಸೌಕರ್ಯಗಳು ಪ್ರತಿಯೊಬ್ಬರಿಗೆ ಲಭ್ಯವಾದಾಗ ಅಭಿವೃದ್ಧಿ ಕಂಡು ಬರುತ್ತದೆ ಎಂದು ಇಡೀ ಸೇನ್ ಜಗತ್ತಿಗೆ ಸಾರಿದರು. ಸೇನ್, ಮೆಹಬುಲ್ ಹಕ್, ಗುನ್ನಾಡ್ ಮಿರ್ಡಾಲ್ ಮತ್ತು ಮಹಮದ್ ಯೂನಸ್ ಅವರುಗಳು ಹಸಿವಿಗೆ-ಅನ್ನಕ್ಕೆ ಬಹು ಪ್ರಾಮುಖ್ಯತೆ ನೀಡಿದರು.

ಇಂತಹ ಅಪರೂಪದ ಪ್ರಾಜ್ಞರಾದ ಸೇನ್‌ರವರಿಗೆ ನೊಬೆಲ್ ಪ್ರಶಸ್ತಿ ಬಂದದ್ದರಿಂದ ನೊಬೆಲ್‌ಗೆ ಘನತೆ ಬಂದಂತೆ ಕಾಣುತ್ತದೆ. ಅವರ 'Food Battles' ಎಂಬ ಉಪನ್ಯಾಸವೊಂದನ್ನು **'ಕೂಳಿನ ಕಾಳಗಗಳು'** ಎಂದು ಟಿ.ಆರ್. ಚಂದ್ರಶೇಖರ್ ಅವರು ಅನುವಾದ ಮಾಡಿದ ಲೇಖನ ೧೯೮೫ರ **'ಸಾಧನೆ' (೧೯೯೭)** (ಸಂಪುಟ೧೨, ಸಂಚಿಕೆ:೪) ಯಲ್ಲಿ ಪ್ರಕಟವಾಗಿದೆ.

ಕಲ್ಯಾಣ ಅರ್ಥಶಾಸ್ತ್ರಜ್ಞರ ದಂಡು ಬಹುದೊಡ್ಡದು. ಅವರುಗಳಲ್ಲಿ ಡಾ.ಆಲ್ಫ್ರೆಡ್ ಮಾರ್ಷಲ್, **ಎ.ಸಿ. ಪಿಗು, ರಾಬಿನ್‌ಸನ್, ಕಾರ್ಲ್‌ಮಾರ್ಕ್ಸ್, ಡಾ. ಬಿ.ಆರ್. ಅಂಬೇಡ್ಕರ್, ಮೋಹನ್‌ದಾಸ ಕರಮಚಂದ್ರ ಗಾಂಧಿ, ಗುನ್ನಾರ್ ಮಿರ್ಡಾಲ್ ಮತ್ತು ಅಮರ್ತ್ಯ ಸೇನ್** ಇವರೆಲ್ಲರೂ ಕಲ್ಯಾಣ ಆರ್ಥಿಕ ಚಿಂತಕರು. ೧೯೯೦ರಲ್ಲಿ ಪ್ರಸಿದ್ಧಿ ಪಡೆದ ಅರ್ಥವಿಜ್ಞಾನಿ ಸಹಪಾಠಿ ಸುಖ್‌ಮಯ್ ಚಕ್ರವರ್ತಿ ಅವರ ಆತ್ಮೀಯರ ಒತ್ತಡಕ್ಕೆ ಮಣಿದು ವಿಶ್ವನಾಥ ಪ್ರತಾಪ್‌ಸಿಂಗ್ ಅವರ ಸರಕಾರದಲ್ಲಿ ಅಭಿವೃದ್ಧಿ ಸಲಹೆಗಾರರಾಗಿ ಸೇವೆ ಸಲ್ಲಿಸಲು ಅಮರ್ತ್ಯಸೇನ್ ಅವರು ಒಪ್ಪಿಕೊಂಡಿದ್ದರು. ಅವರನ್ನು ವ್ಯಕ್ತಿಗತ ಮಟ್ಟಕ್ಕೆ ಸೀಮಿತಗೊಳಿಸುವುದು ಸರಿಯೆನಿಸುವುದಿಲ್ಲ. ಏಕೆಂದರೆ ಅವರು ರೂಪಿಸಿದ ಸಿದ್ಧಾಂತಗಳಿಗೆ, ಸಂಕಥನಗಳಿಗೆ ಭಾರತೀಯ ಮತ್ತು ಏಷ್ಯಾ ದೇಶಗಳ ಅಭಿವೃದ್ಧಿಯ ಕಲ್ಯಾಣದ ತಲ್ಲಣ ಅರಿತ ಸಂವೇದನಾಶೀಲಾ ತಜ್ಞರಾಗಿದ್ದರು. *ಸೇನ್ ತಮ್ಮ ಮಾತಿನಲ್ಲಿ ಅಂಬೇಡ್ಕರ್ ನನ್ನ ಅರ್ಥಶಾಸ್ತ್ರ ಗುರುವೆಂದು ಅಭಿಪ್ರಾಯಿಸಿದ್ದಾರೆ(ವಿವರಗಳಿಗೆ ನೋಡಿ: ಗವಿಸಿದ್ದಪ್ಪ. ಹೆಚ್. ಪಾಟೀಲ್- "ಸಮೃದ್ಧ ಬಲಿಷ್ಠ ಭಾರತ ದೇಶವಾಗಲು" ಭೀಮವಾದ ಮಾಸಿಕ ಪತ್ರಿಕೆ-ಏಪ್ರಿಲ್-೨೦೧೭).

ವರಮಾನ, ಉತ್ಪನ್ನ, ಬಂಡವಾಳ, ಉಳಿತಾಯಗಳನ್ನು ಆಧರಿಸಿದ 'ಅಭಿವೃದ್ಧಿ ಮಾದರಿ' ಗಳನ್ನು ಸಮೀಕರಣ ರೂಪದಲ್ಲಿ ಕಟ್ಟಲಾಯಿತು. ವರಮಾನವು ಅಭಿವೃದ್ಧಿಯ ಏಕಮೇವ

ಮಾಪನವಾಯಿತು. ಉಳಿತಾಯ ಹೂಡಿಕೆಗಳು ಅಭಿವೃದ್ಧಿಯ ಮೂಲಗಳಾದವು(ಟಿ.ಆರ್. ಚಂದ್ರಶೇಖರ್ ಅವರ ಅಭಿವೃದ್ಧಿ ಅಧ್ಯಯನದ ಪುಟ ಸಂಖ್ಯೆ : ೨೪ರ ಎರಡನೆಯ ಪ್ಯಾರದಲ್ಲಿ ಅಭಿವೃದ್ಧಿ ಮತ್ತು ಬೆಳವಣಿಗೆ ನಡುವಿನ ವ್ಯತ್ಯಾಸವನ್ನು ಗುರುತಿಸಿದ್ದಾರೆ). ವರಮಾನ–ಉತ್ಪನ್ನ–ಬಂಡವಾಳ–ಉಳಿತಾಯಗಳ ಪರಿಮಾಣಾತ್ಮಕ ಸರಳರೇಖಾ ಸ್ವರೂಪದ ಏರಿಕೆಯನ್ನು ಬೆಳವಣಿಗೆಯೆಂದೂ ಆ ಬೆಳವಣಿಗೆ ಸಹಿತ ಆರ್ಥಿಕತೆಯಲ್ಲಿ ಉಂಟಾಗುವ ರಾಚನಿಕ ಬದಲಾವಣೆಗಳನ್ನು ಒಳಗೊಂಡಿರುವ ಸಮಗ್ರ ಪ್ರಕ್ರಿಯೆಯನ್ನು ಅಭಿವೃದ್ಧಿಯೆಂದೂ ನಿರ್ವಚಿಸಲು ಪ್ರಯತ್ನಿಸಿದರು. ಆದರೆ ಅಭಿವೃದ್ಧಿಯ ನಿರ್ವಚನ ಅನುಸಂಧಾನ ಗಳನ್ನು ಗುತ್ತಿಗೆ ಹಿಡಿದಿದ್ದ ಅರ್ಥಶಾಸ್ತ್ರಜ್ಞರು ಅಭಿವೃದ್ಧಿಯನ್ನು ಬೆಳವಣಿಗೆಯ ನಿಷ್ಪನ್ನವಾಗಿ ಪರಿಗಣಿಸಿದರೇ ವಿನಃ ಅದನ್ನು ಒಂದು ಸಾಮಾಜಿಕ, ರಾಜಕೀಯ, ಆರ್ಥಿಕ, ಸಂಸ್ಕೃತಿಯ ಪ್ರಕ್ರಿಯೆ ಯಾಗಿ ನೋಡುವ ಕ್ರಮವನ್ನು ಬೆಳೆಸಲಿಲ್ಲ.

ಒಂದು ದೇಶದ ಒಟ್ಟು ವರಮಾನದ ಏರಿಕೆ ವರ್ಧನೆಯು ಇಲ್ಲದಿದ್ದಾಗಲೂ ಸಹ ಜನರ ಬದುಕು ಉತ್ತಮವಾಗಬಹುದು. ಏಕೆಂದರೆ ವರಮಾನವು ಮಾನವನ ಬದುಕನ್ನು ಉತ್ತಮ ಪಡಿಸಬಲ್ಲ ಅನೇಕ ಸಾಧನೆಗಳಲ್ಲಿ ಒಂದಾಗಿದೆ. ಅಭಿವೃದ್ಧಿಯನ್ನು ವರಮಾನದ ವರ್ಧನೆಯೆಂದು ನಿರ್ವಚಿಸಿದರೆ ಆಗ ವರಮಾನ ಕೇಂದ್ರಿತ ಅಭಿವೃದ್ಧಿ ಮೀಮಾಂಸೆ ಇತಿ–ಮಿತಿ ಮನದಟ್ಟಾಗುತ್ತದೆ.

**ಈ ದಿಸೆಯಲ್ಲಿ ನಾವು ಅನೇಕ ನಿದರ್ಶನಗಳನ್ನು ನೀಡಬಹುದು**

- ಪ್ರಜಾಪ್ರಭುತ್ವವನ್ನು ಜನತಂತ್ರವನ್ನು ಸ್ಥಾಪಿಸಿಕೊಳ್ಳಲು ರೂಢಿಸಿಕೊಳ್ಳಲು ದೇಶವು ವರಮಾನದ ಸೃಷ್ಟಿಯಿಂದ ಶ್ರೀಮಂತವಾಗಿರಬೇಕಿಲ್ಲ. ಬಡದೇಶವೂ ಸಹ ಪ್ರಜಾಪ್ರಭುತ್ವವನ್ನು ಅಳವಡಿಸಿ ಕೊಳ್ಳಬಹುದು.

- ಮಾನವ ಹಕ್ಕುಗಳಿಗೆ ಗೌರವ ಮನ್ನಣೆ ದೊರೆಯಬೇಕಾದರೆ ದೇಶವು ಆರ್ಥಿಕವಾಗಿ ಸಮೃದ್ಧಿ ಯಾಗಿರಬೇಕಿಲ್ಲ. ಬಡದೇಶಗಳು ಹಿಂದುಳಿದ ದೇಶಗಳು ಮಾನವ ಹಕ್ಕುಗಳಿಗೆ ಗೌರವ ಮನ್ನಣೆ ಬೇಕಾಗುತ್ತದೆ.

ಮಾನವ ಬದುಕಿನ ಅವಕಾಶಗಳ ವರ್ಧನೆಯೇ ಅಭಿವೃದ್ಧಿ ಎಂದಾದರೆ, ಆಗ ಅದು ಕೇವಲ ಆರ್ಥಿಕ ವಲಯದೊಳಗಿನ ವ್ಯವಹಾರವಾಗಿ ಉಳಿಯುವುದಿಲ್ಲ. ಅಭಿವೃದ್ಧಿಯು ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಮಾನವಿಕ ಮುಂತಾದ ಬಹುಮುಖಿ ಬಹುರೂಪಿ ವಲಯಕ್ಕೆ ಸೇರಿದ ಒಂದು ಪ್ರಕ್ರಿಯೆಯಾಗಿದೆ. ಅಕ್ಷರ, ಆರೋಗ್ಯ, ಆಹಾರ, ಸ್ವಾತಂತ್ರ್ಯ, ಸಮಾನತೆ, ಸ್ವಯಂಪೋಷಕತೆ, ಸಶಕ್ತತೆ ಮುಂತಾದವು ಕೇವಲ ಆರ್ಥಿಕ ಚೌಕಟ್ಟಿಗೆ ಸೇರಿದ ಸಂಗತಿಗಳೇನಲ್ಲ.

ಬರ, ಬಡತನ, ಹಸಿವು, ಅಭಿವೃದ್ಧಿ, ಲಿಂಗ ಸಂಬಂಧಗಳು ಮತ್ತು ಸಮಾನತೆ ಕುರಿತಂತೆ ಸೇನ್ ಅವರ ನಿಲುವು, ಅವರ ಅಧ್ಯಯನಗಳು ಹೊರಹಾಕುವ ತಥ್ಯಗಳು ನವ–ನವೋನತೆಯ ಅಂಶಗಳಾಗಿರುತ್ತವೆ. ಸಾರ್ವತ್ರಿಕವಾಗಿ ಒಪ್ಪಿಕೊಂಡು ಪ್ರತಿಪಾದಿಸಿರುವ ನಂಬಿಕೆಗಳನ್ನು ಸೇನ್ ಹುಸಿಗೊಳಿಸಿಬಿಡುತ್ತಾರೆ. ಜೊತೆಗೆ ಗಟ್ಟಿಯಾದ ವಾದವನ್ನು ಸಮರ್ಥವಾಗಿ ಮಂಡಿಸುತ್ತಾರೆ.

ಒಂದು ಸಮಾಜದಲ್ಲಿ ಆಹಾರ ಇರುವುದು ಬೇರೆ; ಆಹಾರ ಜನರಿಗೆ ದೊರಕಿಸುವುದು ಬೇರೆ, ಬರ ಅಥವಾ ಹಸಿವು ಆಹಾರ ದೊರಕಿಸುವ ಸ್ಥಿತಿಗೆ ಸಂಬಂಧಿಸಿದ್ದೇ ವಿನಃ ಆಹಾರವು ಇರುವುದರ/ಇಲ್ಲದಿರುವುದರ ಸ್ಥಿತಿಗೆ ಸಂಬಂಧಿಸಿಲ್ಲ. ಬರಗಾಲದಲ್ಲಿ ಜನರು ಹಸಿವಿನಿಂದ ಸಾಯುತ್ತಾರೆ ನಿಜ! ಆದರೆ ಆ ಸಾವುಗಳು ಆಹಾರ ಇಲ್ಲದಿರುವುದರಿಂದ ಉಂಟಾದವುಗಳಲ್ಲ. ಪ್ರತಿಯಾಗಿ ಅವು ಇರುವ ಆಹಾರ ಜನರಿಗೆ ದೊರೆಯದಿರುವುದರಿಂದ ಉಂಟಾದ ಸಾವುಗಳು; ಇರುವ ಆಹಾರ-ಲಭ್ಯವಿರುವ ಆಹಾರೋತ್ಪನ್ನ ಜನರಿಗೆ ಯಾಕೆ ದೊರೆಯುವುದಿಲ್ಲ? ಶ್ರೇಣೀಕರಣಗೊಂಡ ಸಮಾಜದಲ್ಲಿ ಕೆಳಸ್ತರದಲ್ಲಿರುವ ವರ್ಗಗಳ ಆಹಾರವನ್ನು ಬರ ಕ್ಷೀಣಗೊಳಿಸಿಬಿಡುತ್ತದೆ ಆದ್ದರಿಂದಲೇ ಬರಗಾಲದಲ್ಲಿ ಕೇವಲ ಕೆಳಸ್ತರದಲ್ಲಿರುವ ಕೆಳಜಾತಿ ವರ್ಗಗಳಿಗೆ ಸೇರಿದ ಜನರು, ಅಂದರೆ ಕೃಷಿ-ಕಾರ್ಮಿಕರು, ನಿರ್ಗತಿಕರು, ನಿಕೃಷ್ಟಕ್ಕೆ ಒಳಗಾದವರು, ವಂಚಿತರು ಮತ್ತು ಮಹಿಳೆಯರು ಮಾತ್ರ ಬಲಿಯಾಗುತ್ತಾರೆ ಅಂಥವರು ಶೇಕಡ ೩೦ರಷ್ಟು ಜನರಿದ್ದಾರೆ.

ಅರ್ಥಿಕ ಸ್ಥಿತಿವಂತರು ಸಮುದ್ರದಲ್ಲಿರುವ ತಿಮಿಂಗಿಲಗಳಿದ್ದಂತೆ. ಅವು ಸಮುದ್ರದಲ್ಲಿ ಸಣ್ಣ ಮೀನುಗಳನ್ನು ತಿನ್ನುವಂತೆ ಬಲಿಷ್ಠರು ಬರ ಸೃಷ್ಟಿಸುವ ಸಾವು-ನೋವು ದುಃಖಗಳಿಂದ ಮುಕ್ತರಾಗುತ್ತಾರೆ. ಬರಗಾಲದಲ್ಲಿ ಪಟ್ಟಭದ್ರ ಶ್ರೀಮಂತ ವರ್ಗಗಳ ಜನರ ಆರ್ಥಿಕ ಸ್ಥಿತಿಗತಿ ಉತ್ತಮವಾಗಿರುವುದು; ಬರಗಾಲದಲ್ಲಿ ಬಡವರೇ ಏಕೆ ಸಾಯುತ್ತಾರೆ? ಅವರೇ ಏಕೆ ಸಾಯಬೇಕು? ಇವು ಅಮರ್ತ್ಯ ಸೇನ್ ಅವರ ಪ್ರಶ್ನೆಗಳು. ಅವರ ಪ್ರಕಾರ ಬರಗಾಲದಲ್ಲಿ ಉಂಟಾಗುವ ಸಾವು-ನೋವು, ಗೋಳು-ಹಿಂಸೆ ಮುಂತಾದವು ಆಹಾರ ಇಲ್ಲದಿರುವುದರಿಂದ ಉಂಟಾದ ಸಮಸ್ಯೆಗಳೇನಲ್ಲ! ಆಹಾರವನ್ನು ಗಳಿಸಿಕೊಳ್ಳುವ, ದೊರಕಿಸಿಕೊಳ್ಳುವ ಸಾಮರ್ಥ್ಯ ಕುಂಠಿತಗೊಂಡಿದ್ದರಿಂದ ಉಂಟಾದ ಪರಿಣಾಮಗಳು ಎಂದು ಕರೆದಿದ್ದಾರೆ.

ಅಮರ್ತ್ಸ ಸೇನ್‌ರವರ ಮೂಲ ವಿಚಾರವೇನೆಂದರೆ "ಮನುಷ್ಯನಿಗಾಗಿ ಅಭಿವೃದ್ಧಿಯೇ ವಿನಃ ಅಭಿವೃದ್ಧಿಗಾಗಿ ಮನಷ್ಯನಲ್ಲಾ" ಅಭಿವೃದ್ಧಿಯು ಮಾನವನ ಬದುಕಿಗೆ ಸಂಬಂಧಿಸಿದ ಒಂದು ಪ್ರಕ್ರಿಯೆ; 'ಮಾನವನ ಬದುಕು ಉತ್ತಮಗೊಳ್ಳುವ ಪ್ರಕ್ರಿಯೆಯೇ ಅಭಿವೃದ್ಧಿ' ಎಂದು ಸಾರಿದರು.

ಸೇನ್‌ರ ಪ್ರಕಾರ ಅಭಿವೃದ್ಧಿ ವ್ಯಕ್ತಿಗತವಾದದ್ದು ಹೌದು ಮತ್ತು ವಸ್ತುವಾದಿ ಹೌದು. ಆದರೆ ನವ ಅಭಿಜಾತ ಅಭಿವೃದ್ಧಿ ಸಂಕಥನವು ಮಾನವನನ್ನು ಕೇವಲ ವಸ್ತುವಾದಿ ನೆಲೆಯಲ್ಲಿ, ಪದಾರ್ಥವಾದ ನೆಲೆಯಲ್ಲಿ ಮಾತ್ರ ಪರಿಭಾವಿಸಿತು. ಈ ಸಂಕಥನದಲ್ಲಿ ವ್ಯಕ್ತಿಯಾಗಿ, ಒಂದು ಜೀವಿಯಾಗಿ ಯಾವುದೇ ಸ್ಥಾನವಿಲ್ಲದೆ ಅಭಿವೃದ್ಧಿಯ ವ್ಯಕ್ತಿವಾದಿ ಹಾಗೂ ವಸ್ತುವಾದಿ ನೆಲೆಗಳು ಒಂದಾಗುವ ಒಂದು ಪ್ರಕ್ರಿಯೆಯನ್ನು ಸೇನ್ ಮಂಡಿಸಿದರು.

ಸೇನ್ ಅಭಿವೃದ್ಧಿ ಮೀಮಾಂಸೆ ನೆಲೆಯಲ್ಲಿ ಧಾರಣ ಮತ್ತು ಕ್ರಿಯಾಶಕ್ತಿ ನೆಲೆಯಲ್ಲಿ ಬದುಕಿನ ಅಂತಸ್ಥಿತಿ-ಅಂತರ್ಗತ ಗುಣಗಳನ್ನು ನೆಲೆಯಾಗಿ ಹೊಂದಿವೆ. ಜನರ ಬದುಕು, ಅವರು ತೊಡಗಿರುವ ಕ್ರಿಯೆಗಳು, ಅವರ ಆಯಸ್ಸು, ಆರೋಗ್ಯ, ಅಕ್ಷರ ಜ್ಞಾನ, ಸಹಭಾಗಿತ್ವ, ಸುಸ್ಥಿರತೆ ಸ್ವಯಂ

ಪೋಷಕತೆ ಮುಂತಾದವು ಮಾನವನ ಬದುಕಿನ ಅಂತಸ್ಥ ಗುಣಗಳಾಗಿವೆ. ಮಾನವನ ಬದುಕಿನ ಅಂತಸ್ಥಿತಿಯ ಗುಣಗಳನ್ನು ಆಧಾರವಾಗಿ ಹೊಂದಿರುವ ಸೇನ್ ಅಭಿವೃದ್ಧಿ ಮೀಮಾಂಸೆಯನ್ನು ಮಾನವಮುಖಿ ಅಭಿವೃದ್ಧಿ ಮೀಮಾಂಸೆ ಎಂದು ಕರೆಯಬಹುದು.

ಸೇನ್ ಅವರ ಪ್ರಕಾರ ಒಬ್ಬ ವ್ಯಕ್ತಿಯ ಬದುಕಿನ ಗುಣಮಟ್ಟ ಮೌಲ್ಯಮಾಪನವೆಂದರೆ ಅವನು-ಅವಳು ತೊಡಗಿಸಿಕೊಂಡಿರುವ, ಆಯ್ಕೆ ಮಾಡಿಕೊಂಡಿರುವ ಕ್ರಿಯೆಗಳ ಅಥವಾ ಕ್ರಿಯಾ ಶೀಲತೆಯ ಮೌಲ್ಯಮಾಪನವೇ ಆಗಿದೆ. ಆರೋಗ್ಯವಂತಳಾಗಿರುವುದು, ದೃಢಕಾಯರಾಗಿರುವುದು, ಅಸ್ವತೆಯಿಂದ ಮುಕ್ತರಾಗಿರುವುದು, ಅಕ್ಷರಜ್ಞಾನ ಹೊಂದುವುದು ಮುಂತಾದವು ಪ್ರಾಥಮಿಕವೆನ್ನ ಬಹುದಾದ ಕ್ರಿಯೆಗಳು ಸುಖ-ಸಂತೋಷದಿಂದಿರುವುದು, ಸಂತೃಪ್ತಿಯಿಂದ ಬದುಕುವುದು ಸ್ವಾಭಿಮಾನ ದಿಂದ ಬದುಕುವುದು, ಸಾಮುದಾಯಿಕ ಬದುಕಿನಲ್ಲಿ ಸಹಭಾಗಿಯಾಗುವುದು ಮುಂತಾದ ಕ್ರಿಯೆಗಳನ್ನು ಸಾಧಿಸಿಕೊಳ್ಳಲು ಇರುವ ಸ್ವಾತಂತ್ರ್ಯ ಹಾಗೂ ಸಾಮರ್ಥ್ಯವನ್ನು ಸೇನ್ 'ಧಾರಣಶಕ್ತಿ' ಎಂದು ವ್ಯಕ್ತಪಡಿಸಿದ್ದಾರೆ.



## ೨.೩. ವರಮಾನ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿ

ಸಾಂಪ್ರದಾಯಕ ವರಮಾನ ಕೇಂದ್ರಿತ ಮೌಲ್ಯ ನಿರಪೇಕ್ಷ, ಲಿಂಗ ನೀರಪೇಕ್ಷ ಅಭಿವೃದ್ಧಿ ವಿಚಾರ ಪ್ರಣಾಳಿಕೆಯನ್ನು 'ವರಮಾನಮುಖಿ ಅಭಿವೃದ್ಧಿ' ಎಂದು ಕರೆಯಬಹುದು. ಈ ಬಗೆಯ ಅಭಿವೃದ್ಧಿಗೆ ವರಮಾನ-ಉತ್ಪನ್ನ ಬಂಡವಾಳಗಳು ಅತ್ಯಗತ್ಯ. ಆದರೆ ಸೇನ್‌ರವರು ರೂಪಿಸಿರುವ ಮಾನವಮುಖಿ ಅಭಿವೃದ್ಧಿಯು ಅಕ್ಷರ-ಆರೋಗ್ಯ-ಆಹಾರ ಕೇಂದ್ರಿತವು, ಮೌಲ್ಯ ವಿವೇಚನಶೀಲವೂ, ಲಿಂಗ ವಿಶಿಷ್ಟವು ಆದ ಪ್ರಣಾಳಿಕೆಯಾಗಿದೆ. ಶಿಕ್ಷಣ, ವೈದ್ಯಕೀಯ ಸೇವೆ, ಆಹಾರ ಕುಡಿಯುವ ನೀರು, ವಸತಿ, ನೈರ್ಮಲ್ಯ ಮುಂತಾದ ಸೌಲಭ್ಯಗಳನ್ನು ಕಲ್ಪಿಸಿದಾಗ ಬಡಜನರ ಸ್ಥಿತಿಗತಿಗಳು ಸುಧಾರಿಸುತ್ತವೆ. ಆಗ ಅವರ ಉತ್ಪಾದನೆ ಮತ್ತು ವರಮಾನ ಹೆಚ್ಚುತ್ತವೆ. ಅಂದರೆ ಮಾನವ ಅಭಿವೃದ್ಧಿಯ ಮೂಲಕ ವಿದ್ಯಾವಂತ ಮತ್ತು ಆರೋಗ್ಯವಂತ ಜನರನ್ನು ಸೃಷ್ಟಿಸುವುದು ಸಾಮಾಜಿಕ ಸೂಚಿಗಳ ಉದ್ದೇಶವಾಗಿರುತ್ತದೆ. ಸಾಮಾಜಿಕ ಸೂಚಕಗಳು ಹೀಗೆ ವಿವಿಧ ರಾಷ್ಟ್ರಗಳು ತಮ್ಮ ರಾಷ್ಟ್ರೀಯ ಆದಾಯವನ್ನು ವಿವಿಧ ಬಳಕೆಗಳ ನಡುವೆ ಹಂಚಿರುತ್ತದೆ ಎಂಬುದನ್ನು ತಿಳಿಯಪಡಿಸುತ್ತದೆ.

**ಪ್ರೊ. ಹಿಕ್ಸ್** ಮತ್ತು **ಪ್ರೀಟನ್** ಅವರು ಆರು ಸಾಮಾಜಿಕ ಸೂಚಕಗಳನ್ನು ಮೂಲಭೂತ ಅವಶ್ಯಕತೆಗಳು ಎಂದು ಪರಿಗಣಿಸಿದ್ದಾರೆ. ಆರೋಗ್ಯ, ಶಿಕ್ಷಣ, ಆಹಾರ, ನೀರು ಪೂರೈಕೆ, ನೈರ್ಮಲ್ಯ ಮತ್ತು ವಸತಿ ಇವು ಮೂಲಭೂತ ಅವಶ್ಯಕತೆಗಳು. ಸಾಮಾಜಿಕ ಸೂಚಕವನ್ನು ಮಾಪನ ಮಾಡಲು ಹಲವಾರು ಸೂಚಕಗಳನ್ನು ಪರಿಗಣಿಸಲು ಪ್ರಯತ್ನಿಸಿದ್ದಾರೆ.

### ಮಾನವ ಅಭಿವೃದ್ಧಿ

ಮಾನವ ಅಭಿವೃದ್ಧಿಯನ್ನು ಮಾನವೀಯ ಅಭಿವೃದ್ಧಿಯೆಂದು ತಪ್ಪಾಗಿ ಅರ್ಥ ಮಾಡಿಕೊಳ್ಳುವ ಸಾಧ್ಯತೆಯಿದೆ. ಮಾನವ ಅಭಿವೃದ್ಧಿ, ಮಾನವನ ಬಡತನ ಮತ್ತು ಮಾನವ ಹಕ್ಕುಗಳು ಎಂಬಲ್ಲಿ

ಮಾನವ ಎಂಬುದು ಮನುಷ್ಯರು ಎಂಬ ಕಾರಣಕ್ಕೆ ಅವರಿಗೆ ಸಮೃದ್ಧ ಬದುಕು ಸಾಧ್ಯವಾಗಬೇಕು. ಮನುಷ್ಯರು ಎಂಬ ಕಾರಣಕ್ಕೆ ಬಡತನದಿಂದ ಮುಕ್ತರಾಗಿರಬೇಕು ಮತ್ತು ಮನುಷ್ಯರು ಎಂಬ ಕಾರಣಕ್ಕೆ ಅವರಿಗೆ ಕೆಲವು ಹಕ್ಕುಗಳಿರುತ್ತವೆ ಎಂಬುದನ್ನು ಸೂಚಿಸುತ್ತದೆ.

ಮಾನವ ಅಭಿವೃದ್ಧಿ ಮಾನವೀಯತೆಗೆ ಸಂಬಂಧಿಸಿದಲ್ಲ. ಅಭಿವೃದ್ಧಿಗೆ ಮಾನವೀಯ ಮುಖವಿರುತ್ತದೆ. ಆದರೆ ಮಾನವೀಯತೆ ಮಾನವ ಅಭಿವೃದ್ಧಿಯಲ್ಲ; ಮನುಷ್ಯರು ಎಂಬ ಕಾರಣಕ್ಕೆ ಅವರು ಹಸಿವಿನಿಂದ ಸ್ವಾತಂತ್ರ್ಯವನ್ನು ಪಡೆಯುವಂತಾಗಬೇಕು. ಎಲ್ಲರಿಗೂ ಸಾಮಾನ್ಯವಾದ ಕೆಲವು ಸಂಗತಿಗಳಿರುತ್ತವೆ. ಅಭಿವೃದ್ಧಿಯನ್ನು ಕುರಿತಂತೆ ಅಮರ್ತ್ಯ ಸೇನ್ ಜನರನ್ನು ಮೂಲಧಾತುವನ್ನಾಗಿ ಮಾಡಿಕೊಂಡು ಅಭಿವೃದ್ಧಿಯನ್ನು ನಿರ್ಧರಿಸಬೇಕೆಂದು ಪ್ರತಿಪಾದಿಸಿದ್ದಾರೆ. ಸಂಪ್ರಾದಾಯಿಕ ಅಭಿವೃದ್ಧಿ ಸಿದ್ಧಾಂತಗಳು ವರಮಾನ ಕೇಂದ್ರಿತವಾಗಿದೆ ಎಂದು ಸೇನ್ ಮತ್ತು ಮೆಹಬೂಬ್ ಉಲ್ ಹಕ್ ಪ್ರತಿಪಾದಿಸಿರುತ್ತಾರೆ. ಅಭಿವೃದ್ಧಿ ಸಿದ್ಧಾಂತವು ಜನರನ್ನು ಕೇಂದ್ರವನ್ನಾಗಿ ಮಾಡಿಕೊಂಡಿರುವ ಸಿದ್ಧಾಂತವಾಗಿದೆ.

ಯು.ಎನ್.ಡಿ.ಪಿ.ಯು ೧೯೯೦ರಲ್ಲಿ ಪ್ರಕಟಿಸಿದ ಮೊದಲ ಮಾನವ ಅಭಿವೃದ್ಧಿ ವರದಿಯಲ್ಲಿ ಮಾನವ ಅಭಿವೃದ್ಧಿಯ ಬಗ್ಗೆ ಮೆಹಬೂಬ್ ಉಲ್ ಹಕ್ ಹೀಗೆ ಬರೆಯುತ್ತಾರೆ. "ರಾಷ್ಟ್ರವೊಂದರ ನಿಜವಾದ ಸಂಪತ್ತು ಅಲ್ಲಿನ ಜನರು ಆರೋಗ್ಯವಂತರಾಗಿ ದೀರ್ಘಕಾಲ ಬದುಕಲು ಮತ್ತು ಬದುಕನ್ನು ಸೃಜನಶೀಲವಾಗಿ ಸಾಗಿಸಲು ಸಾಧ್ಯವಾಗುವಂತೆ ಮಾಡುವುದು ಅಭಿವೃದ್ಧಿಯ ಮೂಲ ಉದ್ದೇಶವಾಗಿದೆ." ಇದು ತುಂಬಾ ಸರಳವಾದ ಸಂಗತಿಯಾಗಿ ಕಾಣಬಹುದು. ಆದರೆ ಸರಕು ಸಾಮಗ್ರಿಗಳನ್ನು ಮತ್ತು ಹಣಕಾಸನ್ನು ಗುಡ್ಡೆ ಹಾಕಿಕೊಳ್ಳುವ ಭರದಲ್ಲಿ ಮೇಲಿನ ಸಂಗತಿಗಳನ್ನು ಸಾಮಾನ್ಯವಾಗಿ ಮರೆತುಬಿಡುವ ಸಾಧ್ಯತೆಯಿದೆ(ಮೆಹಬೂಬ್ ಉಲ್ ಹಕ್ ೧೯೯೦)

**ಅರಿಸ್ಟಾಟಲ್**ನ ಪ್ರಕಾರ– "ಒಂದು ಸಮಾಜ ಎಷ್ಟರಮಟ್ಟಿಗೆ ಅದರ್ಶಪ್ರಾಯವಾಗಿದೆ ಎಂಬುದನ್ನು ನಿರ್ಧರಿಸುವ ಮಾನದಂಡವೆಂದರೆ ಅದು ಎಷ್ಟರಮಟ್ಟಿಗೆ ಮಾನವರ ಒಳಿತನ್ನು ಸಾಧಿಸಿದೆ ಎಂಬುದಾಗಿದೆ." ಅವನ ಪ್ರತಿಪಾದನೆಯಂತೆ ಜನರು ಜೀವನದಲ್ಲಿ ಸಾಧಿಸಿಕೊಳ್ಳ ಬೇಕಾಗಿರುವುದು ಸಂಪತ್ತಿನ ಸಂಗ್ರಹದಲ್ಲಿ; ಏಕೆಂದರೆ ಅದು ಉತ್ತಮ ಬದುಕನ್ನು ಸಾಧಿಸಿಕೊಳ್ಳಲು ಇರುವ ಒಂದು ಸಾಧನ ಇಮ್ಯಾನ್ಯುಯಲ್ ಕಾಂಟ್ ಈ ಬಗ್ಗೆ ಬರೆಯುತ್ತ ಜನರನ್ನು ಸದಾಕಾಲ ಅಂತಿಮ ಗುರಿಯೆಂದು ತಿಳಿಯಬೇಕೇ ವಿನಃ ಎಂದೆಂದೂ ಸಾಧನವಾಗಿಯಲ್ಲ ಎಂದು ಹೇಳುತ್ತಾನೆ.

ಯು.ಎನ್.ಡಿ.ಪಿ.ಯು ಪ್ರಕಟಿಸುತ್ತಿರುವ ಮಾನವ ಅಭಿವೃದ್ಧಿ ವರದಿಗಳು ಮತ್ತು ೨೦೧೦ರ ಮಾನವ ಅಭಿವೃದ್ಧಿ ಇಪ್ಪತ್ತನೆಯ ವಾರ್ಷಿಕೋತ್ಸವದ ಸಂಧರ್ಬದಲ್ಲಿ ೨೦೧೦ರ ಮಾನವ ಅಭಿವೃದ್ಧಿ ವರದಿಯಲ್ಲಿ ಮಾನವ ಅಭಿವೃದ್ಧಿಯನ್ನು ಹೀಗೆ ನಿರ್ವಚಿಸಲಾಗಿದೆ. ದೀರ್ಘವಾದ ಆರೋಗ್ಯಕರವಾದ ಮತ್ತು ಸೃಜನಶೀಲವಾದ ಬದುಕನ್ನು ಸಾಧಿಸಲು, ಜನರು ಯಾವುದು ಮೌಲ್ಯಯುತವಾದುದೆಂದು ಪರಿಗಣಿಸುತ್ತಾರೋ ಅವುಗಳನ್ನು ಸಾಧಿಸಿಕೊಳ್ಳಲು ಹಾಗೂ ನಾವೆಲ್ಲರೂ ಪಾಲುದಾರರಾಗಿರುವ

ನಮ್ಮ ವಿಶ್ವದಲ್ಲಿ ಸಮಾನತೆ ಮತ್ತು ಸುಸ್ಥಿರತೆ ಆಧಾರದಲ್ಲಿ ಅಭಿವೃದ್ಧಿಯನ್ನು ರೂಪಿಸಲು ಅಗತ್ಯವಾದ ಜನರ ಸ್ವಾತಂತ್ರ್ಯವೇ ಮಾನವ ಅಭಿವೃದ್ಧಿ. ಜನರು ವೈಯಕ್ತಿಕವಾಗಿ ಮತ್ತು ಸಮಷ್ಟಿಯಾಗಿ ಅಭಿವೃದ್ಧಿ ಫಲಾನುಭವಿಗಳೂ ಹೌದು ಮತ್ತು ಅದರ ಚಾಲಕ ಶಕ್ತಿಯು ಹೌದು(ಯುಎನ್‌ಡಿಪಿ ೨೦೧೦).

ಹಕ್ ಹೇಳುವಂತೆ ಜನರು ಅಭಿವೃದ್ಧಿಯಲ್ಲಿ ಅತ್ಯಂತ ಕೊನೆಯಲ್ಲಿ ಪರಿಗಣಿಸುವ ಗುರಿಯಲ್ಲ. ಅವರ ಅಭಿವೃದ್ಧಿಯ ವಸ್ತುವು ಹೌದು ಮತ್ತು ಅವರು ಅದನ್ನು ಅನುಭವಿಸಬೇಕಾದ ವ್ಯಕ್ತಿಗಳೂ ಆಗಿರುತ್ತಾರೆ. ಅವರು ಅಮೂರ್ತವಾದ ಆರ್ಥಿಕ ಸೂಚನೆಗಳು ಮಾತ್ರವಲ್ಲ ಅವರ ಅಭಿವೃದ್ಧಿಯಿಂದ ವಂಚಿತರಾದ ಬಲಿಪಶುಗಳಲ್ಲಿ ಅವರು ಅಭಿವೃದ್ಧಿ ಅರಸರು ಈ ಪ್ರಣಾಳಿಕೆಯು ನಾಲ್ಕು ಮೌಲ್ಯಗಳ ಮೇಲೆ ನಿಂತಿದೆ.

೧. ಸಾಮಾಜಿಕ ನ್ಯಾಯ

೨. ಸುಸ್ಥಿರ ಗತಿ

೩. ಕಾರ್ಯಕ್ಷಮತೆ

೪. ಸ್ವಶಕ್ತೀಕರಣ ಮಾನವ ಅಭಿವೃದ್ಧಿ ವಿಕಾಸ ಹೊಂದುತ್ತಾ ನಡೆದಿದೆ.

ಅದೊಂದು ಗತಿಶೀಲವಾದ ಪ್ರಣಾಳಿಕೆಯಾಗಿದೆ. ಆರಂಭದಲ್ಲಿ ಅದನ್ನು ಆಯ್ಕೆಗಳ ವಿಸ್ತರಣೆಯಾಗಿ ಪರಿಭಾವಿಸಿಕೊಳ್ಳಲಾಗಿತ್ತು ಇದರ ಜೊತೆಗೆ ಸೇನ್ ಹಕ್ಕುದಾರಿಕೆ ಚೌಕಟ್ಟಿನಲ್ಲಿಯೂ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳಲು ಪ್ರಯತ್ನಿಸಿದರು.

**೨.೩.೧. ಮಾನವ ಅಭಿವೃದ್ಧಿ ಸೂಚ್ಯಂಕ (ಎಚ್.ಡಿ.ಐ)**

ಮಾನವ ಅಭಿವೃದ್ಧಿಯನ್ನು ಪರಿಮಾಣಾತ್ಮಕವಾಗಿ ಮಾಪನ ಮಾಡಲು ಯು.ಎನ್.ಡಿ.ಯು ರೂಪಿಸಿರುವ ಸೂತ್ರವೇ ಮಾನವ ಅಭಿವೃದ್ಧಿ ಸೂಚ್ಯಂಕ (ಎಚ್‌ಡಿಐ). ಇದೊಂದು ಸಂಯುಕ್ತ ಸೂಚ್ಯಂಕವಾಗಿದೆ. ಅದು ಮೂರು ಸೂಚಿಗಳನ್ನು ಒಳಗೊಂಡಿದೆ.

೧. ಜನನ ಕಾಲದಿಂದ ಎಷ್ಟು ವರ್ಷ ಬದುಕುತ್ತಾರೆ ಎಂಬುದರ ಆಧಾರದ ಮೇಲೆ ಲೆಕ್ಕ ಹಾಕುವ ಜನರ ಜೀವನಾಯುಷ್ಯ.

೨. ಜನರ ಸಾಕ್ಷರತಾ ಪ್ರಮಾಣ ಹಾಗೂ ದಾಖಲಾತಿ ಪ್ರಮಾಣಗಳನ್ನು ಒಳಗೊಂಡ ಶೈಕ್ಷಣಿಕ ಸಾಧನೆಯ ಸೂಚಿ; ಇಲ್ಲಿ ಸಾಕ್ಷರತಾ ಪ್ರಮಾಣ ೨/೩ ರಷ್ಟು ತೂಕವನ್ನು ಮತ್ತು ದಾಖಲಾತಿಗೆ ೧/೨ ರಷ್ಟು ತೂಕ ನೀಡಲಾಗಿರುತ್ತದೆ.

೩. ಡಾಲರ್‌ನ ಕೊಳ್ಳುವ ಶಕ್ತಿಯ ಆಧಾರದ ಮೇಲೆ ಲೆಕ್ಕ ಹಾಕುವ ಜನರ ತಲಾ ಜಿ.ಡಿ.ಪಿ ಅಥವಾ ತಲಾ ವರಮಾನದ ಈ ಮೂರು ಸೂಚಿಗಳ ಸರಾಸರಿ ಮೌಲ್ಯವೇ ಮಾನವ ಅಭಿವೃದ್ಧಿಯ ಸೂಚ್ಯಂಕ. HDI= ಪ್ರತಿಯೊಂದು ಸೂಚಿಯನ್ನು ಲೆಕ್ಕ ಹಾಕಲು ಕೆಳಗಿನ ಸೂತ್ರವನ್ನು ಬಳಸಬಹುದಾಗಿದೆ.

ಹೆಚ್.ಡಿ.ಐ=ಸೂಚಿಯ ವಾಸ್ತವ ಮೌಲ್ಯ- ಸೂಚಿಯ ಕನಿಷ್ಠ ಮೌಲ್ಯ / ಸೂಚಿಯ ಗರಿಷ್ಠ ಮೌಲ್ಯ- ಸೂಚಿಯ ಕನಿಷ್ಠ ಮೌಲ್ಯ.

**ಮಾನವ ಅಭಿವೃದ್ಧಿ - ವರಮಾನ ಅಭಿವೃದ್ಧಿಗಳ ನಡುವೆ ವ್ಯತ್ಯಾಸ**

ಮೆಹಬೂಬ್ ಉಲ್ ಹಕ್ ಸ್ಪಷ್ಟವಾಗಿ ವಾದಿಸಿರುವಂತೆ ಮಾನವ ಅಭಿವೃದ್ಧಿ ಪ್ರಣಾಳಿಕೆಯು ಹೊಸ ಸಂಶೋಧನೆಯಲ್ಲಿ ಅನೇಕ ಚಿಂತಕರು ಬಹಳ ಹಿಂದಿನ ಕಾಲದಿಂದಲು ಇದನ್ನು ಗುರುತಿಸಿಕೊಂಡು ಬಂದಿದ್ದಾರೆ.

೧. ಮೊದಲನೆಯ ಮಾದರಿಯಲ್ಲಿ ಅಭಿವೃದ್ಧಿಯು ಏಕರೂಪಿ-ಏಕಮುಖಿ ಪ್ರಕ್ರಿಯೆಯಾಗಿದೆ. ಎರಡನೆಯದರಲ್ಲಿ ಅದನ್ನು ಬಹುರೂಪಿ ಪ್ರಕ್ರಿಯೆಯಾಗಿ ಪರಿಭಾವಿಸಕೊಳ್ಳಲಾಗಿದೆ.

೨. ವರಮಾನ ವರ್ಧನಾ ಸಿದ್ಧಾಂತವು ಲಿಂಗ ನಿರಪೇಕ್ಷವಾದುದಾಗಿದೆ. ಅದು ಲಿಂಗ ಸಂಬಂಧಿಗಳಿಗೆ ಹತ್ತಿರವಾದ ಸಿದ್ಧಾಂತವಾಗಿದೆ. ಮಾನವ ಅಭಿವೃದ್ಧಿಯು ಲಿಂಗಸಂಬಂಧವನ್ನು ಒಳಗೊಂಡ ವಿಚಾರ ಪ್ರಣಾಳಿಕೆಯಾಗಿದೆ.

೩. ವರ್ಧನೆಯಾದ ವರಮಾನದ ಮೊತ್ತವೇ ಜನರ ಅಭಿವೃದ್ಧಿ ವರಮಾನದ ಜೊತೆಗೆ ಶಿಕ್ಷಣ, ಆರೋಗ್ಯ, ಆಹಾರ ಭದ್ರತೆ ಮುಂತಾದವುಗಳು ಒಳಗೊಂಡ ಸಂಯುಕ್ತ ಪ್ರಕ್ರಿಯೆಯಾಗಿದೆ.

೪. ವರಮಾನವು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಒಂದು ಚಾಲಕ ಶಕ್ತಿಯಾಗಿದೆ. ಅದೇ ಅಭಿವೃದ್ಧಿಯಲ್ಲ ಮಾನವ ಅಭಿವೃದ್ಧಿಯು ವರಮಾನದ ಜೊತೆಗೆ ಅನೇಕ ಸಾಮಾಜಿಕ-ರಾಜಕೀಯ ಸಂಗತಿಗಳನ್ನು ಒಳಗೊಂಡಿದೆ.

೫. ವರಮಾನ ವರ್ಧನೆ ಸಿದ್ಧಾಂತವು ಜನರ ಬದುಕನ್ನು ಉತ್ತಮಗೊಳಿಸುವ ಪ್ರಕ್ರಿಯೆಗೆ ಅವಕಾಶಗಳನ್ನು ವರ್ಧಿಸುವ ಸಂಗತಿಯನ್ನು ಒಳಗೊಂಡಿದೆ. ಆದರೆ ಮಾನವ ಅಭಿವೃದ್ಧಿಯು ಜನರ ವರಮಾನ ವರ್ಧನೆಯ ಜೊತೆಗೆ ಧಾರಣಾ ಸಾಮರ್ಥ್ಯ ವರ್ಧನೆಯನ್ನು ಒಳಗೊಂಡಿದೆ.

೬. ವರಮಾನ ವರ್ಧನೆಯ ಅಭಿವೃದ್ಧಿಯಲ್ಲಿ ಜನರು ಅಭಿವೃದ್ಧಿಯ ಸಾಧನ ಮಾತ್ರ; ಇಲ್ಲಿ ಕೇವಲ ಫಲಾನುಭಾವಿಗಳಾಗಿ ಮಾತ್ರ ಪರಿಗಣಿಸಲಾಗುತ್ತದೆ. ಅಂದರೆ ಮಾನವ ಅಭಿವೃದ್ಧಿ ಮಾದರಿಯಲ್ಲಿ ಜನರ ಅಭಿವೃದ್ಧಿ ಮಾದರಿಯಲ್ಲಿ ಜನರ ಅಭಿವೃದ್ಧಿಯ ಸಾಧನವೂ ಹೌದು ಮತ್ತು ಅದರ ಗುರಿಯೂ ಹೌದು(ಡಾ. ಟಿ.ಆರ್. ಚಂದ್ರಶೇಖರ್, ೨೦೧೧, 'ಹಕ್ಕು-ಹಂಗು' ಪು. ೨೩-೨೪).

**ಕೋಷ್ಟಕ ೨.೧. ಮಾನವ ಅಭಿವೃದ್ಧಿ ಮತ್ತು ಆರ್ಥಿಕ(ವರಮಾನ) ಅಭಿವೃದ್ಧಿ ನಡುವಿನ ಭಿನ್ನತೆ**

| ಕ್ರ.ಸಂ. | ಅಭಿವೃದ್ಧಿ ಸೂಚಿಗಳು | ಕೇರಳ | ಗೋವಾ | ಮಣಿಪುರ | ಪಂಜಾಬ್ | ಹರಿಯಾಣ |
|---|---|---|---|---|---|---|
| ೧. | ಜನನ ದರ(ಪ್ರತಿ ಸಾವಿರ ಜನನಗಳಿಗೆ)೨೦೧೧ | ೧೪.೦೮ | ೧೨.೭ | ೧೪.೪ | ೧೫.೨ | ೨೦.೯ |
| ೨. | ಮರಣ ದರ(ಪ್ರತಿ ಸಾವಿರ ಜನನಗಳಿಗೆ)೨೦೧೧ | ೬.೬ | ೬.೪ | ೪.೦ | ೬.೨ | ೬.೧ |
| ೩. | ಶಿಶು ಮರಣ ದರ(ಪ್ರತಿ ಸಾವಿರ ಜನನಗಳಿಗೆ)೨೦೧೬ | ೧೨ | ೯ | ೯ | ೨೩ | ೩೬ |
| ೪. | ಲಿಂಗನುಪಾತ(ಪ್ರತಿ ಸಾವಿರ ಪುರುಷರಿಗೆ ಎದುರಾಗಿ ಮಹಿಳೆಯರ ಸಂಖ್ಯೆ)೨೦೧೧ | ೧೦೮೪ | ೯೬೮ | ೯೮೭ | ೮೯೩ | ೮೭೭ |
| ೫. | ಜನಸಂಖ್ಯೆಯ ದಶಕವಾರು ಬೆಳವಣಿಗೆ ದರ(೨೦೦೧-೨೦೧೧) | ೪.೯ | – | ೧೩.೯ | ೧೯.೯೦ | – |
| ೬ | ಒಟ್ಟು ಸಂತಾನೋತ್ಪತ್ತಿ ದರ (ಟಿ ಎಫ್ ಆರ್)೨೦೧೬ | ೧.೮ | ೧.೪ | ೧.೫ (೨೦೧೩) | ೧.೭ (೨೦೧೩) | ೨.೩ |
| ೭ | ಜೀವನಾಯುಷ್ಯ: ೨೦೧೦-೧೪ | ೭೪.೩ | – | – | ೭೧.೬ | ೬೮.೬ |
| ೮. | ಸಾಕ್ಷರತಾ ದರ(೨೦೧೧)(ಶೇ) | ೯೪ | ೮೯ | ೭೭ | ೭೬ | ೭೬ |
| ೯. | ತಲಾ ವರಮಾನ(೨೦೧೫-೧೬: ಚಾಲ್ತಿ ಬೆಲೆಗಳಲ್ಲಿ) | ೧೪೭೮೯೦ | ೩೨೭೦೫೯ | ೫೫೬೦೩ | ೧೧೯೨೬೧ | ೧೬೨೬೩ |
| ೧೦. | ತಾಯಂದಿರ ಮರಣ ಪ್ರಮಾಣ(ಪ್ರತಿ ಲಕ್ಷ ಜನನಗಳಿಗೆ)೨೦೧೪-೧೬ | ೪೬ | – | – | ೧೯೨ | ೧೮ |
| ೧೧. | ಮಾನವ ಅಭಿವೃದ್ಧಿ ಸೂಚ್ಯಂಕ ೨೦೧೫ | ೦.೭೧೨ | ೦.೬೧೭ (೨೦೦೭-೦೮) | – | ೦.೬೬೧೪ | ೦.೬೬೧೨ |

**ಮೂಲ:** (೧). ಸೆನ್ಸಸ್ ಆಫ್ ಇಂಡಿಯಾ ೨೦೧೧. (೨) ಭಾರತ ಸರ್ಕಾರ, ನೀತಿ ಆಯೋಗ, (೩). ಸ್ಯಾಂಪಲ್ ರಿಜಿಸ್ಟ್ರೇಷನ್ ಸಿಸ್ಟಮ್. (೪). ಭಾರತ ಸರ್ಕಾರ, ೨೦೧೭, ಆರ್ಥಿಕ ಸಮೀಕ್ಷೆ ೨೦೧೭-೧೮.

### ಕೋಷ್ಟಕ ೨.೨. ಮಾನವ ಅಭಿವೃದ್ಧಿ ಮತ್ತು ಆರ್ಥಿಕ ಅಭಿವೃದ್ಧಿ: ಲಿಂಗ ಸಂಬಂಧಿ ಆಯಾಮಗಳು

| ರಾಜ್ಯಗಳು | ಸಾಕ್ಷರತಾ ದರ ೨೦೧೧(ಶೇ) | | ಜೀವನಾಯುಷ್ಯ ೨೦೧೦-೧೪ (ವರ್ಷಗಳಲ್ಲಿ) | | ಲಿಂಗವಾರು ಶಿಶು ಮರಣ ಪ್ರಮಾಣ ೨೦೧೬ | | ಪುರುಷ ಮತ್ತು ಮಹಿಳಾ ಲಿಂಗ ಅನುಪಾತ: ೨೦೧೧ | |
|---|---|---|---|---|---|---|---|---|
| | ಪು | ಮ | ಪು | ಮ | ಪು | ಮ | ಪು | ಮ |
| ಕೇರಳ | ೯೬ | ೮೯ | ೭೨ | ೭೭ | ೧೦ | ೧೩ | ೯೨೩ | ೧೦೮೪ |
| ಗೋವಾ | ೯೨ | ೮೧ | – | – | ೮ | ೧೧ | ೯೬೮ | ೧೦೩೩ |
| ಮಣಿಪುರ | ೮೬ | ೭೩ | – | – | ೮ | ೧೦ | ೯೮೭ | ೧೦೧೩ |
| ಹರಿಯಾಣ | ೮೬ | ೬೬ | ೬೯ | ೭೩ | ೨೨ | ೨೪ | ೧೦೧೩ | ೮೯೩ |
| ಪಂಜಾಬ್ | ೮೫ | ೭೧ | ೬೬ | ೭೧ | ೩೬ | ೩೭ | ೧೧೪೦ | ೮೭೭ |

**ಟಿಪ್ಪಣಿ:** ಮ: ಮಹಿಳೆಯರು, ಪು: ಪುರುಷರು. ಅಂಕಣ ೮ ಮತ್ತು ೯ರಲ್ಲಿ ಲಿಂಗ ಅನುಪಾತವನ್ನು ಕ್ರಮವಾಗಿ ಪ್ರತಿ ಸಾವಿರ ಮಹಿಳೆಯರಿಗೆ ಪ್ರತಿಯಾಗಿರುವ ಪುರುಷರ ಸಂಖ್ಯೆಯನ್ನು ಮತ್ತು ಪ್ರತಿ ಸಾವಿರ ಪುರುಷರಿಗೆ ಪ್ರತಿಯಾಗಿರುವ ಮಹಿಳೆಯರ ಸಂಖ್ಯೆಯನ್ನು ನೀಡಲಾಗಿದೆ. ಕೇರಳ, ಗೋವಾ ಮತ್ತು ಮಣಿಪುರ ರಾಜ್ಯಗಳಲ್ಲಿ ಪ್ರತಿ ಸಾವಿರ ಮಹಿಳೆಯರಿಗೆ ಎದುರಾಗಿ ಪುರುಷರ ಸಂಖ್ಯೆಯು ಕೊರತೆಯಿಂದ ಕೂಡಿದೆ. ಆದರೆ ಪ್ರತಿ ಸಾವಿರ ಪುರುಷರಿಗೆ ಎದುರಾಗಿ ಮಹಿಳೆಯರ ಸಂಖ್ಯೆ ಆಧಿಕ್ಯವಾಗಿದೆ. ಮಾನವ ಅಭಿವೃದ್ಧಿಯಲ್ಲಿ ಹಿಂದೆ ಬಿದ್ದಿರುವ ಪಂಜಾಬ್ ಮತ್ತು ಹರಿಯಾಣ ರಾಜ್ಯಗಳಲ್ಲಿ ಪ್ರತಿ ಸಾವಿರ ಮಹಿಳೆಯರಿಗೆ ಪ್ರತಿಯಾಗಿ ಪುರುಷರ ಸಂಖ್ಯೆ ಆಧಿಕ್ಯದಿಂದ ಕೂಡಿದ್ದರೆ ಪ್ರತಿ ಸಾವಿರ ಪುರುಷರಿಗೆ ಎದುರಾಗಿ ಮಹಿಳೆಯರ ಸಂಖ್ಯೆಯು ಕೊರತೆಯಿಂದ ಕೂಡಿದೆ.

## ಆರ್ಥಿಕ ಅಭಿವೃದ್ಧಿ-ಮಾನವ ಅಭಿವೃದ್ಧಿಯ ಇನ್ನೂ ಕೆಲವು ಭಿನ್ನತೆಗಳು

ಕೋಷ್ಟಕ ೨.೧. ಮತ್ತು ೨.೨. ರಲ್ಲಿ ಐದು ರಾಜ್ಯಗಳಿಗೆ ಸಂಬಂಧಿಸಿದಂತೆ ವಿವಿಧ ಅಭಿವೃದ್ಧಿ ಸೂಚಿಗಳ ವಿವರಗಳನ್ನು ನೀಡಲಾಗಿದೆ. ಸೂಕ್ಷ್ಮವಾಗಿ ಇದನ್ನು ಗಮನಿಸಿದರೆ ಮಾನವ ಅಭಿವೃದ್ಧಿ ಮತ್ತು ಆರ್ಥಿಕ ಅಭಿವೃದ್ಧಿಗಳ ನಡುವಿನ ಭಿನ್ನತೆಯನ್ನು ಅರ್ಥ ಮಾಡಿಕೊಳ್ಳಬಹುದು. ಇಲ್ಲಿ ಸೂಚಿಗಳಿಗೆ ಸಂಬಂಧಿಸಿದಂತೆ ಸಾಮಾಜಿಕ ಗುಂಪುವಾರು(ಪ.ಜಾ., ಪ.ಪಂ) ಮಾಹಿತಿ ದೊರೆಯುವುದಿಲ್ಲ. ಸರ್ವೇ ಸಾಮಾನ್ಯವಾಗಿ ಸಮಾಜದಲ್ಲಿ ಮತ್ತು ಜನವರ್ಗದಲ್ಲಿರುವ ನಂಬಿಕೆಯೆಂದರೆ ಅಭಿವೃದ್ಧಿ ಸೂಚಿಗಳಲ್ಲಿ ಪ.ಜಾ. ಮತ್ತು ಪ.ಪಂ.ಗಳ ಸ್ಥಿತಿಗತಿಯು ಸಾಮಾನ್ಯ ಜನವರ್ಗದ ಸ್ಥಿತಿಗತಿಗಿಂತ ಕೆಳಮಟ್ಟದಲ್ಲಿರುತ್ತದೆ ಎಂಬುದಾಗಿದೆ. ಇಲ್ಲಿ ನೀಡಿರುವ ಅಂಕಿಅಂಶಗಳು ಸಾಮಾನ್ಯ ಜನವರ್ಗದ ಸ್ಥಿತಿಗತಿಯನ್ನು ಸೂಚಿಸುತ್ತದೆ. ಮಾನವ ಅಭಿವೃದ್ಧಿಯಲ್ಲಿ ಮುಂಚೂಣಿಯಲ್ಲಿರುವ ಕೇರಳ ಮತ್ತು ಗೋವಾ ರಾಜ್ಯಗಳಲ್ಲಿ ಶಿಶು ಮರಣ ದರ, ಮಾನವ ಅಭಿವೃದ್ಧಿ ಸೂಚ್ಯಂಕ, ತಾಯಂದಿರ ಮರಣ ದರ, ಒಟ್ಟು ಸಂತಾನೋತ್ಪತ್ತಿ ದರ ಹೀಗೆ ಎಲ್ಲದರಲ್ಲಿಯೂ ಆರ್ಥಿಕವಾಗಿ ಬಲಿಷ್ಠವಾಗಿರುವ ಪಂಜಾಬ್ ಮತ್ತು ಹರಿಯಾಣ ರಾಜ್ಯಗಳಿಗಿಂತಲೂ ಉತ್ತಮ ಸ್ಥಿತಿಯಲ್ಲಿವೆ.

ಕೋಷ್ಟಕ ೨.೨ ರಲ್ಲಿ ಮಾನವ ಅಭಿವೃದ್ಧಿ ಮತ್ತು ಆರ್ಥಿಕ ಅಭಿವೃದ್ಧಿಗಳ ನಡುವಿನ ಭಿನ್ನತೆಯ ಲಿಂಗಸಂಬಂಧಿ ಆಯಾಮವನ್ನು ತೋರಿಸಲು ಪ್ರಯತ್ನಿಸಲಾಗಿದೆ.

ಆರ್ಥಿಕ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿಗಳ ನಡುವೆ ಅನೇಕ ಭಿನ್ನತೆ ಮತ್ತು ವ್ಯತ್ಯಾಸ ಗಳಿವೆ. ಅವುಗಳಲ್ಲಿ ಪ್ರಮುಖವಾದ ಸಂಗತಿಗಳನ್ನು ಗುರುತಿಸಬಹುದು.

೧. ಆರ್ಥಿಕ ಅಭಿವೃದ್ಧಿ ಅನ್ನುವುದು ವರಮಾನದ ಹೆಚ್ಚಳಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಆದರೆ ಮಾನವ ಅಭಿವೃದ್ಧಿ ಅನ್ನುವುದು ವರಮಾನದ ಜೊತೆಗೆ ಇತರೆ ಅಭಿವೃದ್ಧಿ ಸೂಚಿಗಳಾದ ಅಕ್ಷರ, ಶಿಕ್ಷಣ ಆರೋಗ್ಯ, ಆಹಾರ ಪೌಷ್ಠಿಕತೆ, ಮಹಿಳೆಯರ ಬದುಕಿನ ಸ್ಥಿತಿಗತಿಯ ಮಹಿಳಾ ಸಬಲೀಕರಣ ಅನ್ನುವ ಸಂಗತಿಯನ್ನು ಒಳಗೊಂಡಿದೆ. ಈ ದೃಷ್ಟಿಕೋನದಿಂದ ಮಾನವ ಅಭಿವೃದ್ಧಿಯು ಆರ್ಥಿಕ ಅಭಿವೃದ್ಧಿ ಪ್ರಣಾಳಿಕೆಗಿಂತ ವಿಸ್ತೃತವಾದ ಪರಿಕಲ್ಪನೆಯಾಗಿದೆ.

೨. ಎರಡನೆಯದಾಗಿ ಆರ್ಥಿಕ ಅಭಿವೃದ್ಧಿ ಅನ್ನುವುದು ಏಕಮಾನ ಅಭಿವೃದ್ಧಿ ಸೂಚಿಯಾಗಿದೆ. ಆದರೆ ಮಾನವ ಅಭಿವೃದ್ಧಿಯು ಬಹು ಅಭಿವೃದ್ಧಿ ಸೂಚಿಯಾಗಿದೆ.

೩. ಮೂರನೆಯದಾಗಿ ಆರ್ಥಿಕ ಅಭಿವೃದ್ಧಿಯ ಮಾಪನವನ್ನು ಒಟ್ಟು ನಿವ್ವಳ ಆಂತರಿಕ ಉತ್ಪನ್ನ(ಜಿ.ಡಿ.ಪಿ/ಎನ್.ಡಿ.ಪಿ) ಎಂದು ಕರೆಯಲಾಗುತ್ತದೆ. ಆದರೆ ಮಾನವ ಅಭಿವೃದ್ಧಿಯ ಸೂಚ್ಯಂಕ ಅಳೆಯುವ ಕ್ರಮವನ್ನು ಮಾನವ ಅಭಿವೃದ್ಧಿ ಸೂಚ್ಯಂಕ ಎಂದು ಕರೆಯಲಾಗುತ್ತದೆ(ಹೆಚ್.ಡಿ.ಐ).

೪. ನಾಲ್ಕನೆಯದಾಗಿ ಆರ್ಥಿಕ ಅಭಿವೃದ್ಧಿ ಪ್ರಣಾಳಿಕೆಯಲ್ಲಿ ಮಹಿಳೆಯರ ಬದುಕಿನ ಸ್ಥಿತಿಗತಿಗಳನ್ನು ವಿಶೇಷವಾಗಿ ಅಧ್ಯಯನ ಮಾಡುವುದಿಲ್ಲ. ಅಭಿವೃದ್ಧಿ ಅನ್ನುವುದು ಮಹಿಳೆಯರಾಗಲಿ ಅಥವಾ ಪುರುಷರಾಗಲಿ ಭಿನ್ನಭಿನ್ನವಾಗಿರುವುದಿಲ್ಲ. ಅದು ಎಲ್ಲರಿಗೂ ಒಂದೇ ರೀತಿಯಲ್ಲಿರುತ್ತದೆ. ಈ ಪ್ರಣಾಳಿಕೆಯನ್ನು ಲಿಂಗನಿರಪೇಕ್ಷ ಎಂದು ಕರೆಯಲಾಗುತ್ತದೆ. ಅದರೆ ಇಲ್ಲಿ ವಿಶಿಷ್ಟ ಅಧ್ಯಯನದ ಸೂಚಿಯಲ್ಲಿ ಮಹಿಳೆಯರಿಗೂ ಮತ್ತು ಪುರುಷರಿಗೂ ಅಭಿವೃದ್ಧಿ ಭಿನ್ನವಾಗಿರುವುದಿಲ್ಲ ಎಂದು ಆರ್ಥಿಕ ಅಭಿವೃದ್ಧಿ ಪ್ರಣಾಳಿಕೆಯ ಪ್ರತಿಪಾದನೆಯನ್ನು ಒಪ್ಪವುದು ಸಾಧ್ಯವಿಲ್ಲ. ಏಕೆಂದರೆ, ಅಭಿವೃದ್ಧಿ ಸೂಚಿಗಳಾದ ಸಾಕ್ಷರತೆ, ಶಿಕ್ಷಣ ಮಟ್ಟ ವರಮಾನ, ಪೌಷ್ಠಿಕತೆ, ಉದ್ಯೋಗ ಮುಂತಾದ ಸೂಚಿಗಳಲ್ಲಿ ಮಹಿಳೆಯರ ಸ್ಥಿತಿಗತಿ ಕೆಳಮಟ್ಟದಲ್ಲಿದೆ. ಉದಾಹರಣೆಗೆ ಕರ್ನಾಟದಲ್ಲಿ ೨೦೧೧ರ ಜನಗಣತಿ ಪ್ರಮಾಣ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ. ೬೮.೦೮, ಆದರೆ ಪುರುಷರ ಸಾಕ್ಷರತಾ ಪ್ರಮಾಣ ಶೇ. ೮೨.೪೭. ಅಭಿವೃದ್ಧಿ ಇಬ್ಬರಿಗೂ ಸಮಾನವಾಗಿ ಒದಗಿ ಬಂದಿದ್ದರೆ ಅಲ್ಲಿ ಭಿನ್ನತೆ ಇರಬೇಕಾಗಿರಲಿಲ್ಲ. ಈ ಸಂಗತಿಯನ್ನು ಮನಗಂಡು ಮಾನವ ಅಭಿವೃದ್ಧಿ ಪ್ರಣಾಳಿಕೆಯಲ್ಲಿ ಮಹಿಳೆಯರ ಸ್ಥಿತಿಗತಿಯನ್ನು ವಿಶಿಷ್ಟವಾಗಿ ಅಧ್ಯಯನ ಮಾಡಲಾಗುತ್ತದೆ. ಇದನ್ನು ಮಹಿಳಾ ಸಂವೇದಿ ಪ್ರಣಾಳಿಕೆ ಎಂದು ಕರೆಯಲಾಗುತ್ತದೆ.

೫. ಆರ್ಥಿಕ ಅಭಿವೃದ್ಧಿಯಲ್ಲಿ ಸಮಾಜದ ವಿವಿಧ ಸಮುದಾಯಗಳ ಅಭಿವೃದ್ಧಿ ಸಾಧನೆಗಳನ್ನು ಮಾಪನ ಮಾಡುವುದು ಸಾಧ್ಯವಿಲ್ಲ. ಆದರೆ ಮಾನವ ಅಭಿವೃದ್ಧಿಯಲ್ಲಿ ಸಮಾಜದ ವಿವಿಧ

ಜನವರ್ಗಗಳ ಅಭಿವೃದ್ಧಿ ಸಾಧನೆಗಳನ್ನು ಅಧ್ಯಯನ ಮಾಡಲು ಮತ್ತು ಮಾಪನ ಮಾಡಲು ಸಾಧ್ಯವಿದೆ. ಈ ಹಿನ್ನೆಲೆಯಲ್ಲಿ ದಲಿತರ ಮಾನವ ಅಭಿವೃದ್ಧಿ ಅನ್ನುವುದು ಮುಖ್ಯ ಸಂಗತಿಯಾಗಿದೆ.

೬. ಆರ್ಥಿಕ ಅಭಿವೃದ್ಧಿ ಸಮಾಜಮುಖಿ ಪರಿಭಾವನೆಯಾದರೆ, ಮಾನವ ಅಭಿವೃದ್ಧಿಯು ಬಹುಮುಖಿ ಪರಿಭಾವನೆಯಾಗಿದೆ. ಅಭಿವೃದ್ಧಿ ಅನ್ನುವುದು ಮೂಲತಃ ಬಹುಮುಖಿಯಾದ ಪ್ರಕ್ರಿಯೆಯಾಗಿದೆ.

## ೨.೪. ಟ್ರಿಕಲ್ ಡೌನ್ ಎಕನಾಮಿಕ್ಸ್

"ಟ್ರಿಕಲ್ ಡೌನ್" ಪರಿಕಲ್ಪನೆಗಾಗಿ ಜೊಸೆಫ್ ಸ್ಟಿಗ್‌ಲಿಟ್ಜ್ ನೊಬೆಲ್ ಪ್ರಶಸ್ತಿಯನ್ನು ೨೦೦೨ರಲ್ಲಿ ಪಡೆದ. ೨೦೦೩ ಮಾನವ ಅಭಿವೃದ್ಧಿ ವರದಿಗೆ ನೀಡಿದ ವಿಶೇಷ ಲೇಖನವೊಂದರಲ್ಲಿ ಜಾಗತಿಕರಣದಿಂದ ಬಡತನ ನಿವಾರಣೆಯಾಗುತ್ತದೆ ಅಥವಾ ಇಲ್ಲ ಎಂಬ ಪ್ರಶ್ನೆಗೆ ಉತ್ತರ ಸುಲಭವಲ್ಲ ಎಂಬ ಸಂಗತಿಯನ್ನು ಸ್ಟಿಗ್‌ಲಿಟ್ಜ್ ಚರ್ಚಿಸಿದ್ದಾರೆ. ಅನೇಕ ಅಧ್ಯಯನಗಳು ಜಾಗತೀಕರಣ ಮತ್ತು ಆರ್ಥಿಕ ಬೆಳವಣಿಗೆಗಳ ನಡುವಿನ ನೇರ ಸಂಬಂಧದ ಬಗ್ಗೆ ಮತ್ತು ಆರ್ಥಿಕ ಬೆಳವಣಿಗೆ ಮತ್ತು ಬಡತನ ನಿವಾರಣೆಗಳ ನಡುವಿನ ವಿಲೋಮ ಸಂಬಂಧಗಳ ಬಗ್ಗೆ ಅತ್ಯಂತ ಉತ್ಸಾಹದಿಂದ ಮಾತನಾಡುತ್ತಾರೆ.

ಜಾಗತೀಕರಣದಿಂದ ಆರ್ಥಿಕ ಬೆಳವಣಿಗೆ ಗತಿಯು ತೀವ್ರವಾಗುತ್ತದೆ. ತೀವ್ರಗತಿಯ ಆರ್ಥಿಕ ಬೆಳವಣಿಗೆಯು ಬಡತನವನ್ನು ಕಡಿಮೆ ಮಾಡುತ್ತದೆ ಎಂಬುದನ್ನು ಅವು ಪ್ರತಿಪಾದಿಸುತ್ತಿವೆ. ಈ ಅಧ್ಯಯನಗಳು ಇಂತಹ ಸಂಬಂಧಗಳ ಬಗ್ಗೆ ಚರ್ಚೆ ಮಾಡುತ್ತ ಈಗಾಗಲೇ ಪ್ರಸ್ತುತತೆಯನ್ನು ಕಳೆದುಕೊಂಡಿರುವ "ಟ್ರಿಕಲ್‌ಡೌನ್ ಎಕನಾಮಿಕ್ಸ್"ನ ಘನತೆಯನ್ನು ಪುನರ್‌ಸ್ಥಾಪಿಸುವ ಕೆಲಸ ಮಾಡುತ್ತಿವೆ. ಆದರೆ ಟ್ರಿಕಲ್‌ಡೌನ್ ಎಕನಾಮಿಕ್ಸ್ ಎಂಬುದು ಸಂಭವಿಸಿರುವುದಕ್ಕೆ ನಮಗೆ ಎಲ್ಲಿ ನಿದರ್ಶನ ದೊರೆಯುವುದಿಲ್ಲ. ಅದು ತನ್ನ ಸತ್ವವನ್ನು ಕಳೆದುಕೊಂಡಿದೆ. ಅದರಲ್ಲಿ ನಿಜಾಂಶ ಏನೇನೂ ಇಲ್ಲ. ಎಂಬುದು ಸ್ಟಿಗ್‌ಲಿಡ್ಜ್‌ನ ಸ್ಪಷ್ಟ ಅಭಿಪ್ರಾಯವಾಗಿದೆ. ಆರ್ಥಿಕ ಬೆಳವಣಿಗೆ–ವರಮಾನ ವರ್ಧನೆಯು ಒಳ್ಳೆಯದೋ ಅಥವಾ ಕೆಟ್ಟದೋ ಎಂಬ ಪ್ರಶ್ನೆಯು ಅಪ್ರಸ್ತುತ. ಇಲ್ಲಿ ಕೇಳಿಕೊಳ್ಳಬೇಕಾದ ಪ್ರಶ್ನೆಯೆಂದರೆ ಜಾಗತೀಕರಣದಿಂದ ಉಂಟಾದ ಆರ್ಥಿಕ ಬೆಳವಣಿಗೆಯು ಬಡವರ ಬದುಕನ್ನು ಹಸನು ಮಾಡಿದೆಯೇ ಎಂಬುದಕ್ಕೆ ಸ್ಪಷ್ಟತೆ ಇಲ್ಲ.

ಬರ್ಲಿನ್ ಗೋಡೆಯು ಮುರಿದು ಬಿದ್ದ ಮೇಲೆ ಸೋವಿಯತ್ ರಷ್ಯಾ ವಿಘಟನೆಗೊಂಡಿತು. ಜಗತ್ತಿನಲ್ಲಿ "ಪವರ್" ಅಧಿಕಾರ ಸಂಬಂಧಗಳಲ್ಲಿ ತೀವ್ರ ಬದಲಾವಣೆಗಳಾದವು. ಎರಡು ಸೂಪರ್ ಪವರ್‌ಗಳಿಗೆ ಪ್ರತಿಯಾಗಿ ಒಂದು ಸೂಪರ್ ಪವರ್ ಅಸ್ತಿತ್ವಕ್ಕೆ ಬಂದಿತು.

ಅಮೇರಿಕಾ ಈಗ ಏಕೈಕ ಸೂಪರ್ ದೇಶ, ಇದು ಜಗತ್ತಿನ ಆರ್ಥಿಕ ಸಂಗತಿಗಳನ್ನು ನಿರ್ದೇಶಿಸುವ, ನಿರ್ವಹಿಸುವ ಮತ್ತು ನಿಯಂತ್ರಿಸುವ ಅಧಿಕಾರವನ್ನು ಅಮೇರಿಕೆಯು ಮೂರು ಅಂತಾರಾಷ್ಟ್ರೀಯ ಸಂಸ್ಥೆಗಳ ಮೂಲಕ ನಡೆಸುತ್ತಿದೆ. ಅವು ಯಾವುವೆಂದರೆ ವಿಶ್ವಬ್ಯಾಂಕ್ (ಐಬಿಆರ್‌ಡಿ)

ಅಂತಾರಾಷ್ಟ್ರೀಯ ಹಣಕಾಸು ಸಂಸ್ಥೆ(ಐಎಂಎಫ್) ಮತ್ತು ವಿಶ್ವವ್ಯಾಪಾರ ಸಂಘಟನೆ(ಡಬ್ಲ್ಯುಟಿಓ) ಈ ಮೂರು ಸಂಸ್ಥೆಗಳನ್ನು ಅಮೇರಿಕಾ ನಿಯಂತ್ರಿಸುತ್ತದೆ. ಈ ದೇಶ ಜಗತ್ತಿನ ಮುಂದುವರೆದ ದೇಶಗಳ ಹಿತಾಸಕ್ತಿಗಳನ್ನು ಕಾಪಾಡುವ ರೀತಿಯಲ್ಲಿ ನೀತಿಗಳನ್ನು ರೂಪಿಸುತ್ತಾ, ಜಾರಿಗೊಳಿಸುತ್ತಾ ಬಂದಿದೆ.

ಈ ಸಂಸ್ಥೆಗಳು ಸಾಮಾನ್ಯವಾಗಿ ಹಿಂದುಳಿದ ದೇಶಗಳ ಬಗ್ಗೆ ಆಸಕ್ತಿ ತೋರುವುದಿಲ್ಲ. ಈ ಎಲ್ಲಾ ನೀತಿ ಕಾರ್ಯಕ್ರಮಗಳನ್ನು ಕೂಡಿಸಿ ವಿಸ್ತೃತ ನೆಲೆಯಲ್ಲಿ "ವಾಷಿಂಗ್‌ಟನ್ ಕನ್ಸೆನ್ಸಸ್" ಎಂದು ಕರೆಯಲಾಗುತ್ತದೆ. ಅಲ್ಲಿ ಅಲ್ಪ ಕಾಲಾವಧಿ ಬಂಡವಾಳದ ಒಳಹರಿವಿಗೆ ಮುಕ್ತ ಅವಕಾಶ ನೀಡುವುದಕ್ಕೆ ಪ್ರತಿಯಾಗಿ ಮತ್ತು ವಿದೇಶಿ ವ್ಯಾಪಾರ ರಫ್ತು, ಆಮದು ಚಟುವಟಿಕೆಗಳಿಗೆ ಮುಕ್ತ ಅವಕಾಶ ನೀಡುವ ನೀತಿಗಳಿಗೆ ಪ್ರತಿಯಾಗಿ ಸಮಾನತೆಯನ್ನು ಪೋಷಿಸುವ ಕಾರ್ಯಕ್ರಮಗಳಿಗೆ ಹೆಚ್ಚಿನ ಒತ್ತು ನೀಡಲಾಯಿತು. ಇದರ ಫಲವಾಗಿ ಅಲ್ಲಿಯ ಜಾಗತೀಕರಣವು ಬಡವರ ಬದುಕನ್ನು ಹಸನುಮಾಡಿತು. ವರ್ಧನೆಯಾದ ವರಮಾನದ ಅನುಕೂಲಗಳು ಬಡವರಿಗೆ ಹೆಚ್ಚು ಹೆಚ್ಚು ದೊರೆತವು.

ಇಲ್ಲಿರುವ ಪ್ರಶ್ನೆ ಆರ್ಥಿಕ ಬೆಳವಣಿಗೆ ಬೇಕೋ-ಬೇಡವೋ, ಉದಾರವಾದಿ ನೀತಿ ಅಗತ್ಯವೋ ಅಥವಾ ಅನಗತ್ಯವೋ, ಜಾಗತೀಕರಣವನ್ನು ಅನುಸರಿಸುವುದು ಒಳ್ಳೆಯದೋ ಅಥವಾ ಕೆಟ್ಟದ್ದೋ ಎಂಬುದಲ್ಲ. ಯಾವ ಬಗೆಯ ಆರ್ಥಿಕ ಬೆಳವಣಿಗೆ ವರಮಾನ ವರ್ಧನೆಯು ಬಡವರ ಬದುಕನ್ನು ಉತ್ತಮಪಡಿಸುತ್ತದೆ ಎಂಬುದು ಮುಖ್ಯ ಪ್ರಶ್ನೆ. ಅಲ್ಪಾವಧಿ ಬಂಡವಾಳದ ಪ್ರವೇಶಕ್ಕೆ ಕಡಿಮೆಯಾಗುತ್ತದೆ ಎಂಬುದಕ್ಕೆ ನಮಗೆ ಸೈದ್ಧಾಂತಿಕವಾಗಿಯಾಗಲಿ ಅಥವಾ ಪ್ರಾಯೋಗಿಕವಾಗಲಿ ಪುರಾವೆಗಳು ದೊರೆಯುವುದಿಲ್ಲ. ಆದರೆ ಅಲ್ಪ ಕಾಲಾವಧಿ ಬಂಡವಾಳ ಮುಕ್ತ ಒಳ ಪ್ರವೇಶದಿಂದ ಆರ್ಥಿಕತೆಯಲ್ಲಿ ಅಸ್ಥಿರತೆಯು ಹೆಚ್ಚಾಗುತ್ತದೆ ಎಂಬುದಕ್ಕೆ ಸೈದ್ಧಾಂತಿಕ ಪುರಾವೆಗಳು ದೊರೆಯುತ್ತವೆ. ಅದೇ ರೀತಿ ವ್ಯಾಪಾರವನ್ನು ನಿಯಂತ್ರಣಗಳಿಂದ ಮುಕ್ತಗೊಳಿಸಿದರೆ ಅದರಿಂದ ಬಡವರಿಗೆ ಅನುಕೂಲಗಳು ಕಡಿಮೆ ಎಂಬುದು ದೃಢವಾಗಿದೆ.

ಶಿಕ್ಷಣ, ಆರೋಗ್ಯ, ಲಿಂಗ ಸಮಾನತೆ ಮುಂತಾದ ಕ್ಷೇತ್ರಗಳಿಗೆ ಸುಧಾರಣೆ ತರುವುದರಿಂದ ಮತ್ತು ಅವುಗಳಿಗೆ ಸಂಬಂಧಿಸಿದಂತೆ ಕ್ರಮಗಳನ್ನು ತೆಗೆದುಕೊಳ್ಳುವುದರಿಂದ ದೀರ್ಘಾವಧಿಯಲ್ಲಿ ಬಡತನ ಕಡಿಮೆಯಾಗುತ್ತದೆ ಎಂಬುದಕ್ಕೆ ನಮಗೆ ಆಧಾರಗಳಿವೆ. ಅನಕ್ಷರಸ್ಥರು ಅಕ್ಷರಸ್ಥರಾದರೆ, ಜನರ ಆರೋಗ್ಯ ಉತ್ತಮವಾದರೆ ಮತ್ತು ಮಹಿಳೆಯರಿಗೆ ಸಮಾನ ಅವಕಾಶಗಳು ದೊರೆಯುವಂತಾದರೆ ಅಲ್ಲಿ ಉತ್ಪಾದನಾ ಕ್ಷಮತೆಯು ಹೆಚ್ಚಾಗುತ್ತದೆ.

**ಜೋಸೆಫ್ ಈ ಸ್ಟಿಗ್‌ಲಿಡ್ಜ್** ಪ್ರಕಾರ ಜಾಗತೀಕರಣ ಎನ್ನುವುದು ಸಾಮಾಜಿಕ ನ್ಯಾಯಕ್ಕೆ ತದ್ವಿರುದ್ಧವಾದುದು. ಅದು ಅನುಕೂಲಗಳು ಹೆಚ್ಚು ಹೆಚ್ಚು ಉಳ್ಳವರಿಗೆ ಒದಗಿಸುತ್ತದೆ. ಹೀಗೆ ಸ್ಟಿಗ್‌ಲಿಡ್ಜ್ ಅವರ "ಟ್ರಿಕಲ್‌ಡೌನ್ ಎಕನಾಮಿಕ್ಸ್" ಪ್ರಮೇಯವನ್ನು ತಿರಸ್ಕರಿಸುತ್ತಾರೆ.

ಅಭಿವೃದ್ಧಿ ದುಸ್ಥಿತಿ ಎನ್ನುವುದು ಕೇವಲ ವರಮಾನಕ್ಕೆ ಸಂಬಂಧಿಸಿದ ಸಂಗತಿಯಲ್ಲ. ಆರ್ಥಿಕ ಅಭಿವೃದ್ಧಿಗೆ ಪ್ರತಿಯಾಗಿ ಮಾನವ ಅಭಿವೃದ್ಧಿ ಪ್ರಣಾಳಿಕೆಯನ್ನು ಹೇಗೆ ರೂಪಿಸಲಾಗಿದೆಯೇ ಎಂಬ ಪರಿಭಾವನೆಯನ್ನು ಯು.ಎನ್.ಡಿ.ಪಿ.ಯು ಬಳಸಿದರೆ ಅಮರ್ತ್ಯ ಸೇನ್ ಇದನ್ನು ಧಾರಣಾ ಸಾಮರ್ಥ್ಯ ದುಸ್ಥಿತಿ ಎಂದು ಕರೆಯುತ್ತಾರೆ(ಅಮರ್ತ್ಯ ಸೇನ್ ೧೯೯೯ ಪು: ೯೦). ಇದನ್ನೇ ವರಮಾನ ಬಡತನ ಎಂದು ಕರೆಯಲಾಗುತ್ತದೆ(ಮಹೇಂದ್ರ ದೇವ್. ಎಸ್). ಬಹುಮುಖಿ ಬಡತನ ಎಂಬ ಪ್ರಣಾಳಿಕೆಯನ್ನು ರೂಪಿಸಿದೆ.

ಅಭಿವೃದ್ಧಿಯನ್ನು ಎರಡು ವಿನ್ಯಾಸಗಳಲ್ಲಿ ಮೌಲ್ಯಮಾಪನ ಮಾಡಬಹುದು. ಯುಎನ್‌ಡಿಪಿಯು ಪ್ರಕಟಿಸಿರುವ ೧೯೯೭ರ ಮಾನವ ಅಭಿವೃದ್ಧಿ ವರದಿಯಲ್ಲಿ ಇವುಗಳನ್ನು ಅಖಂಡವಾದಿ ದಷ್ಟಿಕೋನ (ಕಾಂಗ್ಲೋಮೆರಿಟ್ ಪರ್ಸ್‌ಫೆಕ್ಟೀವ್) ಮತ್ತು ದುಸ್ಥಿತಿ ದೃಷ್ಟಿಕೋನ(ಡಿಪ್ರೈವೇಶನ್ ಪರ್ಸ್‌ಫೆಕ್ಟೀವ್) ಎಂದು ಕರೆಯಲಾಗಿದೆ. (ಯುಎನ್‌ಡಿಪಿ ೧೯೯೭:೧೫) ಮೊದಲನೆಯ ದೃಷ್ಟಿಕೋನದಲ್ಲಿ ಒಂದು ದೇಶವು ಸಾಧಿಸಿಕೊಂಡಿರುವ ಸಿದ್ಧಿ-ಸಾಧನೆಗಳನ್ನು ಅಖಂಡವಾಗಿ ಇಲ್ಲಿ ಪರಿಗಣಿಸಲಾಗುತ್ತದೆ.

ಶ್ರೀಮಂತರು, ಮಹಿಳೆಯರು, ಅಲ್ಪಸಂಖ್ಯಾತರು, ಹಿಂದುಳಿದ ಪರಿಶಿಷ್ಟರು ಹೀಗೆ ಅಖಂಡ ಗುಂಪನ್ನಾಗಿ ಮಾಡಿಕೊಂಡು ಮೌಲ್ಯಮಾಪನ ಮಾಡಲಾಗುತ್ತದೆ. ಇದಕ್ಕೆ ಭಿನ್ನವಾಗಿ ದುಸ್ಥಿತಿ ದೃಷ್ಟಿಕೋನದಲ್ಲಿ ನಿರ್ದಿಷ್ಟವಾಗಿ ವಂಚಿತರು, ಹಿಂದುಳಿದವರು, ಮಹಿಳೆಯರು, ಅಲ್ಪಸಂಖ್ಯಾತರು, ಬಡವರ ದುಸ್ಥಿತಿಯಲ್ಲಿರುವ ಬದುಕು ಹೇಗೆ ಎಂಬುದನ್ನು ಮೌಲ್ಯಮಾಪನ ಮಾಡಲಾಗುತ್ತದೆ.

ಒಟ್ಟು ದೇಶದ ಪ್ರಗತಿ ವಿಕಾಸವು ಎಷ್ಟೇ ತೀವ್ರಗತಿಯದ್ದಾಗಿರಲಿ, ವಿಸ್ತೃತವಾಗಿರಲಿ ಅದು ಬಡವರ ಬವಣೆಯನ್ನು ಹೋಗಲಾಡಿಸಲಾರದು. ಯು.ಎನ್.ಡಿ.ಪಿ.ಯ ೧೯೯೭ರ ಮಾನವ ಅಭಿವೃದ್ಧಿ ವರದಿಯಲ್ಲಿ ಈ ಬಗ್ಗೆ ಹೀಗೆ ಬರೆಯಲಾಗಿದೆ.

ಸಮಾಜದಲ್ಲಿ ಉತ್ತಮ ಸ್ಥಿತಿಯಲ್ಲಿರುವವರ ಬದುಕು ಮತ್ತೆ ಮತ್ತೆ ಎಷ್ಟೇ ಉನ್ನತ ಮಟ್ಟಕ್ಕೇರುತ್ತ ಹೋದರೂ ಅದರಿಂದ ಬಡಜನರ ಬವಣೆ ಕಡಿಮೆಯಾಗುವುದಿಲ್ಲ(ಪು:೧೭). ಬಡವರನ್ನು ನಿರ್ದಿಷ್ಟ ಗುರಿಯನ್ನಾಗಿ ಮಾಡಿಕೊಂಡು ಕ್ರಮಗಳು ದೃಷ್ಟಿಕೋನಗಳು ಮುಖ್ಯ; ಪ್ರತಿಯೊಬ್ಬರ ಬದುಕು ಉತ್ತಮವಾಗಿರಬೇಕು; ಆದರೆ ಯಾರ ಬದುಕು ಉತ್ತಮಗೊಳ್ಳಬೇಕೋ ಅವರ ಬದುಕಿನ ಸಿದ್ಧಿ-ಸಾಧನೆಗಳನ್ನು ಮತ್ತು ಸೋಲು ವೈಫಲ್ಯಗಳನ್ನು ಪರಿಗಣಿಸದೆ ಅಭಿವೃದ್ಧಿಯ ಬಗ್ಗೆ ಮಾತನಾಡುವುದು ಸರಿಯಲ್ಲ.

ವಾಸ್ತವದಲ್ಲಿ ಮೊದಲನೆಯ ವಿಧಾನವು ಹೆಚ್ಚು ಪ್ರಚಲಿತದಲ್ಲಿದೆ. ರಾಜಕೀಯವಾಗಿ ಮೊದಲನೆಯ ವಿಧಾನವು ಲಾಭದಾಯಕವಾದ ಸಂಗತಿಯಾಗಿದೆ. ಏಕೆಂದರೆ ಅದು ಜನರ ನ್ಯೂನತೆಯಿಂದ ಕೂಡಿದೆ. ಇಲ್ಲಿ ಫಲಿತಾಂಶವು ಶೀಘ್ರವಾಗಿ ದೊರೆಯುತ್ತದೆ. ರಾಜಕೀಯವಾಗಿ ಇದು ಅಪೇಕ್ಷಣೀಯ ಸಂಗತಿಯಾಗಿದೆ. ಮೊದಲನೆಯ ವಿಧಾನದಲ್ಲಿ ಬದುಕು ಉತ್ತಮವಾಗಿದೆಯೇ ಸಮೃದ್ಧಿಯಾಗಿದೆಯೋ

ಅಥವಾ ಕೆಳಮಟ್ಟದಲ್ಲಿದೆಯೋ, ದುಸ್ಥಿತಿಯಿಂದ ಕೂಡಿದೆಯೋ ಎಂಬುದನ್ನು ಅಭಿವೃದ್ಧಿಗೆ ಸಂಬಂಧಿಸಿದ ಸಾಧನೆಯ ನೆಲೆಯಿಂದ ಪರಿಶೀಲಿಸಬಹುದು. ಉದಾ: ಜಿಡಿಪಿ.

ಈ ರೀತಿಯಲ್ಲಿ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವ ಕ್ರಮ ಇಂದು ರೂಢಿಯಲ್ಲಿದೆ. ಅಭಿವೃದ್ಧಿ ಅಂದರೆ ಮಾನವರಲ್ಲಿನ, ಉತ್ಪಾದನೆಯಲ್ಲಿನ, ಅನುಭೋಗದಲ್ಲಿನ, ಬಂಡವಾಳ ಹೂಡಿಕೆಯಲ್ಲಿನ, ವೃದ್ಧಿ ಎಂದು ಸಾಮಾನ್ಯವಾಗಿ ನಿರ್ವಚಿಸಲಾಗುತ್ತಿದೆ. ಎರಡನೆಯದಾಗಿ ಜನರ ಬದುಕಿನ ಸ್ಥಿತಿಗತಿಯನ್ನು ಅಭಿವೃದ್ಧಿಗೆ ಸಂಬಂಧಿಸಿದ ದುಸ್ಥಿತಿ ನೆಲೆಯಿಂದಲೂ ಪರಿಗಣಿಸಬಹುದು ಈ ದೃಷ್ಟಿಕೋನದ ಮಹತ್ವವನ್ನು ಹಿಡಿದಿಟ್ಟಿರುವುದು ಅಮರ್ತ್ಯ ಸೇನ್ ಅಭಿವ್ಯಕ್ತ ಮಾತುಗಳು. ಉದಾಹರಣೆಗೆ ಹಸಿವು, ಅನಕ್ಷರತೆ, ಅಸ್ವಸ್ಥತೆ, ಅವಮಾನದಿಂದ ಕೂಡಿದ ಬದುಕು ಮತ್ತು ಲಿಂಗ ತಾರತಮ್ಯ ಇತ್ಯಾದಿ.

ಸಾಮಾನ್ಯವಾಗಿ ಜನರು ವರಮಾನದ ಉತ್ಪಾದನೆಯ ಅನುಭೋಗದ ಬಂಡವಾಳದ ಹೂಡಿಕೆಯ 'ವೃದ್ಧಿ'ಯ ಬಗ್ಗೆ ಹೆಚ್ಚು ಗಮನ ನೀಡುತ್ತಾರೆ ವಿನಃ ಬಡತನದ ದುಸ್ಥಿತಿಯ ಬವಣೆಯನ್ನು ನಿವಾರಣೆ ಮಾಡುವ ಬಗ್ಗೆ ಎಲ್ಲ ಸುದ್ದಿ ಮಾಧ್ಯಮಗಳು, ರಾಜಕೀಯ ಪಕ್ಷಗಳು, ಅಧಿಕಾರಿಗಳು, ಕಾರ್ಪೋರೇಟ್ ಸಂಸ್ಥೆಗಳು, ವಾಣಿಜ್ಯೋದ್ಯಮ ಕೂಟಗಳು ಸಾಮಾನ್ಯವಾಗಿ ಆರ್ಥಿಕ-ಕ್ರೈಸಿಸ್ ಸಂದರ್ಭದಲ್ಲಿ ಜಿಡಿಪಿಯಲ್ಲಿನ ಬೆಳವಣಿಗೆ ಪ್ರಮಾಣದಲ್ಲಿನ ಕುಸಿತದ ಬಗ್ಗೆ, ಬಂಡವಾಳ ಹೂಡಿಕೆಯಲ್ಲಿನ ಕುಸಿತದ ಬಗ್ಗೆ ಕಾರ್ಪೋರೇಟುಗಳ ಲಾಭದ ಪ್ರಮಾಣದಲ್ಲಿನ ಕಡಿತದ ಬಗ್ಗೆ ಆಂತಕದ ನೆಲೆಯಲ್ಲಿ ಆಕ್ರೋಶದ ಪರಿಭಾಷೆಯಲ್ಲಿ ಮಾತನಾಡುತ್ತವೆ, ಬರೆಯುತ್ತವೆ, ವಿನಃ ಹಸಿವಿನ ಬಗ್ಗೆ, ಉದ್ಯೋಗಗಳಲ್ಲಿನ ಕಡಿತದ ಬಗ್ಗೆ, ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶಗಳಿಗೆ ನಡೆಯುವ ವಲಸೆಯ ಬಗ್ಗೆ ಬರೆಯುವುದಿಲ್ಲ, ಚರ್ಚೆ ಮಾಡುವುದಿಲ್ಲ. ರಾಜಕೀಯವಾಗಿ ಮೊದಲನೆಯ ಕ್ರಮವು ಹೆಚ್ಚು ಅಪೇಕ್ಷಣೀಯವಾದ ಸಂಗತಿಯಾಗಿದೆ. ಶ್ರೀಮಂತಿಕೆಯ ಬಗ್ಗೆ ಮಾತನಾಡುವುದು ದಾರಿದ್ರ್ಯದ ಬಗ್ಗೆ ಮಾತನಾಡುವುದಕ್ಕಿಂತ ಹೆಚ್ಚು ಆಪ್ಯಾಯಮಾನವಾದ ಸಂಗತಿಯಾಗಿದೆ. ಸರ್ಕಾರಗಳು ಅದೇ ರೀತಿಯಲ್ಲಿ ನಡೆಯುತ್ತವೆ ಆದರೆ ನೀತಿ ನಿರೂಪಣೆ ದೃಷ್ಟಿಯಿಂದ ಎರಡನೆಯ ಕ್ರಮವು ಹೆಚ್ಚು ಉಪಯುಕ್ತವೆಂದು ಕಾಣುತ್ತದೆ. ದುಸ್ಥಿತಿಯನ್ನು ಕುರಿತು ಚರ್ಚೆಯು ಮಾನವ ಅಭಿವೃದ್ಧಿ ಪ್ರಣಾಳಿಕೆಯ ಧಾತುವಾಗಿದೆ(ಯು.ಎನ್.ಡಿ.ಪಿ. ೨೦೧೦-೯೪). ಏಕೆಂದರೆ ದುಸ್ಥಿತಿಗಳನ್ನು ನಿವಾರಣೆ ಮಾಡುವುದು ಸಾಮಾಜಿಕ ನ್ಯಾಯದ ಪ್ರಶ್ನೆಯಾಗಿದೆ. ಬಡತನದ ನಿವಾರಣೆಯನ್ನು ಸಾಮಾಜಿಕ ನ್ಯಾಯದ ಸಂಗತಿಯನ್ನಾಗಿ ಪರಿಭಾವಿಸಿಕೊಳ್ಳುವ ಕ್ರಮವನ್ನು ಸೇನ್ ಚರ್ಚೆ ಮಾಡಿದ್ದಾರೆ. ಜಾನ್‌ರಾಲ್ಸ್‌ನು ಪ್ರತಿಪಾದಿಸುತ್ತದ್ದ ಸಾಮಾಜಿಕ ನ್ಯಾಯದ ಎರಡನೆಯ ಸೂತ್ರದ ಅಡಿಯಲ್ಲಿ ಇದನ್ನು ಚರ್ಚೆ ಮಾಡಬಹುದು. ಸಾಮಾಜಿಕ ನ್ಯಾಯಕ್ಕೆ ಸಂಬಂಧಿಸಿದಂತೆ ಜಾನ್‌ರಾಲ್ಸ್ ಎರಡು ನಿಯಮವನ್ನು ಮಂಡಿಸಿದ್ದಾರೆ.

೧) ಪ್ರತಿಯೊಬ್ಬ ವ್ಯಕ್ತಿಯೂ ಪೂರ್ಣ ಪ್ರಮಾಣದ ಕಾರ್ಯ ಸೂಚಿಗಳನ್ನು ಒಳಗೊಂಡ ಮೂಲಭೂತ ಸಮಾನ ಸ್ವಾತಂತ್ರ್ಯಗಳಿಗೆ ಹಕ್ಕುದಾರನಾಗಿರುತ್ತಾನೆ.

೨) ಇದೇ ಬಗೆಯ ಕಾರ್ಯಸೂಚಿಗಳನ್ನೊಳಗೊಂಡ ಸ್ವಾತಂತ್ರ್ಯಗಳಿಗೆ ಎಲ್ಲರೂ ಸಮಾನ ಹಕ್ಕುದಾರರಾಗಿರುತ್ತಾರೆ. ಇವೆರಡರ ನಡುವಿನ ಸಂಬಂಧ ಪರಸ್ಪರ ಪೂರಕವಾಗಿರುತ್ತದೆ. ವಿನಃ ವಿರುದ್ಧವಾಗಿರುವುದಿಲ್ಲ.

ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಗಳನ್ನು ಕೆಳಕಂಡ ಎರಡು ಸಂದರ್ಭಗಳಲ್ಲಿ ಒಪ್ಪಿಕೊಳ್ಳಬಹುದು.

ಮೊದಲನೆ ಸೂತ್ರವನ್ನು ಸ್ವಾತಂತ್ರ್ಯಗಳ ಸೂತ್ರವೆಂದು, ಎರಡನೆಯ ಸೂತ್ರವನ್ನು ಭಿನ್ನತೆಯ ಸೂತ್ರವೆಂದು ಕರೆಯಬಹುದು. ಅಸಮಾನತೆಯಿಂದ ಕೂಡಿರುವ ಸಮಾಜದಲ್ಲಿ ಸರ್ಕಾರದ ನೀತಿಗಳು ಸಮಾನತೆಯನ್ನು ಆಧರಿಸಿದ್ದರೆ ಅದರಿಂದ ಅಸಮಾನತೆಯನ್ನು ತೊಡೆದುಹಾಕುವುದು ಸಾಧ್ಯ ವಾಗುವುದಿಲ್ಲ. ಸಮಾಜದಲ್ಲಿ ಎಲ್ಲಾ ಹುದ್ದೆಗಳಿಗೆ ಮತ್ತು ಅಧಿಕಾರಿಗಳಿಗೂ ಎಲ್ಲರಿಗೂ ಪ್ರವೇಶ ತೆರೆದಿರಬೇಕು. ಆದರೆ ಅಲ್ಲಿ ಸವಲತ್ತುಗಳು ಹೆಚ್ಚು ಹೆಚ್ಚಾಗಿ ವಂಚಿತರಿಗೆ, ಮಹಿಳೆಯರಿಗೆ ಅಲ್ಪಸಂಖ್ಯಾತರಿಗೆ, ಹಿಂದುಳಿದವರಿಗೆ ದೊರೆಯು ವಂತಿರಬೇಕು.

ಈ ಬಗೆಯ ಉದ್ದೇಶಪೂರಿತ ತಾರತಮ್ಯ ನೀತಿಯಿಂದ ಸಮಾಜದಲ್ಲಿ ಅನೂಚಾನವಾಗಿ ಹರಿದುಕೊಂಡು ಬರುತ್ತಿರುವ ಅಸಮಾನತೆಗಳನ್ನು ನಿವಾರಿಸಬಹುದು. ಸಮಾಜದಲ್ಲಿ ವಂಚಿತರಿಗೆ, ಬಡವರಿಗೆ ಅಲ್ಪಸಂಖ್ಯಾತರಿಗೆ ಹೆಚ್ಚು ಹೆಚ್ಚು ಸವಲತ್ತುಗಳನ್ನು ನೀಡುವುದಕ್ಕೆ ಒತ್ತು ಕೊಡುವುದಾದರೆ ಅಂತಹ ಅಸಮಾನತೆಯ ವಿತರಣೆಯ ಸಾಮಾಜಿಕ ನೀತಿಗಳನ್ನು ರಾಲ್ಸ್‌ನ ಪ್ರಣಾಳಿಕೆಯ ಪ್ರಕಾರ ಸಮರ್ಥಿಸಬೇಕಾಗುತ್ತದೆ.

**೨.೫. ಅಮರ್ತ್ಯ ಸೇನ್ ಮತ್ತು ಮೆಹಬೂಬ್ ಉಲ್ ಹಕ್ ಅವರ ವಿಚಾರಗಳು**

ಭಾರತದ ನೆಲದಲ್ಲಿ ಅಭಿವೃದ್ಧಿ ಪರವಾದ ಚಿಂತನೆಯನ್ನು ಲೋಕ ಕಲ್ಯಾಣದ ಉದ್ದೇಶದಿಂದ ಪ್ರಭಾವಿಸಿದ ಬಹು ಎತ್ತರದ ಚಿಂತಕರೆಂದರೆ ಬುದ್ಧ–ಬಸವ ಮತ್ತು ಅಮರ್ತ್ಯ ಸೇನ್. ಅವರ ಮಾನವಪರ ಅಭಿವೃದ್ಧಿಯ ದಾಟಿ ಒಂದೇ ಸರಳ ರೇಖೆಯಲ್ಲಿ ಸಂರಚಿಸಿದೆ. ಇವರ ಕಾಲದ ಮಹಿಮೆ ಬೇರೆ–ಬೇರೆ ಕಾಲದ್ದು, ಕ್ರಿ.ಪೂ. ಆರನೆಯ ಶತಮಾನದಲ್ಲಿ ಬುದ್ಧರಿದ್ದರು, ಕ್ರಿ.ಶ. ೧೨ನೇ ಶತಮಾನದಲ್ಲಿ ಬಸವ ಮತ್ತು ೨೦ನೇ ಶತಮಾನದಲ್ಲಿ ಡಾ. ಬಾಬಾಸಾಹೇಬ್ ಅಂಬೇಡ್ಕರ್ ಮತ್ತು ಅಮರ್ತ್ಯ ಸೇನ್ ಪ್ರಮುಖರೆಂದು ಭಾವಿಸಬಹುದು. ಇವರೆಲ್ಲರೂ ಜನಕಲ್ಯಾಣದ ಆರ್ಥಿಕ ಪ್ರಜ್ಞರಾಗಿದ್ದವರು.

ಮಾನವ ನಡವಳಿಕೆಯ ಪ್ರೇರಣೆ ಯಾವುದು ಎಂಬ ಪ್ರಶ್ನೆಗೆ ವ್ಯವಸ್ಥಿತವಾಗಿ ಮೊಟ್ಟ ಮೊದಲಿಗೆ ಚರ್ಚಿಸಿದವರು ಬೌದ್ಧ ಚಿಂತಕರಾಗಿದ್ದಾರೆ. ಇವರು "ಲೋಕ ಹಿತಾರ್ಥವಾದವನ್ನು" ಮೊಟ್ಟಮೊದಲಿಗೆ ಪ್ರತಿಪಾದಿಸಿದವರೂ ಆಗಿದ್ದರು. ಇವರಲ್ಲಿ ಆರ್ಥಿಕ ನಡವಳಿಕೆಯ ವಿಶಿಷ್ಟ ಅಂಶವಾಗಿದೆ. ಒಟ್ಟು ವ್ಯಕ್ತಿಯ ಸಂಪತ್ತು ಅಥವಾ ನಿರ್ಮಾಣ ಏನನ್ನಾದರೂ ಗಳಿಸಲೆತ್ನಿಸುತ್ತಿರಲಿ;

ಆತನು ಸಂಪೂರ್ಣವಾಗಿ ಸ್ವಾರ್ಥದಿಂದಲೇ ಕೂಡಿರಬಾರದು ಎಂದು ಬೌದ್ಧ ಧರ್ಮವು ತಿಳಿಸುತ್ತದೆ. ಸಂರಕ್ಷಣೆ, ಸ್ನೇಹಿಪರತೆ, ಔದಾರ್ಯ, ಪ್ರೀತಿ, ಭಾವುಕತೆ ಇತರರಿಗಾಗಿ ಆದ್ಯತೆಯ ನೀತಿಯಾಗಿದೆ. ಲೋಕ ಹಿತಾರ್ಥವಾದದ ಪರಿಕಲ್ಪನೆಯ ಅರ್ಥಶಾಸ್ತ್ರದ ವ್ಯಾಪ್ತಿ ಮತ್ತು ಮಿತಿಗಳನ್ನು ವ್ಯಾಖ್ಯಾನಿಸುವಾಗ ಹುಟ್ಟಿಕೊಳ್ಳುವ ಸಮಸ್ಯೆಯೊಂದರ ಮೇಲೆ ಪ್ರಭಾವ ಬೀರುತ್ತದೆ. ಅದು ಯಾವ ಬಗೆಯ ವ್ಯಕ್ತಿಯ ಸಮಂಜಸ ಗುಂಪಿನ ಬಗೆಗೆ ಸಂಬಂಧಿಸಲ್ಪಟ್ಟಿರಬೇಕು? ಇದು ಯಾವ ಪ್ರಶ್ನೆ, ಯಾವ ಮಟ್ಟದ ವಿಶ್ಲೇಷಣೆ ಮತ್ತು ಪರಿಣಾಮ ವ್ಯಕ್ತಪಡಿಸುತ್ತದೆ.

ಬಸವಣ್ಣನವರದು ಬಹುಮುಖ ವ್ಯಕ್ತಿತ್ವ ಅವರ ವಚನಗಳ ಮೂಲಕ ಆರ್ಥಿಕ ಹೊಂಗಿರಣಗಳು, ತಾತ್ವಿಕ ದೃಷ್ಟಿ ಬಿಂಬಿಸುತ್ತದೆ. ಅವರ ಚಿಂತನೆ ವೈಯಕ್ತಿಕ ಅಭಿವೃದ್ಧಿ ಮತ್ತು ಸಮಾಜಾಭಿವೃದ್ಧಿಗಳನ್ನು ಪರಸ್ಪರ ಅವಲಂಬಿಸಿದೆ. ಬಸವಣ್ಣನವರ ಆರ್ಥಿಕ ಚಿಂತನೆಯಲ್ಲಿ ಕಾಯಕತ್ವ ಪ್ರಾಮಾಣಿಕ ದುಡಿತ, ತೆರಿಗೆಯ ನೀತಿ, ಉದ್ಯೋಗ ಮತ್ತು ಗುಡಿ ಕೈಗಾರಿಕೆ, ಯೋಗಕ್ಷೇಮ ಸಮಾಜ, ಮಹಿಳಾ ಸ್ವಾತಂತ್ರ್ಯ, ಜಾತಿ ವಿನಾಶ ಇಂಥ ಹಲವಾರು ಸಾಮಾಜಿಕ ಅಭಿವೃದ್ಧಿ ಕಡೆಗೆ ಅವರು ಚಿಂತನೆ ನಡೆಸಿದ್ದಾರೆ(ಪ್ರೊ. ಎಚ್. ಲಿಂಗಪ್ಪ, ೨೦೦೭), "ಬುದ್ಧ-ಬಸವ-ಅಮರ್ತ್ಯ ಸೇನ್ ಜನಕಲ್ಯಾಣ ಆರ್ಥಿಕ ಚಿಂತನೆಗಳು" ಪು. ೧೪).

ಆಡಂ ಸ್ಮಿತ್‌ನ 'ರಾಷ್ಟ್ರಗಳ ಸಂಪತ್ತು' ಕೃತಿಯಲ್ಲಿ ಪ್ರಸ್ತಾಪಿಸಿದಂತೆ ಶ್ರಮವಿಭಜನೆಯ ಸಾಲಿನಲ್ಲಿ ಕಾಯಕದ ಮೂಲಕ, ಶ್ರಮಿಸುವ ಕೌಶಲ್ಯ, ಸಮಯದ ಉಳಿತಾಯ, ಉತ್ಪಾದನೆ ಹೆಚ್ಚಳ ಅದರ ವೈಶಿಷ್ಟ್ಯತೆಯನ್ನು ಧ್ವನಿ ಉತ್ತಮ ಗುಣಮಟ್ಟದ ಸರಕು ಪ್ರಾಪ್ತಿಯಾಗುತ್ತದೆ ಎಂಬ ಅಭಿಮತ ಮಾನವ ಅಭಿವೃದ್ಧಿಗೆ ಪೂರಕವಾಗಿದೆ.

ಬಸವನ ಚಿಂತನೆಯಲ್ಲಿ ಬಹುಮುಖ ಚಿಂತನೆಗಳ ಕ್ಷ-ಕಿರಣ ಎದ್ದು ಕಾಣುತ್ತದೆ. ಇವತ್ತಿನ ಜಾಗತೀಕರಣಕ್ಕೆ ಬಸವ ಚಿಂತನೆಗಳು ಅಮೂಲ್ಯವಾಗಿವೆ. ಬಸವ ಬಯಸಿದ್ದು, ಕಂಡಿದ್ದು, ಮಾತನಾಡಿದ್ದು, ಚಿಂತಿಸಿದ್ದು, ಸಮಾನತೆಯ ನಿರ್ಮಲ ಮನಸ್ಸಿನ ಶೋಷಣೆಯಿಲ್ಲದ ಜಾಗತೀಕರಣವನ್ನು.

ಭಾರತರತ್ನ ಡಾ.ಬಾಬಾಸಾಹೇಬ್ ಅಂಬೇಡ್ಕರ್ ವಿದೇಶಿ ನೆಲದಲ್ಲಿ ಅಧ್ಯಯನಕ್ಕೆ ತೆರಳಿದ ಮೊದಲ ದಲಿತ ಎಂದು ಭಾಜನರಾಗುತ್ತಾರೆ. ಅದು ಕೊಲ್ಲಾಪುರದ ಸಾಹು ಮಹಾರಾಜ್ ದಯಾಳುತನದಿಂದ "ಕೋಲಂಬಿಯಾ" ಮತ್ತು "ಲಂಡನ್ ಸ್ಕೂಲ್ ಆಫ್ ಇಕಾನಾಮಿಕ್ಸ್ ಅಂಡ್ ಪೊಲಿಟಿಕಲ್ ಸೈನ್ಸ್"ಗೆ ಸೇರಿ ಅರ್ಥಶಾಸ್ತ್ರದಲ್ಲಿ ಎರಡು ಪಿಹೆಚ್.ಡಿ. ಗಳಿಸಿದಾತ. ೧೯೨೩ರಲ್ಲಿ ರೂಪಾಯಿ ಸಮಸ್ಯೆ ಅದರ ಮೂಲ ಮತ್ತು ಪರಿಹಾರ, ಮತ್ತೊಂದು ೧೯೨೫ರಲ್ಲಿ ಬ್ರಿಟಿಷ್ ಭಾರತದಲ್ಲಿ ಪ್ರಾಂತೀಯ ಆರ್ಥಿಕ ಬದಲಾವಣೆಯ ಮೂಲಕ ಕೃತಿಯ ಅರ್ಥಶಾಸ್ತ್ರಕ್ಕೆ ವಿಶೇಷ ಕೊಡುಗೆ ನೀಡಿದ್ದಾರೆ.

ಅಂಬೇಡ್ಕರ್ ಆರ್ಥಿಕ ಸಮಾನತೆಗೆ ತವಕಿಸಿದವರು. ಅವರು ಯೋಜಿತ ಅರ್ಥವ್ಯವಸ್ಥೆ ಮಹಾನ್ ಚಿಂತಕರಾಗಿದ್ದರು. ಸರ್ಕಾರಿ ಸಮಾಜವಾದ, ಕೃಷಿ ವ್ಯವಸ್ಥೆ ಮತ್ತು ಸಾಮೂಹಿಕ, ಕೃಷಿ,

ಸಣ್ಣ ಭೂ ಹಿಡುವಳಿಗಳ, ವಿವಿಧೋದ್ದೇಶ ಯೋಜನೆಗಳಿಂದ ಮಾನವ ಅಭಿವೃದ್ಧಿ ಹೇಗೆ ಸಹಾಯವಾಗುತ್ತದೆ ಎಂದು ಚಿಂತಿಸಿದ ಪ್ರಮುಖ ದಾರ್ಶನಿಕರಾಗಿದ್ದರು(ಪ್ರೊ. ಎಚ್. ಲಿಂಗಪ್ಪ (೨೦೦೭)– ಡಾ. ಬಿ.ಆರ್. ಅಂಬೇಡ್ಕರ್ ಅವರ ಸಾಮಾಜಿಕ-ಆರ್ಥಿಕ-ರಾಜಕೀಯ ನೆಲೆಗಳು, ಪು. ೨೫–೨೬).

ಅಮರ್ತ್ಯ ಸೇನ್ ಸಾಮಾಜಿಕ ಕಳಕಳಿಯ ಕಲ್ಯಾಣ ಅರ್ಥಶಾಸ್ತ್ರಜ್ಞ, ಅರ್ಥಶಾಸ್ತ್ರದ ಆತ್ಮಸಾಕ್ಷಿ ಎಂದು ಬಣ್ಣಿತವಾಗಿರುವ ಸೇನ್ ಅವರು ಒಬ್ಬ ದಾರ್ಶನಿಕ ಅರ್ಥಶಾಸ್ತ್ರಜ್ಞ, ರಾಜ್ಯಶಾಸ್ತ್ರ, ತತ್ವಶಾಸ್ತ್ರ, ನೀತಿಶಾಸ್ತ್ರ ಮತ್ತು ಅರ್ಥಶಾಸ್ತ್ರಗಳ ಮಧುರ ಸಂಗಮ ಅಮರ್ತ್ಯರ ವ್ಯಕ್ತಿತ್ವವಾಗಿದೆ. ಒಂಭತ್ತು ವರುಷದ ಬಾಲಕನಾಗಿದ್ದಾಗ ಕಣ್ಣಾರೆ ಕಂಡ ಬಾಂಗ್ಲಾ ಬರಗಾಲದಲ್ಲಿ ಮೂವತ್ತೈದು ಲಕ್ಷ ಜನರ ಜೀವ ಮರೆಯಾದುದರ ಬಗ್ಗೆ ಅತಿ ದುಃಖ ಅನುಭವಿಸಿದವರಲ್ಲಿ ಇವರೂ ಒಬ್ಬರು. ಅವರಿಗೆ ಅಂದಿನ ನೋವು ಕಾಡಿದ್ದು ಅದರ ಪರಿಹಾರ ಮಾರ್ಗವನ್ನು ಕುರಿತ ಆರ್ಥಿಕ ಚಿಂತನೆಧಾರೆ ಅಮೃತದಾರೆಯಾಗಿದೆ.

ಅದ್ವಿತಿಯ ಸಾಧನೆಯ ಮೇರುಪರ್ವತವಾದ ಅಮರ್ತ್ಯ ಸೇನ್ ಜಗತ್ತಿನ ಬಹುದೇಶಗಳನ್ನು ಸುತ್ತಾಡಿ ಪ್ರತಿಷ್ಠಿತ ವಿಶ್ವವಿದ್ಯಾಲಯಗಳಲ್ಲೆಲ್ಲಾ ಉಪನ್ಯಾಸಗಳನ್ನು ನೀಡಿದ್ದಾರೆ. ಅಮೇರಿಕಾ, ಬ್ರಿಟನ್ ಮತ್ತು ಯುರೋಪ್ ಖಂಡದ ದೇಶಗಳ ಅನೇಕ ವಿಶ್ವವಿದ್ಯಾನಿಲಯಗಳು ಇವರಿಗೆ ಗೌರವ ಡಾಕ್ಟರೇಟ್ ಪದವಿ ನೀಡಿ ಗೌರವಿಸಿವೆ. ಕಳೆದ ಐದು ದಶಕಗಳ ತಮ್ಮ ಪ್ರಾಧ್ಯಾಪಕ ಜೀವನ, ಸಾರ್ವಜನಿಕ ಬದುಕು ಮತ್ತು ಸಂಶೋಧನಾ ಚಟುವಟಿಕೆಗಳ ಮೂಲಕ ಸೇನ್ ಒರ್ವ ಮಹಾನ್ ಮಾನವಿಕ ವಿಜ್ಞಾನಿಯಾಗಿ ಪ್ರಜಾಪ್ರಭುತ್ವ ಪ್ರತಿಪಾದಕರಾಗಿದ್ದವರು.

ಪ್ರಜಾಪ್ರಭುತ್ವ ಮತ್ತು ಮಾನವ ಹಕ್ಕುಗಳ ಪ್ರತಿಪಾದಕರಾಗಿ ಅವುಗಳ ವ್ಯಾವಹರಿಕ ತಳಹದಿಯ ನಿರೂಪಕರಾಗಿ ಪ್ರಖ್ಯಾತರಾಗಿದ್ದಾರೆ. ಇವರು ಕಾರ್ಲ್ ಹೆನ್ರಿಚ್ ಮಾರ್ಕ್ಸ್, ಡಾ. ಬಾಬಾಸಾಹೇಬ್ ಅಂಬೇಡ್ಕರ್, ಐನ್‌ಸ್ಟೀನ್ ಅವರ ಸಾಲಿಗೆ ಸೇರುತ್ತಾರೆ. ಇವರು ವಿಶೇಷವಾಗಿ ಎಡಪಂಥೀಯ ನಿಲುವು ಹಾಗೂ ಬುದ್ಧನ ಅಲೋಚನ ಕ್ರಮಗಳ ಬಗ್ಗೆ ಅಪಾರ ನಂಬಿಕೆಯಿರುವ ವ್ಯಕ್ತಿ. ಇವರ ಚಿಂತನೆಯ ಕೃತಿಗಳು ಜರ್ಮನ್, ಫ್ರೆಂಚ್, ಇಟಾಲಿಯನ್, ಜಪಾನೀಸ್, ರಷ್ಯನ ಭಾಷೆಗೆ ಅನುವಾದಗೊಂಡಿವೆ.

೧೯೯೧ರಿಂದ ಯು.ಎನ್.ಡಿ.ಪಿ ಪ್ರಕಟಿಸಿರುವ ಮಾನವ ಅಭಿವೃದ್ಧಿ ವರದಿಗಳ ಮೇಲೆ (ಹೆಚ್.ಡಿ.ಪಿ) ಅಮರ್ತ್ಯ ಸೇನ್ ಅವರ ಕೆಲಸ ಅನನ್ಯವಾದದು. ಈ ಕೆಲಸಕ್ಕೆ ಸಹಕಾರಿಯಾದ ಪಾಕಿಸ್ತಾನದ ದಿವಂಗತ ಪ್ರೊ. ಮೆಹಬೂಬ್-ಉಲ್-ಹಕ್, ಪೌಲ್ ಸ್ಟೀಟನ್, ಬೀನಾ ಅಗ್ರವಾಲ್, ಬೊಸೆರುಪ್ ಮುಂತಾದವರು ಮುಖ್ಯರಾಗುತ್ತಾರೆ. ಮೆಹಬೂಬ್-ಉಲ್-ಹಕ್ ಪ್ರತಿಭೆ, ಶಿಸ್ತು, ಬದ್ಧತೆ, ಸಮಯ ಪ್ರಜ್ಞೆ ಮೆಚ್ಚುವಂಥದ್ದು; ಅವರೊಬ್ಬ ಆದರ್ಶ ಪ್ರಾಧ್ಯಾಪಕ ಮತ್ತು ಸಂಶೋಧಕ.

**ಮೆಹಬೂಬ್-ಉಲ್-ಹಕ್**

ಪಾಕಿಸ್ತಾನದ ದಿವಂಗತ ಪ್ರೊ. ಮೆಹಬೂಬ್-ಉಲ್-ಹಕ್ ಅವರು ಬಹುಮುಖಿ ವ್ಯಕ್ತಿತ್ವವನ್ನು ಹೊಂದಿ ಜಾಗತಿಕವಾಗಿ ಉನ್ನತ ಸ್ಥಾನವನ್ನು ಅಲಂಕರಿಸಿದ್ದರು. ಅವರು ಇಂದು ನಮ್ಮೊಂದಿಗೆ ಇಲ್ಲದಿರಬಹುದು; ಆದರೆ ಅವರು ರೂಪಿಸಿದ ವಿಚಾರಗಳ ಪ್ರಣಾಳಿಕೆಗಳು ಅವರನ್ನು ಜೀವಂತಗೊಳಿಸಿವೆ, ಹಕ್ ಅಭಿವೃದ್ಧಿ ಅರ್ಥಶಾಸ್ತ್ರಕ್ಕೆ 'ಮಾನವ ಅಭಿವೃದ್ಧಿ; ಮಾನವ ದುಸ್ಥಿತಿ'ಗಳ ಪರಿಕಲ್ಪನೆಯನ್ನು ಪರಿಚಯಿಸುವುದರ ಮೂಲಕ ಸ್ಥಿರಸ್ಥಾಯಿಯಾಗಿದ್ದಾರೆ. ಮೆಹಬೂಬ್-ಉಲ್-ಹಕ್‌ರವರು ಅಮರ್ತ್ಯ ಸೇನ್, ಮೇಘನಂದ್ ದೇಸಾಯಿ, ಸುಧೀರ್ ಆನಂದರೊಡಗೂಡಿ ಕಾರ್ಯ ನಿರ್ವಹಿಸಿದ ಸಂಯುಕ್ತ ರಾಷ್ಟ್ರಗಳ ಅಭಿವೃದ್ಧಿ ಕಾರ್ಯಕ್ರಮ(ಯು.ಎನ್.ಡಿ.ಪಿ)ದ ಮೂಲಕ 'ಮಾನವ ಅಭಿವೃದ್ಧಿ ವರದಿಗಳು' ಜಾಗತಿಕ ಮನ್ನಣೆಯನ್ನು ಪಡೆದಿವೆ.

ಮೆಹಬೂಬ್-ಉಲ್-ಹಕ್ ಮತ್ತು ಅಮರ್ತ್ಯ ಸೇನ್ ಅವರ ಚಿಂತನಾ ಶೈಲಿ ಮತ್ತು ಕಾಳಜಿ ಬಹುಹಿಂದಿನಿಂದಲೂ ನಂಬಲಾಗಿದ್ದ 'ವರಮಾನ ಕೇಂದ್ರಿತ ಅಭಿವೃದ್ಧಿ'ಯನ್ನು ಮಾನವ ಕೇಂದ್ರಿತ ಅಭಿವೃದ್ಧಿಯನ್ನಾಗಿ ಪರಿವರ್ತಿಸಿರುವುದು ಈ ಶತಮಾನದ ಬಹುಮುಖ್ಯ ಬೆಳವಣಿಗೆಯಲ್ಲಿ ಗಮನಾರ್ಹ ಸಂಗತಿಯಾಗಿದೆ.

ಕೇವಲ ಪ್ರಮುಖ ಮಾನವವಿಜ್ಞಾನವಾದ ಅರ್ಥಶಾಸ್ತ್ರಕ್ಕೆ ಅಲ್ಲಿಯ ಸೂತ್ರೀಕರಣದ ಮಿತಿಗೆ ಮಾತ್ರ ಸೀಮಿತವಾಗಿದ್ದ 'ಅಭಿವೃದ್ಧಿ' ಪರಿಕಲ್ಪನೆಯನ್ನು ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯನ್ನು ಸಾಮಾಜಿಕ ಆಯಾಮದಲ್ಲಿ, ಲಿಂಗಸಂಬಂಧಿ ನೆಲೆಯಲ್ಲಿ ಹಾಗೂ ಮಾನವೀಯ ನೆಲೆಯಲ್ಲಿ ಪರಿಚಯಿಸಿದೆ. ಇಲ್ಲಿಯವರಿಗೆ ಸಾರ್ವತ್ರಿಕತೆ ಏಕಕಾರಿ ಸ್ವರೂಪ, ಮೌಲ್ಯ ನಿರಪೇಕ್ಷೆತೆಯಾಗಿದ್ದ ಅಭಿವೃದ್ಧಿ ಮೀಮಾಂಸೆಯನ್ನು ಮಾನವ ಅಭಿವೃದ್ಧಿಯು ಬಹುಳಕಾರಿ ಮೌಲ್ಯ ಸಾಪೇಕ್ಷ ಹಿನ್ನೆಲೆಯಲ್ಲಿ ಅಭಿವೃದ್ಧಿಯನ್ನು ವ್ಯಾಖ್ಯಾನಿಸುತ್ತೇವೆ.

ಮಾನವನನ್ನು ಆರ್ಥಿಕ ಉನ್ನತಿಯನ್ನು ಸಾಧಿಸಲು ವಸ್ತುಗಳನ್ನು ಉತ್ಪಾದಿಸುವ ಉಪಕರಣದ ದೃಷ್ಟಿಯಿಂದ ನೋಡದೇ, ಜನತೆಯೇ ದೇಶದ ಸಂಪತ್ತು, ಜನತೆಯ ಅಭಿವೃದ್ಧಿಯೇ ನೈಜ ಅಭಿವೃದ್ಧಿ ಎಂಬುದುದನ್ನು ವ್ಯಕ್ತಪಡಿಸಿರುವುದು ಮಾನವ ಅಭಿವೃದ್ಧಿ ಬಡ ಜನತೆಗೆ ಅವರ ಆಯ್ಕೆ ಗಳಿಗೆ, ಅವರ ಅವಕಾಶಗಳಿಗೆ ಆದ್ಯತೆಯನ್ನು ನೀಡುತ್ತವೆ. ಇದು ಜನಪರ, ನಿಸರ್ಗಪರ, ಉದ್ಯೋಗಪರ, ಮಹಿಳಾ ಪರವಾಗಿದೆ(ಹೆಚ್.ಡಿ.ಆರ್ ೧೯೯೪) ಮಾನವನ ಆಯ್ಕೆಗಳನ್ನು ವೃದ್ಧಿಸುವುದೇ ಮಾನವ ಅಭಿವೃದ್ಧಿ ತಾತ್ವಿಕವಾಗಿ ಮಾನವನ ಆಯ್ಕೆಗಳು ಅಸಂಖ್ಯಾತ ಹಾಗೂ ಅವು ಕಾಲಕಾಲಕ್ಕೆ ಬದಲಾಗುತ್ತಿರುತ್ತವೆ. ಆದರೆ ಮಾನವನ ಸಂಪೂರ್ಣ ಅಭಿವೃದ್ಧಿಗೆ ಮೂರು ಅಂಶಗಳು ಅತ್ಯಾವಶ್ಯಕ.

ಮಾನವ ಅಭಿವೃದ್ಧಿಯ ಪರಿಧಿಯು ಸರಕಾರದ ಸಾಧನೆಗಳೇನು ಮತ್ತು ಸೂತ್ರಗಳನ್ನು ಬಳಕೆ ಮಾಡಿಕೊಂಡು ಅದಕ್ಕೆ ಅನುಗುಣವಾಗಿ ಮಾದರಿಯ ಪಟ್ಟಿ ಮಾಡಿರುವುದಕ್ಕೆ ಹೊರರಾಗಿವೆ. ಸರಕಾರದ ಸಾಧಾರಣಾ ಕಾರ್ಯಾಚರಣೆಯಾಗಿದೆ, ರಾಜ್ಯದ ಅಭಿವೃದ್ಧಿಯನ್ನು ಸಮಗ್ರ ದೃಷ್ಟಿಯಿಂದ

ನೂತನವಾಗಿ ಅವಲೋಚಿಸಿ, ವರ್ತಮಾನವ ಧೋರಣೆಗಳು, ಲೋಪದೋಷಗಳನ್ನು ಮತ್ತು ಬಲಗಳನ್ನು ಗುರುತಿಸುವಲ್ಲಿ ಇದು ನೆರವಾಗುತ್ತದೆ(ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ೧೯೯೯). ಕ್ಷೇತ್ರಾಧಾರಿತ, ವಲಯಧಾರಿತ ನೀತಿ ನಿರೂಪಣೆಗಳನ್ನು ರೂಪಿಸುವಲ್ಲಿ ಇದು ಹೊಸ ಬೆಳಕನ್ನು ಚೆಲ್ಲುತ್ತದೆ.

ದೇಶದ ಅಮೂಲ್ಯ ಸಂಪನ್ಮೂಲವಾದ ಜನತೆಯೇ ಅಭಿವೃದ್ಧಿಯ ಮೂಲ. "ಪುರುಷ–ಸ್ತ್ರೀಯರು ಮತ್ತು ಮಕ್ಕಳು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಕೇಂದ್ರ ಬಿಂದುವಾಗಿರಬೇಕು. ಅಭಿವೃದ್ಧಿ ಇವರ ಸುತ್ತ ಸುತ್ತಬೇಕೇ ಹೊರತು ಇವರು ಅಭಿವೃದ್ಧಿಯನ್ನು ಸುತ್ತುವಂತಾಗಬಾರದು. ಒಂದೆಡೆ ಅವಕಾಶಗಳನ್ನು ವೃದ್ಧಿಸುವುದು, ಮತ್ತೊಂದೆಡೆ ಜನತೆಯಲ್ಲಿ ಧಾರಣಶಕ್ತಿಯನ್ನು ರೂಪಿಸುವುದು, ಆರೋಗ್ಯ ಸುಧಾರಣೆ, ಜನತೆಗೆ ಶಿಕ್ಷಣ ಮತ್ತು ಕೌಶಲ್ಯಗಳನ್ನು ನೀಡುವುದು, ಧಾರಣಶಕ್ತಿಯನ್ನು ಉಪಯೋಗಿಸಿಕೊಂಡು ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಉತ್ಪಾದಕ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವಂತೆ ಮಾಡುವುದು; ಇಂತಹ ವಿಚಾರಧಾರೆಗಳನ್ನು ಹಕ್‌ರವರು ತಮ್ಮ ಕೃತಿಗಳಲ್ಲಿ ಚರ್ಚಿಸಿದ್ದಾರೆ.

ಅಂತೆಯೇ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು ಕೇವಲ ಸಾಮಾಜಿಕ ಅಭಿವೃದ್ಧಿಯನ್ನು ಪರಿಗಣಿಸಿದ್ದು, ಇದು ಬೆಳವಣಿಗೆಗೆ ವಿರೋಧ(Anti-growth)ವಾದುದು ಎಂಬ ಅಭಿಪ್ರಾಯವು ಸತ್ಯಕ್ಕೆ ದೂರವಾದುದೆಂದು ಹೇಳಬಹುದು. ಮಾನವ ಅಭಿವೃದ್ಧಿ ಎಂದರೆ ಮಾನವನು ಜೀವಿಸಲು ಇರುವ ಆಯ್ಕೆ ಅವಕಾಶಗಳನ್ನು ಹೆಚ್ಚಿಸುವುದೆ ಅಗಿದೆ. ಅದರಲ್ಲಿ ವರಮಾನ ಒಂದು ಆಯ್ಕೆ ಎಂಬುವುದನ್ನು ತಿಳಿಸುವುದರ ಮೂಲಕ ಈ ಅಭಿವೃದ್ಧಿ ಮಾದರಿಯು ಇಡೀ ಸಮಾಜದ ಒಳಿತನ್ನು ಬಯಸುವ ವಿಚಾರವನ್ನು ಇಟ್ಟುಕೊಂಡಿದೆ. ಮಾನವ ಅಭಿವೃದ್ಧಿಯು ಆರ್ಥಿಕ ಬೆಳವಣಿಗೆಯನ್ನು ತಿರಸ್ಕರಿಸಿಲ್ಲ ಬದಲಾಗಿ, ಸ್ವಯಂಪೋಷಿತ ಅಭಿವೃದ್ಧಿಗೆ, ಆರ್ಥಿಕ ಬೆಳವಣಿಗೆಗೆ ಅತ್ಯಾವಶ್ಯಕ ಎಂಬುವುದನ್ನು ತಿಳಿಸಿದೆ. ಈ ವಿಷಯವನ್ನು ಕುರಿತಂತೆ ಎರಡನೇ ಮಾನವ ಅಭಿವೃದ್ಧಿ ವರಧಿಯು ಈ ರೀತಿ ಹೇಳುತ್ತದೆ. 'ಮಾನವ ಅಭಿವೃದ್ಧಿಗೆ ಆರ್ಥಿಕ ಬೆಳವಣಿಗೆಯ ಅವಶ್ಯಕತೆ ಇದೆ. ಇದಿಲ್ಲದೇ ಜನಹಿತದ ಸ್ವಯಂಪೋಷಿತ ಸುಧಾರಣೆ ಅಸಾಧ್ಯ. ಮಾನವ ಅಭಿವೃದ್ಧಿಗೆ ಆರ್ಥಿಕ ಬೆಳವಣಿಗೆಯ ಅವಶ್ಯಕತೆ ಇದೆ. ಆದರೆ ಇದಷ್ಟೇ ಸಾಕಾಗುವುದಿಲ್ಲ. ಹೆಚ್ಚಿನ ಬೆಳವಣಿಗೆಯ ಪ್ರಮಾಣಗಳು ತನ್ನಿಂದ ತಾನಾಗಿಯೇ ಹೆಚ್ಚಿನ ಮಾನವ ಅಭಿವೃದ್ಧಿಗೆ ಪರಿವರ್ತಿತ ವಾಗಲಾರವು. ಆರ್ಥಿಕ ಬೆಳವಣಿಗೆ ಮತ್ತು ಮಾನವ ಅಭಿವೃದ್ಧಿಗಳ ನಡುವಿನ ಕೊಂಡಿಗೆ. ನೀತಿ–ನಿರೂಪಕಗಳ ಅವಶ್ಯಕತೆ ಇದೆ. ಮಾನವ ಅಭಿವೃದ್ಧಿಗೆ ಆರ್ಥಿಕ ಬೆಳವಣಿಗೆಯು, ಆರ್ಥಿಕ ಬೆಳವಣಿಗೆಗೆ ಮಾನವ ಅಭಿವೃದ್ಧಿಯು ಅವಶ್ಯಕವೂ, ಅಗತ್ಯವೂ ಅಗಿದೆ(ಹೆಚ್‌ಡಿಆರ್, ೧೯೯೧:೧–೨). ಈ ಹೊಸ ಅಭಿವೃದ್ಧಿ ವಿಚಾರ ಪ್ರಣಾಳಿಕೆಯ ಎಲ್ಲ ಟೀಕೆಗಳನ್ನು ನಿಜವೆನ್ನಾಲಿಕ್ಕಾಗುವುದಿಲ್ಲ. 'ಉತ್ಪಾದನಾ ಕೇಂದ್ರಿತ ಚಿಂತನೆಗಳು ಮಾನವ ಅಭಿವೃದ್ಧಿಯನ್ನು ಅಪಾರ್ಥ ಮಾಡಿಕೊಂಡು ಈ ವಿಚಾರ ಪ್ರಣಾಳಿಕೆಯನ್ನು ಟೀಕಿಸುತ್ತಿವೆ'(ಹಕ್, ೧೯೯೬:೨೨).

"ಆರ್ಥಿಕ ಬೆಳವಣಿಗೆಯನ್ನು ನಾಲ್ಕು ಮಾರ್ಗಗಳ ಮೂಲಕ ಮಾನವ ಅಭಿವೃದ್ಧಿಗೆ ಹೊಂದಾಣಿಕೆ (Like) ಮಾಡಿಕೊಳ್ಳಬಹುದಾಗಿದೆ(ಹಕ್, ೧೯೯೬:೨೨). ಮೊದಲನೆಯದಾಗಿ ಶಿಕ್ಷಣ, ಆರೋಗ್ಯ, ಜನತೆಯ ಕೌಶಲ್ಯಗಳನ್ನು ಹೆಚ್ಚಿಸುವ ರಂಗಗಳಲ್ಲಿ ಬಂಡವಾಳವನ್ನು ಹೂಡಿ, ಜನತೆ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಪಾಲ್ಗೊಂಡು, ಅದರ ಫಲಗಳನ್ನು ಪಡೆಯುವಂತೆ ಮಾಡುವುದು. ಈ ಕ್ರಮಗಳನ್ನು ಅಳವಡಿಸಿಕೊಂಡ ರಾಷ್ಟ್ರಗಳೆಂದರೆ ಚೀನಾ, ಹಾಂಕಾಗ್, ಜಪಾನ್, ಮಲೇಷಿಯಾ, ಇತ್ಯಾದಿ. ಭಾರತದಲ್ಲಿ ಕೇರಳ ರಾಜ್ಯ ಇದಕ್ಕೆ ತಕ್ಕ ಉದಾಹರಣೆಯಾಗಿದೆ.

ಎರಡನೆಯ ಕ್ರಮವೆಂದರೆ ದೇಶದಲ್ಲಿ ಲಭ್ಯವಿರುವ ವರಮಾನ, ಆಸ್ತಿ, ಸಂಪತ್ತನ್ನು ಸಮಾನವಾಗಿ ಹಂಚುವುದರ ಮೂಲಕ ವರಮಾನ ಮತ್ತು ಮಾನವ ಅಭಿವೃದ್ಧಿಗಳ ನಡುವೆ ಹೊಂದಾಣಿಕೆ ಮಾಡಬಹುದಾಗಿದೆ. ಬ್ರೆಜಿಲ್, ನೈಜರೀಯಾ, ಪಾಕಿಸ್ತಾನದಂತಹ ರಾಷ್ಟ್ರಗಳಲ್ಲಿ ವರಮಾನ ಹೆಚ್ಚಿದರೂ, ಅಲ್ಲಿ ಅದರ ವಿತರಣೆಯಲ್ಲಿ ಸಮಾನತೆಯಿಲ್ಲದ ಕಾರಣ ವರಮಾನದಲ್ಲಿಯ ಹೆಚ್ಚಳವು ಮಾನವ ಅಭಿವೃದ್ಧಿಯಾಗಿ ಪರಿವರ್ತಿತಗೊಂಡಿಲ್ಲ. ಭಾರತದಲ್ಲಿ ಇದಕ್ಕೆ ತಕ್ಕ ಉದಾಹರಣೆ ಪಂಜಾಬ್ ರಾಜ್ಯವಾದರೆ, ಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆಯನ್ನು ಉದಾಹರಿಸಬಹುದಾಗಿದೆ..

ಒಳ್ಳೆಯ ಆರ್ಥಿಕ ಬೆಳವಣಿಗೆ ಮತ್ತು ಒಳ್ಳೆಯ ವರಮಾನ ವಿತರಣೆಯ ಹೊರತಾಗಿಯೂ ಸರಕಾರವೂ ರಚನಾತ್ಮಕವಾಗಿ, ಸುವ್ಯವಸ್ಥಿತವಾಗಿ ಸಾಮಾಜಿಕ ವೆಚ್ಚಗಳನ್ನು ಮಾಡುವುದರ ಮೂಲಕ ಮಾನವ ಅಭಿವೃದ್ಧಿಯನ್ನು ಸಾಧಿಸಬಹುದಾಗಿದೆ; ಇದು ಮೂರನೆಯ ಮಾರ್ಗ. ಇದಕ್ಕೆ ಉದಾಹರಣೆ ಎಂದರೆ ಕ್ಯೂಬಾ, ಜಮೈಕಾ, ಶ್ರೀಲಂಕಾ ಇತ್ಯಾದಿ ದೇಶಗಳು. ಆದರೆ ಮಾನವ ಅಭಿವೃದ್ಧಿ ಸ್ವಯಂಪೋಷಿತವಾಗಬೇಕಾದರೆ ಆರ್ಥಿಕ ಬೆಳವಣಿಗೆ ಅತ್ಯವಶ್ಯಕವಾಗಿ ಬೇಕಾಗುತ್ತದೆ. ಮುಖ್ಯವಾಗಿ ಮಹಿಳೆಯನ್ನು ಒಳಗೊಂಡ ಜನತೆಯನ್ನು ಸಶಕ್ತೀಕರಣಗೊಳಿಸುವುದರ ಮೂಲಕ ವರಮಾನ ಮತ್ತು ಮಾನವ ಅಭಿವೃದ್ಧಿಗಳ ನಡುವೆ ಹೊಂದಾಣಿಕೆ ಸಾಧಿಸಬಹುದಾಗಿದೆ; ಇದು ನಾಲ್ಕನೆ ಮಾರ್ಗವಾಗಿದೆ.

ಸಮಗ್ರ ವಿಚಾರ ಪ್ರಣಾಳಿಕೆಯಾದ ಮಾನವ ಅಭಿವೃದ್ಧಿಯು ಉತ್ಪಾದಕತೆ ಮತ್ತು ಸಮಾನತೆ, ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿ, ಭೌತಿಕ ವಸ್ತುಗಳು ಮತ್ತು ಮಾನವ ಕಲ್ಯಾಣ ಒಳಗೊಂಡಂತೆ ಎಲ್ಲ ಅಂಶಗಳನ್ನು ತನ್ನಲ್ಲಿ ಅಡಕ ಮಾಡಿಕೊಂಡಿವೆ. ಆರ್ಥಿಕ ಅಂಶಗಳೊಂದಿಗೆ ಆರ್ಥಿಕೇತರ ಅಂಶಗಳನ್ನು ಸಮ್ಮಿಲಿಸಿಕೊಂಡಿರುವುದು ಈ ಹೊಸ ಅಭಿವೃದ್ಧಿ ಮಾದರಿಯ ಆಕರ್ಷಣೆಯ ವಿಷಯವಾಗಿದೆ. ಆರ್ಥಿಕ ಅಭಿವೃದ್ಧಿಯು ತನ್ನಿಂದ ತಾನಾಗಿಯೇ ಜನತೆಯ ಹಿತಕ್ಕೆ ಪರಿವರ್ತಿತ ವಾಗಲಾರದು. ಅದನ್ನು ಜನತೆಯ ಜೀವನಕ್ಕೆ ಪರಿವರ್ತಿಸಬೇಕಾದ ಅವಶ್ಯಕತೆ ಇದೆ ಎಂಬುದನ್ನು ಮಾನವ ಅಭಿವೃದ್ಧಿಯು ಸಾದರಪಡಿಸಿದೆ. 'ಬಡರಾಷ್ಟ್ರಗಳಲ್ಲಿ ಬಡತನವನ್ನು ಕಡಿಮೆ ಮಾಡಲು ಇಲ್ಲವೇ ನಿವಾರಿಸಲು ಆರ್ಥಿಕ ಅಭಿವೃದ್ಧಿ ಅತ್ಯಾವಶ್ಯಕವಾಗಿದೆ. ವರಮಾನದ ಬೆಳವಣಿಗೆಯಲ್ಲಿಯ ಪರಿಮಾಣಾತ್ಮಕ ಬೆಳವಣಿಗೆಯಷ್ಟೇ ಅದರ ಗುಣಾತ್ಮಕ ಬೆಳವಣಿಗೆಯೂ ಸಹ ಮುಖ್ಯವೆನಿಸುತ್ತದೆ.

ವರಮಾನದಲ್ಲಿ ಏರಿಕೆಯು ಜನತೆಗೆ ದೊರಕಬೇಕಾದರೆ ಈ ಸುಧಾರಣೆ ಭದ್ರತಾ ಯೋಜನೆಗಳು ಅಗತ್ಯವಾಗಿರುತ್ತವೆ. (ಹಕ್, ೧೯೯೬:೧೫)

ಸಂಪ್ರಾದಾಯಿಕ ಅಭಿವೃದ್ಧಿ ಸಂಕಥನದಲ್ಲಿ ಪುರುಷಶಾಹಿತ್ವ ಹೆಚ್ಚಾಗಿ ಕಾಣುತ್ತದೆ. ಅಭಿವೃದ್ಧಿಯು ಲಿಂಗ ನಿರಪೇಕ್ಷವಾಗಿದ್ದು, ಅದರ ಫಲಗಳೆಲ್ಲವೂ ಲಿಂಗಭೇದವೆನಿಸದೇ ಎಲ್ಲರಿಗೂ ದೊರೆಯುತ್ತದೆ ಎಂದು ಅದು ಭಾವಿಸುತ್ತದೆ. ಆದರೆ ಶ್ರೇಣೀಕೃತ ಸಮಾಜದಲ್ಲಿ ಅಭಿವೃದ್ಧಿ ಫಲಗಳು ಹೆಚ್ಚಾಗಿ ಪುರುಷರ ಪಾಲಾಗುತ್ತಿವೆ ಎಂಬುವುದನ್ನು ಹಾಗೂ ಕುಟುಂಬದಲ್ಲಿಯ ಅವಕಾಶಗಳಲ್ಲಿ ಸಹ ಲಿಂಗಭೇದ ಇರುವುದನ್ನು ಸೇನ್ (೧೯೮೪) ಅವರ ಅಧ್ಯಯನಗಳು ದೃಢಪಡಿಸಿವೆ. ಅನಾದಿ ಕಾಲದಿಂದಲೂ ಮಹಿಳೆಯರನ್ನು ಸಮಾಜವು ನಿರ್ಲಕ್ಷಿಸುತ್ತಾ ಬಂದಿದೆ. ಹಲವಾರು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಮಹಿಳೆಯರು ಪುರುಷರಿಗಿಂತ ನಿರಕ್ಷರಸ್ಥರು, ನಿರುದ್ಯೋಗಿಗಳು, ಅಧಿಕಾರ ರಹಿತರು ಆಗಿದ್ದಾರೆ. ಆರೋಗ್ಯ ಮತ್ತು ಪೌಷ್ಟಿಕತೆಯಂಥ ವಿಷಯಗಳು ಸಹ ಇದರಿಂದ ಹೊರತಾಗಿಲ್ಲ. ಇಲ್ಲಿಯವರೆಗೂ ಅಧೀನಳೂ, ಕ್ರಯ ರಹಿತಳೂ ಆಗಿದ್ದ ಹಾಗೂ ಸ್ಪಷ್ಟಿಕರಣಕ್ಕೆ ಒಳಗಾಗಿದ್ದ ಮಹಿಳೆ, ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯಲ್ಲಿ ಕೇಂದ್ರಬಿಂದುವಾಗಿದ್ದಾಳೆ ಮಹಿಳೆಯರು ರಾಜಕೀಯ ಮತ್ತು ಆರ್ಥಿಕ ಬದಲಾವಣೆಯ ಪ್ರಮುಖ ನಿಯೋಗಿಗಳಾಗಿದ್ದಾರೆ. ಮಾನವ ಅಭಿವೃದ್ಧಿ ಸಂಕಥನವು ಲಿಂಗಸಂಬಂಧಿಗಳ ಬಗ್ಗೆ ಸಂವೇದನಾಶೀಲವಾಗಿದೆ. ೧೯೯೫ರ ಮಾನವ ಅಭಿವೃದ್ಧಿ ವರದಿಯು ಅಭಿವೃದ್ಧಿಗೆ ಲಿಂಗಸಂವೇದಿಯಾಗಿರದಿದ್ದರೆ ಅದು ಅಪಾಯಕಾರಿಯಾದುದು ಎಂಬ ಘೋಷಣೆಯನ್ನು ನೀಡಿದೆ. ಮಾನವ ಅಭಿವೃದ್ಧಿಯು ಲಿಂಗಸಂವೇದಿಯಾಗಿರಬೇಕು. ಎಲ್ಲ ಜನತೆಯ ಆಯ್ಕೆಗಳನ್ನು ವಿಸ್ತರಿಸುವುದೇ ಅಭಿವೃದ್ಧಿ ಎಂದಾದರೆ. ಅವಕಾಶಗಳಲ್ಲಿ ಮಹಿಳೆಯರನ್ನು ಹೊರಗಟ್ಟಿದ್ದೇ ಅದರೆ ಅಭಿವೃದ್ಧಿಯ ಪ್ರಕ್ರಿಯೆ ಡೊಂಕಾಗುತ್ತದೆ. (Speth, 1995.iii) ಮಹಿಳೆಯರ ಧಾರಣಶಕ್ತಿ ಮತ್ತು ಸಶಕ್ತೀಕರಣದಂಥ ಸಂಗತಿಗಳಲ್ಲಿಯ ಬಂಡವಾಳ ಹೂಡಿಕೆಯ ಕ್ರಿಯೆಯು ಮಹಿಳೆಯರಿಗೆ ಅನುಕೂಲವಾಗುತ್ತದೆ. ಅದು ಆರ್ಥಿಕ ಬೆಳವಣಿಗೆಯೊಂದಿಗೆ ಸರ್ವಾಂಗೀಣ ಅಭಿವೃದ್ಧಿಗೆ ಮಹತ್ವಪೂರ್ಣ ಕೊಡುಗೆಯನ್ನು ನೀಡುತ್ತದೆ(ಹೆಚ್‌ಡಿಆರ್, ೧೯೯೫:೦೨). ಅಭಿವೃದ್ಧಿಯ ಧ್ಯೇಯವು ಮಹಿಳೆಯರಿಗೆ ನ್ಯಾಯ್ಯವನ್ನು ದೊರಕಿಸಿಕೊಡಬೇಕೇ ಹೊರತು ದಾನವಾದ ಅನುಕಂಪವನ್ನಲ್ಲ; ಮತ್ತು ಮಹಿಳೆಯರು ಬದಲಾವಣೆಗಳನ್ನು ಮೂಡಿಸಬೇಕಾದ ಮತ್ತು ಬದಲಾವಣೆಗಳನ್ನು ಪಡೆಯಬೇಕಾದ ಫಲನುಭವಿಗಳೆಂದು ಭಾವಿಸಬೇಕೆಂದು ೧೯೯೫ರ ಮಾನವ ಅಭಿವೃದ್ಧಿಯು ಒತ್ತಿ ಹೇಳಿದೆ. ಕೈರೋದಲ್ಲಿ ಸೆಪ್ಟೆಂಬರ್ ೧೯೯೪ರಲ್ಲಿ ನಡೆದ ಜನಸಂಖ್ಯೆ ಮತ್ತು ಅಭಿವೃದ್ಧಿ ಕುರಿತಾದ ಅಂತರರಾಷ್ಟ್ರೀಯ ಸಮ್ಮೇಳನವೂ ಲಿಂಗಸಮಾನತೆ, ಮಹಿಳೆಯನ್ನು ಸಶಕ್ತಿಗೊಳಿಸುವುದು, ಮಹಿಳೆಯ ಮೇಲಿನ ದೌರ್ಜನ್ಯವನ್ನು ತಡೆಯುವುದು, ತಮ್ಮ ಫಲವಂತಿಕೆಯನ್ನು ತಾವೇ ತಡೆಯುವ ಸಾಮರ್ಥ್ಯವನ್ನು ನೀಡುವುದು ಈ ಮೊದಲಾದ ಅಂಶಗಳನ್ನು ಜಾರಿಗೊಳಿಸಿತು. ಇವು ಜನಸಂಖ್ಯೆ ಮತ್ತು ಅಭಿವೃದ್ಧಿ ಸಂಬಂಧಿ ಕಾರ್ಯಕ್ರಮಗಳು(Cornerstone) ಎಂದೇ ಹೇಳಿದ ಮಾನವ ಅಭಿವೃದ್ಧಿಯಲ್ಲಿ

ಮಹಿಳೆಯರಿಗೆ, ಪುರುಷರಿಗಿಂತರೂ ಹೆಚ್ಚಿನ ಒತ್ತನ್ನು ನೀಡಲಾಗಿದೆ. ಜನತೆಯ ಧಾರಣಶಕ್ತಿ ವೃದ್ದಿಯಾಗಬೇಕಾದರೆ ಮೊದಲು ಮಹಿಳೆಯರ ಧಾರಣಶಕ್ತಿ ವೃದ್ದಿಯಾಗಬೇಕೆಂಬುದನ್ನು ಮಾನವ ಅಭಿವೃದ್ಧಿಯು ಒತ್ತಿ ಹೇಳಿದೆ.

"ಮಾನವ ಅಭಿವೃದ್ಧಿ ಸಂಕಥನದ ರೂವಾರಿಗಳಾದ ಅಮರ್ತ್ಯ ಸೇನ್ ಮತ್ತು ಮೆಹಬೂಬ್-ಉಲ್-ಹಕ್ ಅವರುಗಳು ಅಭಿವೃದ್ಧಿಯನ್ನು ವರಮಾನದ ವರ್ಧನೆಯ ನೆಲೆಯಲ್ಲಿ ಪರಿಭಾವಿಸುವುದಕ್ಕೆ ಪ್ರತಿಯಾಗಿ ಬದುಕುವ ಅವಕಾಶಗಳು ಹಾಗೂ ಆ ಅವಕಾಶಗಳಲ್ಲಿ ಆಯ್ಕೆಯ ವ್ಯಾಪ್ತಿಯ ವರ್ಧನೆಯ ನೆಲೆಯಲ್ಲಿ ನಿರ್ವಚಿಸುತ್ತಾರೆ. ಜನರು ಏನಾಗಿದ್ದಾರೆ ಮತ್ತು ಏನು ಮಾಡುತ್ತಿದ್ದಾರೆ ಎಂಬ ಸಂಗತಿಗಳು ಅಭಿವೃದ್ಧಿಯ ದೃಷ್ಟಿಯಿಂದ ಮುಖ್ಯವಾಗುತ್ತದೆ. ವರಮಾನದ ಪ್ರಮಾಣವೆಷ್ಟು ಮತ್ತು ವರಮಾನದ ಬೆಳವಣಿಗೆ ಎಷ್ಟು ಸಂಗತಿಗಳು ಅಭಿವೃದ್ಧಿಯ ದೃಷ್ಟಿಯಿಂದ ಮಹತ್ವವಾಗಿದ್ದರೂ ಸಹ ಅವೇ ಅಭಿವೃದ್ಧಿಯಲ್ಲ ಎಂದು ಮಾನವ ಅಭಿವೃದ್ಧಿ ಸಂಕಥನವು ಪ್ರತಿಪಾದಿಸುತ್ತದೆ. ವರಮಾನದ ಪ್ರಮಾಣ ಹಾಗೂ ಅದರ ಬೆಳವಣಿಗೆ ಗತಿ ಅಭಿವೃದ್ಧಿಯಲ್ಲಿ ಉಪಕರಣವಾಗಿ ಮಹತ್ವ ಹೊಂದಿವೆ. ವಿನಃ ಅಭಿವೃದ್ಧಿಯ ಅಂತಸ್ಥ ಗುಣವಾಗುವುದಿಲ್ಲ. ಸಾಂಪ್ರದಾಯಿಕ ಅಭಿವೃದ್ಧಿ ಸಂಕಥವು ಅಭಿವೃದ್ಧಿಯ ಲಿಂಗಸ್ವರೂಪದ ಬಗ್ಗೆ ಕುರುಡಾಗಿದೆ. ಮಾನವ ಅಭಿವೃದ್ಧಿ ಸಂಕಥನವು ಲಿಂಗಸಂಬಂಧಗಳ ಬಗ್ಗೆ ಸಂವೇದನಾಶೀಲವಾಗಿದೆ(ಚಂದ್ರಶೇಖರ್, ೧೯೯೯). ೧೯೯೦ರ ಮೊದಲ ಮಾನವ ಅಭಿವೃದ್ಧಿ ವರದಿ (UNDP) ಅಡ್ಮನಿಸ್ಟೇಟರ್ ಆದ ಡ್ರ್ಯಾಪರ್ ಅವರು ಮೊದಲನೇ ಮಾನವ ಅಭಿವೃದ್ಧಿ ವರದಿಯ ಮುನ್ನುಡಿಯಲ್ಲಿ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯ ಸಾರವನ್ನು ಈ ರೀತಿ ಹಿಡಿದಿಟ್ಟಿದ್ದಾರೆ.

"..... We are rediscovering the essential truth that people must be at the center of the development. The purpose of development is to offer people more options. One of their options is access to income-not an end in itself, but as a means to acquire human well-being but these are other options as well, including longlige, knowledge, political Feedom, personal security, community participation and guaranted human rights People cannot be reduced to a single dimension as economic creature that makes them and the study of development process fascinating is the entire spectrum through which human capabilities are Expanded and utilized'(Deaper III, 1990:iii).

ಸಮಾನತೆ, ಸ್ವಯಂಪೋಷಕತೆ(Sustainablity) ಉತ್ಪಾದಕತೆ ಮತ್ತು ಸಶಕ್ತಿಕರಣಗಳು, ಮಾನವ ಅಭಿವೃದ್ಧಿ ಪ್ರಣಾಳಿಕೆಯ ನಾಲ್ಕು ಬಹುಮುಖ್ಯ ಉಪಾಂಗಗಳಾಗಿವೆ. ಜನತೆಯ ಜೀವನದ ಆಯ್ಕೆ, ಅವಕಾಶಗಳನ್ನು ವಿಸ್ತರಿಸುವುದೇ ಅಭಿವೃದ್ಧಿ ಎಂದಾದರೆ, ಜನತೆಯ ಅವಕಾಶಗಳನ್ನು ಸಮಾಜ ರೀತಿಯಲ್ಲಿ ಪಡೆದಿರಬೇಕಾಗುತ್ತದೆ. ರಾಜಕೀಯ ಮತ್ತು ಆರ್ಥಿಕ ಅವಕಾಶಗಳು ಜನತೆಗೆ ಸಮಾನವಾಗಿ

ದೊರೆಯಬೇಕೆಂದು ಮಾನವ ಅಭಿವೃದ್ಧಿಯು ಪ್ರತಿಪಾದಿಸುತ್ತದೆ. ಸಮಾನತೆಯು ಮಾನವ ಅಭಿವೃದ್ಧಿಯ ಹೃದಯ ಭಾಗವಾಗಿದೆ. ನಾವು ಇಂದು ಪಡೆಯುತ್ತಿರುವ ಅವಕಾಶಗಳು ಮುಂದಿನ ಭಾವೀ ಜನಾಂಗಕ್ಕೂ ಸಹ ದೊರೆಯಬೇಕೆಂಬ 'ಸ್ವಯಂಪೋಷಕತೆ' ಮಾನವ ಅಭಿವೃದ್ಧಿಯ ಮತ್ತೊಂದು ಪ್ರಮುಖ ಅಂಶವಾಗಿದೆ. ಅಭಿವೃದ್ಧಿಯ ಅವಕಾಶಗಳು ಇಂದಿನ ಮತ್ತು ಮುಂದಿನ ಜನಾಂಗಕ್ಕೆ ಅನುಕೂಲವಾಗಿರುವಂತೆ ನಮ್ಮ ಅಭಿವೃದ್ಧಿ ಮಾದರಿಗಳನ್ನು ರೂಪಿಸಬೇಕೆಂಬ ಅಂಶವನ್ನು ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು 'ಸ್ವಯಂಪೋಷಕತೆ' ಮೂಲಕ ಪ್ರತಿಪಾದಿಸಿದ ಉತ್ಪಾದಕತೆ ಮತ್ತು 'ಸಶಕ್ತಿಕರಣ'ಗಳು ನವ ವಿಚಾರ ಪ್ರಣಾಳಿಕೆಯ ಮತ್ತೆರಡು ಮುಖ್ಯ ಅಂಶಗಳಾಗಿದೆ. A Comprehensive Concept, empowerment means that people are in position to exercise choses of their own free will. It implies political democracy in which people can influence Decisions about their lies'( Haq,.1996-20) ಜನತೆ ತಮ್ಮ ಆಯ್ಕೆಗಳನ್ನು ನಿರ್ಧರಿಸುವಲ್ಲಿ, ಸಮರ್ಥರು ಮತ್ತು ಸ್ವತಂತ್ರರು ಆಗಿರಬೇಕು. ಸರಕಾರದ ನೀತಿ-ನಿರೂಪಣೆಗಳು ಜನತೆಯ ಆಶೋತ್ತರಗಳಿಗೆ ಸ್ಪಂದಿಸುವಂತಿರಬೇಕು. ಜನತೆ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ನೀತಿ-ನಿರೂಪಣೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕು. ಜನತೆಯ ಮನೆಬಾಗಿಲಿಗೆ ಆಡಳಿತವನ್ನು ತರುವಂತೆ ಅಧಿಕಾರವು ವಿಕೇಂದ್ರಿಕರಣಗೊಳ್ಳಬೇಕು. ಅಭಿವೃದ್ಧಿಯು ಜನತೆಯಿಂದ ಜನರಿಗಾಗಿ, ಜನರಿಗೋಸ್ಕರ ವಾಗಿರಬೇಕು ಎಂಬುದನ್ನು ಸಶಕ್ತಿಕರಣ ಅಂಶವು ಪ್ರತಿಪಾದಿಸುತ್ತದೆ.

'ಇಂದಿನ ಅಭಿವೃದ್ಧಿ ಮಾದರಿಗಳಲ್ಲಿ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆ ಸಮಗ್ರವಾದ ಅಭಿವೃದ್ಧಿ ಮಾದರಿಯಾಗಿದೆ. ಆರ್ಥಿಕ ಬೆಳವಣಿಗೆ, ಸಾಮಾಜಿಕ ಹೂಡಿಕೆ ಜನರ ಸಶಕ್ತಿಕರಣ ಮೂಲ ಅಗತ್ಯಗಳು ಮತ್ತು ಸಾಮಾಜಿಕ ಸುರಕ್ಷೆಣೆಗಳು ಒದಗಿಸುವುದು. ರಾಜಕೀಯ ಮತ್ತು ಸಾಂಸ್ಕೃತಿಕ ಸ್ವಾಂತಂತ್ರ್ಯ ಮತ್ತು ಜನತೆಗೆ ಜೀವನ ಮತ್ತು ಇತರ ಆಯಮಾಗಳೊಂದಿಗೆ ಅಭಿವೃದ್ಧಿ ಪ್ರತಿಯೊಂದು ವಿಷಯವನ್ನು ಇದು ತನ್ನಲ್ಲಿ ಅಡಕ ಮಾಡಿಕೊಂಡಿದೆ. ಮಾನವ ಅಭಿವೃದ್ಧಿಯು ಜನತೆ ಜೀವನದ ನೈಜ ಪ್ರತಿಬಿಂಬವನ್ನು ನೀಡುತ್ತದೆ(ಹಕ್, ೧೯೯೬-೨೩).

ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು 'ಮಾನವ ಭದ್ರತೆ'ಯ ವಿಷಯವನ್ನು ಗಂಭೀರವಾಗಿ ಪರಿಗಣಿಸಿದೆ. ಅಭಿವೃದ್ಧಿ ಮತ್ತು ಭದ್ರತೆಗಳು ನಡುವಿನ ಸಂಬಂಧವನ್ನು ವಿಷಧೀಕರಿಸಿರುವುದು. ಈ ವಿಚಾರ ಪ್ರಣಾಳಿಕೆಯ ಮುಖ್ಯ ಗುಣಗಳಲ್ಲಿ ಒಂದೊಂದಂದೇ ಹೇಳಬಹುದು. ದೇಶದ ಗಡಿಭಾಗಗಳಿಗಷ್ಟೇ ರಕ್ಷಣೆಯಂಥ ವಿಷಯಗಳು ಮೀಸಲಾಗಿರದೇ, ಮಾನವ ಜೀವನಕ್ಕೂ ಸಹ ಸುರಕ್ಷತೆ ಭದ್ರತೆಯನ್ನು ಒದಗಿಸಬೇಕೆಂದು ಈ ವಿಚಾರ ಪ್ರಣಾಳಿಕೆಯು ಪ್ರತಿಪಾದಿಸುತ್ತದೆ. ಹಕ್ ಅವರು 'ಭದ್ರತೆ / ಸುರಕ್ಷತೆ ಕುರಿತಂತೆ ಹೀಗೆ ಹೇಳಿದ್ದಾರೆ.

- Security of people not just territory.
- Security of individuals, not just of nations.

❖ Security through development, not through arms

❖ Security of all the people everywhere in their homes, in their jobs, in their street, in their communities in their environment (Haq,1996-115)

ಮಾನವ ಸುಭದ್ರತೆಯ ಬಗ್ಗೆ ಆಸಕ್ತಿ ಹೊಂದಿರುವ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆ ಅಭಿವೃದ್ಧಿಶೀಲ ದೇಶಗಳೂ, ತಮ್ಮ ರಕ್ಷಣೆಗಾಗಿ ಮಿಲಿಟರಿಯ ಮೇಲೆ ಮಾಡುವ ವೆಚ್ಚವನ್ನು ತಗ್ಗಿಸಿ ಆ ಸಂಪನ್ಮೂಲಗಳನ್ನು ಸಾಮಾಜಿಕ ಅಭಿವೃದ್ಧಿಯಂಥ ವಿಷಯಗಳಿಗೆ ವರ್ಗಾಂತರಿಸುವುದರ ಮೂಲಕ ಮಾನವ ಅಭಿವೃದ್ಧಿಯನ್ನು ಸಾಧಿಸಬಹುದು ಎಂಬುವುದನ್ನು ಸಾಬೀತುಪಡಿಸಿದೆ. ಮುಖ್ಯವಾಗಿ ಅಭಿವೃದ್ಧಿಶೀಲ ದೇಶಗಳು ತಮ್ಮ ಮಿಲಿಟರಿ ವೆಚ್ಚಕ್ಕಾಗಿ ಅನಿಯಂತ್ರಣವಾಗಿ ತಮ್ಮ ಸಂಪನ್ಮೂಲಗಳನ್ನು ಬಳಸುತ್ತಿವೆ. ಈ ದೇಶಗಳು ಭೌಗೋಳಿಕ ರೇಖೆಗಳ ರಕ್ಷಣೆಗಳಿಗಿಂತ, ತಮ್ಮ ದೇಶಗಳಲ್ಲಿಯ ಜನತೆಗೆ ರಕ್ಷಣೆ / ಸುಭದ್ರತೆಯನ್ನು ನೀಡಬೇಕಾಗಿದೆ. ನೀಡಬೇಕಾಗಿ ಇಂಥ ಸಂದರ್ಭದಲ್ಲಿ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು ಅಭಿವೃದ್ಧಿಶೀಲ ದೇಶಗಳಿಗೆ ದಾರಿದೀಪವಾಗಬಹುದಾಗಿದೆ. ಈವರೆಗೂ ಅಭಿವೃದ್ಧಿಯ ವಿಚಾರಧಾರೆಯಲ್ಲಿ ಮರೆಮಾಚಿದ್ದ ಮಾನವನ ಸುರಕ್ಷತೆ/ಭದ್ರತೆಯಂಥ ವಿಷಯಗಳಿಗೆ ಹೊಸ ತಿರುವನ್ನು ನೀಡಿರುವ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯ ಇತರೆ ಅಭಿವೃದ್ಧಿ ಮಾದರಿಗಳಿಗಿಂತ ವಿಶಿಷ್ಟವಾಗಿ ತೋರುವುದರಲ್ಲಿ ಆಶ್ಚರ್ಯಪಡಬೇಕಾಗಿಲ್ಲ. ಬಡವರ ಪರ, ಮಹಿಳೆಯರ ಪರ, ನಿಸರ್ಗ ಪರವಾಗಿರುವ ಈ ಅಭಿವೃದ್ಧಿ ಮೀಮಾಂಸೆಯು ೨೦ನೇ ಶತಮಾನದ ಬಹುಮುಖ್ಯ ಬೆಳವಣಿಗೆಗಳಲ್ಲಿ ಒಂದೆಂದು ಹೇಳಬಹುದಾಗಿದೆ.

**ಅಮರ್ತ್ಯ ಸೇನ್**

ಬಡತನ ಅಸಮಾನತೆ ನಡುವೆ ಸಂಬಂಧವಿದೆ. ಇದನ್ನು ಸೇನ್ ಅಲ್ಲಗಳೆಯುವುದಿಲ್ಲ. ಅದರೆ ಅವೆರಡೂ ಪರಸ್ಪರ ಸಂವಾದಿಗಳಲ್ಲ, ಒಂದು ಇನ್ನೊಂದನ್ನು ಒಳಗೊಂಡಿರುವುದಿಲ್ಲ. ಒಂದು ಸಮಾಜದಲ್ಲಿ ಉನ್ನತ ವರ್ಗದ ವರಮಾನದಲ್ಲಿ ಒಂದು ಭಾಗವನ್ನು ಮಧ್ಯಮ ವರ್ಗಕ್ಕೆ ವರ್ಗಾವಣೆ ಮಾಡುವುದರಿಂದ ಅಸಮಾನತೆ ಕಡಿಮೆಯಾಗುತ್ತದೆ. ಆದರೆ ಇದರಿಂದ ಬಡತನದ ಪ್ರಮಾಣ ಮತ್ತು ತೀವ್ರತೆ ಕಡಿಮೆಯಾಗುವುದಿಲ್ಲ. ಒಂದು ದೇಶದ ಒಟ್ಟು ದೇಶೀಯ ಉತ್ಪನ್ನವು ಕುಸಿದಾಗ ಅಸಮಾನತೆ ತೀವ್ರತೆಯು ಬದಲಾಗದಿದ್ದರೂ ಹಸಿವು, ದುಸ್ಥಿತಿ, ಕಂಗಾಲುತನಗಳು ಅಧಿಕವಾಗುತ್ತವೆ. ಇಂತಹ ಸಂದರ್ಭದಲ್ಲಿ ಅಸಮಾನತೆ ಸ್ವರೂಪದಲ್ಲಿ ಯಾವುದೇ ಬಗೆಯ ಬದಲಾವಣೆ ಸಂಭವಿಸದೆ ಇರುವುದರಿಂದ ಬಡತನದ ಪ್ರಮಾಣ ಮತ್ತು ತೀವ್ರತೆಯಲ್ಲೂ ಯಾವುದೇ ಬದಲಾವಣೆಯಾಗಿಲ್ಲ ಎಂದು ಭಾವಿಸುವುದು ಈ ಬಗೆಯ ಅನುಸಂಧಾನದಲ್ಲಿ ಬಡತನದ ಸೂಕ್ಷ್ಮ ಸ್ವರೂಪವನ್ನು ಅರ್ಥ ಮಾಡಿಕೊಳ್ಳುವುದು ಸಾಧ್ಯವಿಲ್ಲ.

ಬಡತನ ಮತ್ತು ಅಸಮಾನತೆಗಳ ನಡುವೆ ಸಂಬಂಧವಿದೆ. ಅವೆರಡು ಒಂದು ಇನ್ನೊಂದನ್ನು ಪ್ರಭಾವಿಸುತ್ತವೆ. ಒಂದು ದೇಶದ ವರಮಾನದ ಗಾತ್ರದಲ್ಲಿ ಯಾವ ಬದಲಾವಣೆಯನ್ನು ಉಂಟು

ಮಾಡದೆಯೂ ಬಡತನವನ್ನು ತೊಡೆದು ಹಾಕಬಹುದು ಅಥವಾ ಅದರ ತೀವ್ರತೆಯನ್ನಾದರೂ ಕಡಿಮೆ ಮಾಡಬಹುದು ಎಂಬ ವಾದವು ತುಂಬಾ ಸ್ವಾಗತಾರ್ಹವಾದುದು. ಏಕೆಂದರೆ ಇಂತಹ ನಿಲುವಿನಿಂದ ಬಡತನದ ನಿವಾರಣೆ ಅಭಿಯಾನದಲ್ಲಿ ಜನರು ಆಸಕ್ತಿ ತಳೆಯಬಹುದು ಮತ್ತು ತಮ್ಮನ್ನು ತಾವು ಅದರಲ್ಲಿ ತೊಡಗಿಸಿಕೊಳ್ಳಬಹುದು.

**ಸಾಮರ್ಥ್ಯದ ಅಭಿವೃದ್ಧಿ**

ಸೇನ್ ಅವರ ನೂತನ ಪರಿಕಲ್ಪನೆಯನ್ನು ನೊಬೆಲ್ ಸಮಿತಿಯು ವಿಶೇಷವಾಗಿ ಪರಿಗಣಿಸಿದೆ. ಸಾಮರ್ಥ್ಯದ ಅಭಿವೃದ್ಧಿ ಎಂದರೆ ಜನರ ಆಯ್ಕೆಯನ್ನು ವಿಸ್ತರಿಸುವ ಪ್ರಕ್ರಿಯೆಯಾಗಿದೆ. ಒಬ್ಬ ವ್ಯಕ್ತಿ ಸಾಮರ್ಥ್ಯ ಎಂದರೆ ಅವನು ತನ್ನ ಕ್ಷೇಮಾಭ್ಯುದಯವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಸಮಾಜದ ವಿವಿಧ ಸ್ತರಗಳಲ್ಲಿ ಕಾರ್ಯನಿರ್ವಹಿಸುವ ಸಾಮರ್ಥ್ಯವಾಗಿದೆ.

ಸೇನ್ ಪ್ರಕಾರ ಉನ್ನತ ಜೀವನ ಮಟ್ಟ, ಆರೋಗ್ಯ, ತಿಳಿವಳಿಕೆ, ಸ್ವ-ಗೌರವ, ಸಾಧನೆ ಮತ್ತು ಸಾಮುದಾಯಿಕ ಜೀವನದಲ್ಲಿ ಪರಿಣಾಮಕಾರಿಯಾಗಿ ಭಾಗವಹಿಸಲು ಅನುವಾಗುವಂತೆ ಮಾಡಲು ಜನರ ಸಾಮರ್ಥ್ಯ ಮತ್ತು ಆಯ್ಕೆ ಸ್ವಾತಂತ್ರ್ಯವನ್ನು ಹೆಚ್ಚಿಸುವುದು ಮತ್ತು ಸಾಮರ್ಥ್ಯ ಅಭಿವೃದ್ಧಿಯ ಗುರಿಯಾಗುತ್ತದೆ. ಅವರು ಹೇಳುವಂತೆ ಸಮಾಜವೊಂದರ ಜೀವನ ಮಟ್ಟವನ್ನು ಒಟ್ಟು ರಾಷ್ಟ್ರೀಯ ತಲಾ ಉತ್ಪನ್ನ ಮತ್ತು ನಿರ್ದಿಷ್ಟ ಸರಕುಗಳು ಪೂರೈಕೆಯಿಂದ ಅಳೆಯುವುದರ ಬದಲು ಜನರ ಸಾಮರ್ಥ್ಯದಿಂದ ಅಳೆಯಬೇಕು.

ಹಸಿವು, ಪೌಷ್ಠಿಕಾಂಶ ಕೊರತೆ, ಸೂಕ್ತ ವಸತಿ ಅಥವಾ ನಿವೇಶನದ ಕೊರತೆ ಸಾಮುದಾಯಿಕ ಜೀವನದಲ್ಲಿ ಭಾಗವಹಿಸಲಾಗುವ ಸ್ಥಿತಿ ಮುಂತಾದವುಗಳಿಂದ ಮುಕ್ತವಾಗುವುದು ಮಾನವ ಸಾಮರ್ಥ್ಯದ ಅಭಿವೃದ್ಧಿಯ ಮುಖ್ಯ ಧ್ಯೇಯವಾಗಿದೆ. ಆರ್ಥಿಕಾಭಿವೃದ್ಧಿಯು ಜನರು ಸುದೀರ್ಘ ಆರೋಗ್ಯವಂತ ಜೀವನ ನಡೆಸಲು ಅನುವಾಗುವ ರೀತಿಯಲ್ಲಿ ಜನರ ಸಾಮರ್ಥ್ಯವನ್ನು ಹೆಚ್ಚಿಸುವಂತಿರಬೇಕು. ಜನರಿಗೆ ಆದಾಯ ತಂದುಕೊಡುವುದರ ಜೊತೆಗೆ ಬಡವರಿಗೆ ಉತ್ತಮ ಪೌಷ್ಠಿಕ ಆಹಾರ, ಯೋಗ್ಯ ಕುಡಿಯುವ ನೀರು, ಉತ್ತಮ ಸಾರಿಗೆ ವ್ಯವಸ್ಥೆ ಮುಂತಾದವುಗಳನ್ನು ಕಲ್ಪಿಸುವಂತಹ ಆರ್ಥಿಕಾಭಿವೃದ್ಧಿ ಕಡೆಗೆ ಗಮನಹರಿಸಬೇಕು ಎಂಬುದನ್ನು ಈ ಪರಿಕಲ್ಪನೆ ಸಾರುತ್ತದೆ.

**ಅರ್ಹ ಮಾಡುವ(ಗಳಿಸುವ) ಪರಿಭಾವನೆ**

ಈ ಪರಿಕಲ್ಪನೆಯನ್ನು ಪರಿಚಯಿಸಿದ ಸೇನ್ ಅಮೇರಿಕಾದಲ್ಲಿ ಸಾಮಾಜಿಕ ಭದ್ರತೆಯನ್ನು ಕಲ್ಪಿಸುವ ಸಲುವಾಗಿ ವೃದ್ಧಾಪ್ಯದಲ್ಲಿ ಜನರ ಸಂರಕ್ಷಣೆಗಾಗಿ ಅವರ ಸವಲತ್ತುಗಳಲ್ಲಿ ಒಂದಾದ ವೃದ್ಧಾಪ್ಯ ವೇತನ ನೀಡುವುದು. 'ಅರ್ಹ ಮಾಡುವ ಪರಿಭಾವನೆಯಾಗಿದೆ.' ಕಾನೂನಿನ ಮೂಲಕ ಹಕ್ಕುಗಳನ್ನು ಚಲಾಯಿಸುವುದಾಗಿದೆ. ಸೇನ್ ಅವರ ಪೌಷ್ಠಿಕ ಆಹಾರ, ಶಿಕ್ಷಣ, ವೈದ್ಯಕೀಯ ಸೌಲಭ್ಯ, ಉದ್ಯೋಗ, ಕ್ಷಾಮದ ಕಾಲದಲ್ಲಿ ಆಹಾರದ ಭದ್ರತೆ ಮುಂತಾದ ಅಂಶಗಳನ್ನು ಅರ್ಹ ಮಾಡುವ ಅಥವಾ ಹಕ್ಕು ಅಥವಾ ಅಧಿಕಾರ ಕೊಡುವ ಪರಿಕಲ್ಪನೆಯಲ್ಲಿ ಸೇರ್ಪಡೆಗೊಳಿಸಿದ್ದಾರೆ.

ಜನರ ಅರ್ಹತೆ ಹಕ್ಕು ಯೋಗ್ಯತೆ ಮತ್ತು ಸಾಮರ್ಥ್ಯಗಳನ್ನು ಹೆಚ್ಚಿಸಬೇಕು. ಭೀಕರ ಬರಗಾಲ ಕ್ಷಾಮದ ಕಾಲದಲ್ಲಿ ಅಧಿಕ ಸಂಖ್ಯೆ ಗ್ರಾಮೀಣ ಬಡವರು ಸಾವನ್ನಪ್ಪಲು ಕಾರಣ ಆಹಾರದ ಕೊರತೆಯಲ್ಲ, ಬದಲಿಗೆ ಜನರ ಅರ್ಹತೆಯ ಕೊರತೆಯ ಕಾರಣದಿಂದ ಎಂಬುದನ್ನು ಸೇನ್ ಯೋಚಿಸಿದರು.

## ಸಾಮರ್ಥ್ಯ ಮತ್ತು ಕಲ್ಯಾಣ

ಸಾಮರ್ಥ್ಯ ಎಂಬ ಪದವನ್ನು ಮಾನವ ಜೀವಿಗಳ ಸಂದರ್ಭದಲ್ಲಿ ಮೊತ್ತ ಮೊದಲಿಗೆ ಬಳಸಿದ್ದು, ಸೇನ್ ಮೊದಲಿಗರು ಕಲ್ಯಾಣ ಅರ್ಥಶಾಸ್ತ್ರಕ್ಕೆ ಇದು ಒಂದು ಹೊಸ ಬಗೆಯ ಚಿಂತನೆಯ "ಮೌಲ್ಯಯುತವಾದ ಕ್ರಿಯೆಗಳನ್ನು ಮಾಡಲು ವ್ಯಕ್ತಿಯೊಬ್ಬನ ಸಾಮರ್ಥ್ಯ ಅಥವಾ ಮೌಲ್ಯಯುತವಾದ ಕಲ್ಯಾಣ ಸ್ಥಿತಿಗಳನ್ನು ತಲುಪುವುದು"

ವ್ಯಕ್ತಿಯೊಬ್ಬನು ಮಾಡಬಹುದಾದ ವಸ್ತುಗಳ ಪರ್ಯಾಯ ಸಂಶೋಧನೆಗಳು ಪ್ರತಿ ಪುರುಷ ಮತ್ತು ಮಹಿಳೆ ಮಾಡಬಹುದಾದ ಮತ್ತು ಸಾಧಿಸಬಹುದಾದ ಅನೇಕ ಆರ್ಥಿಕ ಕ್ರಿಯೆಗಳೇ ಸಾಮರ್ಥ್ಯ ಎನಿಸಿಕೊಳ್ಳುತ್ತದೆ. ವ್ಯಕ್ತಿಯೊಬ್ಬರ ಬದುಕನ್ನು ವಿಮರ್ಶಿಸಲು ಬಳಸಬೇಕಾದ ವಿಧಾನಗಳು ವ್ಯಕ್ತಿಯ ಬದುಕು ಹಾಗೂ ಜೀವಿಸುವ ಕ್ರಿಯೆಯ ಭಾಗವಾಗಿ ಮೌಲ್ಯಯುತವಾದ ಅನೇಕ ಕ್ರಿಯೆಗಳನ್ನು ಸಾಧಿಸುವುದಕ್ಕೆ ಹೊಂದಿರುವ ವಾಸ್ತವ ಸಾಮರ್ಥ್ಯ ಇದು ಅತ್ಯಂತ ಪ್ರಮುಖವಾದದು. ಇದಕ್ಕೆ ಸಹವರ್ತಿಯಾಗಿ ಸಾಮಾಜಿಕ ಅನುಕೂಲತೆಗಳನ್ನು ಮಾಪನ ಮಾಡಲು ಮತ್ತು ಪರಾಮರ್ಶಿಸಲು ಸಮಗ್ರ ವಿಶ್ಲೇಷಣಾ ವಿಧಾನವನ್ನು ಬಳಸಬೇಕು.

ಈ ವಿಷಯವಾಗಿ ಕಳೆದ ಒಂದು ದಶಕದಿಂದಲೂ ಸಾಮರ್ಥ್ಯಗಳ ವಿಶ್ಲೇಷಣೆ ಅನ್ವಯಿಕ ಬಳಕೆ ಮತ್ತು ವಿಸ್ತರಣೆ ಪ್ರಯತ್ನಗಳು ನಡೆದಿವೆ. ಇದು ನಿಜಕ್ಕೂ ಒಂದೆಡೆ ಸೇನ್‌ಗೆ ಸಂತೋಷ ತೃಪ್ತಿ ಗೌರವ ತಂದಿದೆ. ಇನ್ನೊಂದೆಡೆ ಅದು ತನ್ನ ವಿಶ್ಲೇಷಣೆಯನ್ನು ಇನ್ನಷ್ಟು ವಿಸ್ತರಿಸಲು ವೈಜ್ಞಾನಿಕಗೊಳಿಸಲು, ಉಪಯುಕ್ತಗೊಳಿಸಲು ಸೇನ್‌ಗೆ ಅವಕಾಶ ಸಿಕ್ಕಿದೆ, ಈ ಮಹತ್ವಕಾರ್ಯದಲ್ಲಿ ತೊಡಗಿದ್ದಾರೆ.

ಸಾಮರ್ಥ್ಯಗಳ ವಿಶ್ಲೇಷಣೆಯ ಬಳಕೆ ಅನುಕೂಲತೆಗಳಿಂದ ಅದರ ಸಂಕಷ್ಟಗಳು ಹೆಚ್ಚು ಪಾರದರ್ಶಕವಾಗುತ್ತಿದೆ ಎಂದು ಸೇನ್ ತಿಳಿಸಿದ್ದಾರೆ. ಅದ್ದರಿಂದ ಇಡೀ ವಿಶ್ಲೇಷಣೆಯನ್ನು ಹೆಚ್ಚು ಸ್ಪಷ್ಟಪಡಿಸಬೇಕು. ಇಡೀ ವಿಶ್ಲೇಷಣೆ ವಿಭಿನ್ನ ಅಂಶಗಳ ನಡುವೆ ಅಂತರ್‌ಸಂಬಂಧ ಮೂಲಕ ಬೆಸೆಯುತ್ತಿದೆ. ಈ ಮೂಲಕ ಮಾನವ ಸಾಮರ್ಥ್ಯಗಳ ವಿಧಾನಗಳ ಮೂಲಕ ಸಮಸ್ಯೆಗಳನ್ನು ಪರಿಹರಿಸಲು ಪ್ರಯತ್ನಿಸಲಾಗಿದೆ.

## ಲಿಂಗ ಅಸಮಾನತೆಯ ದೃಷ್ಟಿಕೋನಗಳು

ಅಮರ್ತ್ಯ ಸೇನ್ ಅವರ ಪ್ರಮುಖ ಪರಿಕಲ್ಪನೆ ಲಿಂಗ ಅಸಮಾನತೆ ೨೦೦೧ರಲ್ಲಿ ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿ ಅವರು ನೀಡಿದ ಉಪನ್ಯಾಸವು ಲಿಂಗ ಅಸಮಾನತೆಯನ್ನು ಕುರಿತಿರುವುದು

ಮುಖ್ಯವಾಗಿದೆ. ಭಾರತದಲ್ಲಾಗುವ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಭಜನೆಯೊಂದನ್ನು ಸೇನ್ ಗುರುತಿಸಿದ್ದಾರೆ. ಹೆಣ್ಣು ಶಿಶುವಿನ ಭ್ರೂಣಾವವಸ್ಥೆ ಮತ್ತು ನಂತರದ ಗರ್ಭ ಕುರಿತ ಎರಡು ಭಾಗವಾಗಿ ವಿಭಜಿಸಿ ಅಮರ್ತ್ಯ ಸೇನ್ ವಾದಿಸಿದ್ದಾರೆ. ಲಿಂಗ ಅಸಮಾನತೆಯನ್ನು ತೊಡೆದು ಹಾಕಲು ಹೊಸ ಬಗೆಯ ಆಲೋಚನೆಗಳನ್ನು ರೂಪಿಸಬೇಕು. ಈ ಹಿನ್ನೆಲೆಯಲ್ಲಿ ಲಿಂಗ ಅಸಮಾನತೆಗಳಲ್ಲಿ ಏಳು ಮುಖ್ಯ ಹಂತಗಳಲ್ಲಿ ವಿವರಿಸಿದ್ದಾರೆ.

ಸದಾ ಮಹಿಳೆಯರನ್ನು ಪುರುಷ ವ್ಯವಸ್ಥೆ ಶೋಷಣೆ ಮಾಡುತ್ತಾ ಬಂದಿದೆ. ಇಂಥ ಕ್ರೂರ ವ್ಯವಸ್ಥೆಗೆ ಇತಿಶ್ರೀ ಹಾಡಬೇಕಾಗಿದೆ. ಮುಂದುವರೆದ-ಮುಂದುವರೆಯುತ್ತಿರುವ ಮತ್ತು ಹಿಂದುಳಿದ ದೇಶಗಳಲ್ಲಿ ಲಿಂಗ ಆಧಾರದ ತಾರತಮ್ಯ ಇದ್ದೇ ಇದೆ. ಇದನ್ನು ಸರಿಪಡಿಸಲು ಅವರು ಏಳು ಬಗೆಯ ಲಿಂಗ ಅಸಮಾನತೆಗಳನ್ನು ಗುರುತಿಸಿ ವಿಶ್ಲೇಷಿಸಿದ್ದಾರೆ. ಅವುಗಳೆಂದರೆ-

**ಮರಣ ಅಸಮಾನತೆ:** ಲಿಂಗದ ಆಧಾರದ ಮೇಲೆ ಜಗತ್ತಿನ ಒಂದೊಂದು ದೇಶವು ಬೇರೆ-ಬೇರೆಯಾಗಿವೆ. ಹೀಗಾಗಿ ಪುರುಷ ಮತ್ತು ಮಹಿಳೆ ನಡುವೆ ಜೀವನ ಮತ್ತು ಮರಣದ ವಿಷಯದಲ್ಲಿ ಅಸಮಾನತೆ ನೆಲೆಸಿಕೊಂಡಿದೆ. ಪುರುಷರಿಗೆ ಹೋಲಿಸಿದರೆ ಮಹಿಳೆಯರ ಮರಣವು ಅಧಿಕವಾಗಿದೆ. ಜನಸಂಖ್ಯೆಯಲ್ಲಿ ಪುರುಷರು ಅಧಿಕ ಸಂಖ್ಯೆಯಲ್ಲಿದ್ದಾರೆ. ಮಹಿಳೆಯರ ಸಂಖ್ಯೆ ಕಡಿಮೆ ಇದೆ. ಮಹಿಳೆಯರಿಗೆ ಸಮತೋಲನವಾದ ಪೌಷ್ಠಿಕ ಪೋಷಕಾಂಶಗಳು ಉತ್ತಮ ಪ್ರಮಾಣದಲ್ಲಿ ಲಭ್ಯವಿರುವ ದೇಶಗಳಲ್ಲಿ ಮಹಿಳೆಯರ ಮರಣ ಪ್ರಮಾಣ ಕಡಿಮೆ ಇದೆ. ಆದರೆ ಏಷ್ಯಾ ಖಂಡದ ದೇಶಗಳಲ್ಲಿ ಹೆಚ್ಚು ಗುಂಪು ಗುಂಪಾಗಿ ಬದುಕುತ್ತಿರುವ ಜನಸಂಖ್ಯಾ ದೇಶಗಳಾದ ಚೀನಾ, ದಕ್ಷಿಣ ಏಷ್ಯಾ, ಉತ್ತರ ಅಮೇರಿಕಾದಲ್ಲಿ ಮರಣ ಅಸಮಾನತೆ ಕಾಣಬಹುದು.

**ಭ್ರೂಣಾವಸ್ಥೆ ಅಸಮಾನತೆ:** ಮೂಢನಂಬಿಕೆ ಮತ್ತು ಪೂರ್ವಜನ್ಮದ ಕರ್ಮಸಿದ್ಧಾಂತ ಅಡಿಪಾಯದಲ್ಲಿರುವ ದೇಶಗಳಲ್ಲಿ ದೇವರು, ದೆವ್ವ, ಕಂದಾಚಾರ ಎನ್ನುವ ನಂಬಿಕೆಯಲ್ಲಿರುವ ಜನ ವಿಶೇಷವಾಗಿ ಗಂಡು ಸಂತಾನವನ್ನು ಪಡೆಯಲು ಇಚ್ಛಿಸುತ್ತಾರೆ. ಗಂಡು ಸಂತಾನವಿಲ್ಲದಿದ್ದರೆ ಮುಕ್ತಿಯೇ ದೊರೆಯುವುದಿಲ್ಲ ಎಂಬ ಅಜ್ಞಾನ ಜಾಸ್ತಿಯಿರುತ್ತದೆ. ಸಾಮಾನ್ಯವಾಗಿ ತಂದೆ-ತಾಯಿಗಳು ಆರಂಭದ ಶಿಶುವು ಗಂಡಾಗಬೇಕೆಂದು ಹಂಬಲಿಸುವರು. ಈ ಮೂಲಕ ಮಗು ಭ್ರೂಣಾವಸ್ಥೆಯಲ್ಲಿರುವಾಗಲೇ ಲಿಂಗಅಸಮಾನತೆ ಭಾವನೆಯು ತಂದೆ-ತಾಯಿಗಳಲ್ಲಿ ಮೊಳೆತು ಕ್ರಮೇಣ ಹೆಮ್ಮರವಾಗತೊಡಗುತ್ತದೆ. ಈ ಹಿಂದೆ ತಂದೆ-ತಾಯಿಗಳ ಭ್ರೂಣದ ಲಿಂಗ ಕುರಿತು ಊಹಾ ಪೋಹಗಳಲ್ಲಿ ತೊಡಗುತ್ತಾರೆ. ಅಲ್ಲದೆ ಇವರು ಹಗಲುಗನಸು ಕಾಣುತ್ತಾರೆ.

ಆದರೆ, ಈಗ ಭ್ರೂಣದ ಲಿಂಗ ಪತ್ತೆ ಹಚ್ಚುವ ಆಧುನಿಕ ವೈದ್ಯಕೀಯ ತಂತ್ರಜ್ಞಾನ ಲಭ್ಯವಿದೆ. (ಆದರೆ ಇಂದು ಕಾನೂನು ಅನುಮತಿಸುವುದಿಲ್ಲ) ಪರಿಣಾಮವಾಗಿ ಹುಟ್ಟಲಿರುವ ಮಗು ಹೆಣ್ಣೆಂದು ಖಚಿತವಾದ ಕೂಡಲೇ ತಂದೆ-ತಾಯಿಗಳು ಲಿಂಗ ಆಯ್ಕೆ ಗರ್ಭಪಾತಕ್ಕೆ ಮೊರೆ ಹೋಗತೊಡಗಿದ್ದಾರೆ. ಇಂದು ಬಹುತೇಕ ದೇಶಗಳಲ್ಲಿ ಈ ವಿಧಾನ ಜಾರಿಯಲ್ಲಿದೆ. ಹೆಣ್ಣು ಶಿಶುವಿನ ಭ್ರೂಣ ಹತ್ಯೆಯು

ಪೂರ್ವ ಏಷ್ಯಾ ಖಂಡದ ಚೀನಾ ಮತ್ತು ದಕ್ಷಿಣ ಕೊರಿಯಾದಲ್ಲಿದೆ. ಸಿಂಗಾಪುರ ಮತ್ತು ತೈವಾನ್‌ನಲ್ಲೂ ವ್ಯಾಪಕವಾಗಿದೆ. ಇಂತಹ ಸಂಗತಿಗಳು ಲಿಂಗ ಅನುಪಾತದಲ್ಲಿ ವ್ಯತ್ಯಾಸವಾದರೆ, ಪುರುಷರ ಸಂಖ್ಯೆ ಹೆಚ್ಚಾಗಿ ಸ್ತ್ರೀಯರ ಸಂಖ್ಯೆ ಕಡಿಮೆಯಾಗಿದೆ. ಸ್ತ್ರೀ-ಪುರುಷ ಅನುಪಾತ ವ್ಯತ್ಯಾಸವಾದರೆ ಸಮಾಜದಲ್ಲಿ ಅನೀತಿ ಮತ್ತು ಅತ್ಯಾಚಾರಗಳು ಸಂಭವಿಸುತ್ತವೆ. ಇವು ಸಮಾಜದಲ್ಲಿ ಆಘಾತಕಾರಿ ಘಟನೆಗಳಿಗೆ ದಾರಿ ಮಾಡಿಕೊಟ್ಟಿರುವುದರ ಜೊತೆಗೆ ಆರ್ಥಿಕ ತಲ್ಲಣಗಳು ಗೋಚರಿಸುತ್ತವೆ.

ಆಘಾತಕಾರಿ ಚಟುವಟಿಕೆಗಳಾದ ಹಸಿವು-ದಾರಿದ್ಯ-ಬಡತನ-ನಿರುದ್ಯೋಗ ಜನರನ್ನು ಬಾಧಿಸುತ್ತದೆ. ಇದನ್ನು ತಡೆಯಲಾರದೆ ಅನ್ಯಮಾರ್ಗವನ್ನು ಜನ ತುಳಿಯುತ್ತಾರೆ. ಅದರಲ್ಲೂ ವಿಶೇಷವಾಗಿ ಸ್ತ್ರೀ ಸಂಖ್ಯೆ ಕಡಿಮೆ ಇರುವ ಹಿನ್ನೆಲೆಯಲ್ಲಿ ಪುರುಷ ಪ್ರಧಾನ ವ್ಯವಸ್ಥೆಯು ಸ್ತ್ರೀ ಶೋಷಣೆಗೆ ಮುಂದೆ ಬರುತ್ತದೆ. ಸ್ತ್ರೀಯರ ಮೇಲೆ ಹಲ್ಲೆ, ದೌರ್ಜನ್ಯ ಅತ್ಯಾಚಾರ ಪ್ರಸಂಗಗಳು ನಡೆಯುತ್ತಿರುವುದರಿಂದ ಹೆಣ್ಣು ಅಸಹಾಯಕಳಾಗಿ ಬುದ್ಧಿ ವಿಕಲ್ಪಕ್ಕೆ ಒಳಗಾಗಬಹುದು. ಈ ರೀತಿಯ ಶೋಷಣೆಯ ಆಘಾತಕಾರಿ ಘಟನೆಗಳು ಘಟಿಸುತ್ತಾ ಸಮಾಜದ ಅಸ್ತಿತ್ವಕ್ಕೆ ಭಂಗ ಬರುವ ವಾತಾವರಣಕ್ಕೆ ದಾರಿಯಾಗುತ್ತದೆ. ಈ ಅಮಾನವೀಯ ವಿಷಕಾರಿ ಪ್ರವೃತ್ತಿಯ ಭಾರತದ ಮತ್ತು ದಕ್ಷಿಣ ಏಷ್ಯಾದಲ್ಲೂ ಗಮನಾರ್ಹವಾಗಿ ಇತ್ತೀಚೆಗೆ ಹೆಚ್ಚುತ್ತದೆ. ಇದಕ್ಕೆ ಹೈಟೆಕ್ ಲಿಂಗ ತಾರತಮ್ಯವೇ ಪ್ರಮುಖ ಅಂಶವಾಗಿದೆ. ಈ ಅಮಾನವೀಯ ವಿಷಕಾರಿ ಪ್ರವೃತ್ತಿಯು ಭಾರತದ ಮತ್ತು ದಕ್ಷಿಣ ಏಷ್ಯಾದಲ್ಲೂ ಗಮನಾರ್ಹವಾಗಿ ಇತ್ತೀಚೆಗೆ ಹೆಚ್ಚುತ್ತಿದೆ. ಇದು ಹೈಟೆಕ್ ಲಿಂಗ ತಾರತಮ್ಯ ಆಗಿದೆ ಅಲ್ಲದೆ, ಲೈಂಗಿಕ ರೋಗಗಳು ಸಮಾಜ ಮತ್ತು ಆರ್ಥಿಕ ಸ್ಥಿತಿಯನ್ನು ನಾಶ ಮಾಡುತ್ತದೆ.

**ಮೂಲಭೂತ ಸೌಲಭ್ಯ ಅಸಮಾನತೆ:** ಯುಗ ಯುಗಾಂತರದಿಂದಲೂ ಜಗತ್ತಿನಲ್ಲಿ ಮಹಿಳೆಯರ ಬಗ್ಗೆ ತಾರತಮ್ಯವಿದೆ. ಮಹಿಳೆಯರ ವಿರುದ್ಧ ತಾರತಮ್ಯಗಳನ್ನು ಅದು ಬೇರೆ ರೀತಿಗಳಲ್ಲಿ ಅನುಸರಿಸಲಾಗುತ್ತಿದೆ. ಹೆಣ್ಣಿಗೆ ಒಂದೊಂದು ದೇಶದಲ್ಲಿ ಒಂದೊಂದು ಸ್ಥಾನ ಲಭಿಸಿದೆ. ತಾಯಿಸ್ಥಾನ, ಹೆಂಡತಿಸ್ಥಾನ, ಸಹೋದರಿಯಸ್ಥಾನ, ಧೀರ ಮಹಿಳೆಯರ ಸ್ಥಾನ, ಉತ್ತಮ ದಾದಿಯಸ್ಥಾನ, ಪ್ರೇಯಸಿಸ್ಥಾನ ಹೀಗೆ ಏನೆಲ್ಲಾ ಕರೆಯುತ್ತಿದ್ದರು. ಜಗತ್ತಿನಲ್ಲಿ ಕೆಲವು ದೇಶಗಳಲ್ಲಿ ಇಂದು ಕೂಡ ಶೋಷಣೆಗೆ ಹೆಣ್ಣು ಬಲಿಯಾಗಿದ್ದಾಳೆ ಎಂಬುದರ ಉದಾಹರಣೆಯನ್ನು ಗಮನಿಸಬಹುದು. ಅಫ್‌ಘಾನಿಸ್ತಾನದ ಹಿಂದಿನ ತಾಲಿಬಾನ್ ಸರಕಾರವು ಶಾಲೆಗಳಿಂದ ಹೆಣ್ಣುಮಕ್ಕಳನ್ನು ಹೊರದೂಡಿದೆ (ಪಾಕಿಸ್ತಾನದ ಮಲಾಲ ಹೋರಾಟ). ಇಂಥ ಸರಕಾರಗಳು ಪ್ರಪಂಚದ ಅಫಘಾನ್ ಮಹಿಳೆಯರಿಗೆ ಎಲ್ಲಾ ಬಗೆಯ ನಾಗರಿಕ ಮಾನವ ಹಕ್ಕುಗಳನ್ನು ನಿರಾಕರಿಸಲಾಗಿತ್ತು. ಆದರೆ ಆಫ್ರಿಕಾ ಮತ್ತು ಲ್ಯಾಟಿನ್ ಅಮೇರಿಕಾದ ಆನೇಕ ದೇಶಗಳಲ್ಲಿ ಹುಡುಗರಿಗಿಂತ ಹುಡುಗಿಯರಿಗೆ ಶಾಲೆಗೆ ಅವಕಾಶಗಳು ಕಡಿಮೆ. ಮಹಿಳೆಯರಿಗೆ ಲಭ್ಯವಿರುವ ಮೂಲಭೂತ ಸೌಲಭ್ಯಗಳಲ್ಲಿ ಅನೇಕ ಕೊರತೆಗಳಿವೆ. ಈ ಕೊರತೆಯನ್ನು ಪರಿಹರಿಸಲು ಆಧುನಿಕ ಸರಕಾರಗಳು ವಿಶೇಷ ಮೂಲಭೂತ ಸೌಲಭ್ಯ ಒದಗಿಸುವುದರ ಮೂಲಕ ಅಸಮಾನತೆಯನ್ನು ತೊಲಗಿಸಬೇಕು. "ಹೆಣ್ಣು ಕಲಿತರೆ ಶಾಲೆ ತೆರೆದಂತೆ" ಎಂಬಂತೆ ಕುಟುಂಬದಲ್ಲಿ ಹೆಣ್ಣು ಕಲಿತರೆ ಕುಟುಂಬದ ಘನತೆ ಹೆಚ್ಚುತ್ತದೆ.

**ವಿಶೇಷ ಅವಕಾಶ ಅಸಮಾನತೆ:** ಶಾಲೆ ಸೇರಿದಂತೆ ಮೂಲಭೂತ ಸೌಲಭ್ಯಗಳಲ್ಲಿ ಪುರುಷರಿಗೆ ಹೋಲಿಸಿದರೆ ಮಹಿಳೆಗೆ ದೊರಕುವ ಉನ್ನತ ಶಿಕ್ಷಣ ಅವಕಾಶಗಳು ಅತ್ಯಲ್ಪವೇ ಆಗಿವೆ. ವಾಸ್ತವದಲ್ಲಿ ಪ್ರಪಂಚದ ಶ್ರೀಮಂತ ಯುರೋಪಿಯನ್ ವೃತ್ತಿಪರ ತರಬೇತಿಯಲ್ಲಿ ಲಿಂಗ ಪೂರ್ವಗ್ರಹವಿದೆ. ಇಂಥ ವಿಭಜನೆಗಳು ಕೆಲವೊಮ್ಮೆ ಪುರುಷ ಮತ್ತು ಮಹಿಳೆಯ ಕಾರ್ಯಕ್ಷೇತ್ರಗಳು ಅನುಕ್ರಮವಾಗಿ ವಿಭಿನ್ನ ಎಂಬ ಕೃತಕ ದೃಷ್ಟಿಕೋನವನ್ನು ಆಧರಿಸಿವೆ. ಹೀಗೆ ಆನೇಕ ಶತಮಾನಗಳಿಂದಲೂ ಯುರೋಪ್ ಮತ್ತು ಉತ್ತರ ಅಮೇರಿಕಾ ಸೇರಿದಂತೆ ಆನೇಕ ದೇಶಗಳಲ್ಲಿ ಶಿಕ್ಷಣ, ತರಬೇತಿ ಮತ್ತು ವೃತ್ತಿಪರ ದುಡಿಮೆ ಮುಂತಾದ ಹಲವು ಕ್ಷೇತ್ರಗಳಲ್ಲಿ ಲಿಂಗ ಅಸಮಾನತೆಗಳು ಮುಂದುವರಿದುಕೊಂಡು ಬಂದಿವೆ.

ಲಿಂಗ ಅಸಮಾನತೆ ತೊಲಗಬೇಕು, ಕಲಿಕೆಯ ಅವಕಾಶಗಳು ಸೃಷ್ಟಿಯಾಗಬೇಕು. ವಿಜ್ಞಾನ, ಕಲೆ, ತಂತ್ರಜ್ಞಾನ, ವೈದ್ಯಕೀಯ ಕ್ಷೇತ್ರಗಳಲ್ಲಿ ಮಹಿಳೆಯರಿಗೆ ವಿಶೇಷ ಅವಕಾಶ ಸಿಗಬೇಕು. ಜ್ಯೋತಿಬಾ ಫುಲೆ, ಸಾವಿತ್ರಿ ಫುಲೆ ದಂಪತಿಗಳು ಸ್ತ್ರೀ ಮತ್ತು ಅಬಲೆಯರ ಶಿಕ್ಷಣ ಹಾಗೂ ರಕ್ಷಣೆಗೆ ಮಾರ್ಗೋಪಾಯಗಳನ್ನು ಕಂಡುಹಿಡಿದು ಮೊದಲು ಶೋಷಿತ ಗುರುಗಳಾಗಿದ್ದವರು. ಅವರ ಮಾರ್ಗ ಇಂದು ಮುಂದುವರೆದಿದೆ. ೧೯೮೦ರ ತರುವಾಯ ಭಾರತವೇ ಅಲ್ಲ ಸಿಲೋನ್, ಇಂಗ್ಲೆಂಡ್ ಪಾಕಿಸ್ತಾನ, ಭಾರತದಲ್ಲಿ ಮಹಿಳೆಯರು ಪ್ರಧಾನಿಗಳಾಗಿದ್ದರು. ಭಾರತದಲ್ಲಿ ಶ್ರೀಮತಿ ಇಂದಿರಗಾಂಧಿಯವರು ಪ್ರಧಾನಿಯಾಗಿದ್ದರೂ ಸ್ತ್ರೀಯರಿಗೆ ಅಲ್ಪಸ್ವಲ್ಪ ಸಹಕಾರಿಯಾಯಿತು. ಆದರೆ ಪರಿಣಾಮಕಾರಿಯಾಗಿರಲಿಲ್ಲ. ೧೯೮೦ರ ತರುವಾಯ ಆಡಳಿತ, ರಾಜಕೀಯ ಮತ್ತು ಬ್ಯೂರೋಕ್ರಸಿಯಲ್ಲಿ ಅವಕಾಶಗಳು ಮುಕ್ತವಾಗಿವೆ. ವಿಶೇಷ ಅವಕಾಶ ಸಮಾನತೆ ಸಿಗುವ ದಿಕ್ಕಿನಲ್ಲಿ ನಮ್ಮ ಆರ್ಥಿಕ ನಡೆಗೆ ಸ್ತ್ರೀಯರ ಪಾತ್ರ ಮುಖ್ಯವಾಗಿದೆ. ಸರ್ಕಾರಿ ನೌಕರಿಯಲ್ಲಿ ಶೇ. ೩೩ರಷ್ಟು ಅವಕಾಶಗಳು ಲಭಿಸಿದರೆ ಸ್ತ್ರೀ ವಿಮೋಚನೆಯೇ ಆರ್ಥಿಕ ಕ್ಷೇತ್ರದಲ್ಲಿ ಮುಕ್ತವಾಗುತ್ತದೆ. ಇತ್ತೀಚೆಗೆ ರಾಜಕಾರಣದಲ್ಲಿಯೂ ಕೂಡ ಸ್ತ್ರೀ ಶೇ. ೩೩% ಮೀಸಲಾತಿ ನೀಡುವ ಬಿಲ್ಲು ಚರ್ಚೆಗೆ ಬರುತ್ತಿದೆ. ಅದು ಬಂದರೆ ಅಂಬೇಡ್ಕರ್ ಸಿದ್ಧಾಂತಕ್ಕೆ ಗೌರವ ದಕ್ಕಿದಂತಾಗುತ್ತದೆ. ಜೊತೆಗೆ ಬಸವಣ್ಣ ಮತ್ತು ಬುದ್ಧರ ಆಶಯ ಈಡೇರಿದಂತಾಗುತ್ತದೆ

**ವೃತ್ತಿಪರ ಅಸಮಾನತೆ:** ಉದ್ಯೋಗ ಮತ್ತು ಸ್ಥಾನೀಕರಣ ದೃಷ್ಟಿಯಿಂದ ದುಡಿಮೆ ಮತ್ತು ವೃತ್ತಿಯಲ್ಲಿ ಮಹಿಳೆಯರು ಪುರುಷರಿಗಿಂತ ಹೆಚ್ಚು ಸಂಕಷ್ಟಗಳನ್ನು ಅನುಭವಿಸುವರು ಜಪಾನ್‌ನಂಥ ದೇಶವೊಂದು ಜನಸಂಖ್ಯೆ ಮತ್ತು ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವುದರಲ್ಲಿ, ಉನ್ನತ ಶಿಕ್ಷಣ ನೀಡುವುದರಲ್ಲಿ ಹೆಚ್ಚು-ಹೆಚ್ಚು ಸಮಾನವಾಗಿ ಉಭಯ ಲಿಂಗಿಗಳಲ್ಲೂ ಕಾಣುತ್ತಿರಬಹುದು. ಆದರೆ ಜಪಾನಿನಲ್ಲೂ ಉದ್ಯೋಗ ಮತ್ತು ಸ್ಥಾನೀಕರಣ ವಿಷಯಕ್ಕೆ ಬಂದಾಗ ಮಹಿಳೆಯರು ಪುರುಷರಿಗಿಂತ ಹೆಚ್ಚು ತಾರತಮ್ಯಗಳನ್ನು, ಕಷ್ಟ ಕಾರ್ಪಣ್ಯಗಳನ್ನು ಎದುರಿಸುತ್ತಿರುದುಂಟು.

ಜಪಾನ್ ಪುಟ್ಟ ದೇಶ. ಕೈಗಾರಿಕೆಯಲ್ಲಿ ತನ್ನದೇ ಆದ ಗುರುತು ಪಾತ್ರವನ್ನು ಹೊಂದಿದೆ. ಬುದ್ಧನ ನೆಲೆಬೀಡು; ಆದರೆ ಸ್ತ್ರೀ ಸಮಾನತೆಗೆ ಬೆನ್ನು ತೋರಿದೆ. ಇದನ್ನು ಸರಿಪಡಿಸದ ಹೊರತು ವೃತ್ತಿಪರ ಅಸಮಾನತೆಗೆ ನ್ಯಾಯ ಸಿಗುವುದಿಲ್ಲ. ಬದಲಾಗಿರುವ ಸನ್ನಿವೇಶಕ್ಕೆ ಸರಿಯಾಗಿ ಮುಂದೆ ಸಾಗಬೇಕಿದೆ. ಚೀನಾ ದೇಶದಲ್ಲಿ ಸ್ತ್ರೀಯೂ ಎಲ್ಲಾ ಕ್ಷೇತ್ರಗಳಲ್ಲಿ ಮುಂದೆ ಇದ್ದಾಳೆ. ಹೋಟೆಲ್ ಉದ್ದಿಮೆಯಲ್ಲಿಯೂ ಆಕೆಯ ಕೆಲಸವಿದೆ; ರಾತ್ರಿ ಪಾಳೆಯಲ್ಲಿ ಕೆಲಸ ಮಾಡುತ್ತಿದ್ದಾಳೆ; ಸ್ತ್ರೀ ಉದ್ಯೋಗ ಸಾಮರ್ಥ್ಯ ಹೊಂದಿದ್ದಾಳೆ.

**ಮಾಲೀಕತ್ವದ ಅಸಮಾನತೆ:** ಬಹುತೇಕ ಸಮಾಜದಲ್ಲಿ ಆಸ್ತಿ ಮಾಲೀಕತ್ವ ಕೂಡ ಹೆಚ್ಚು ಅಸಮಾನವಾಗಿಯೇ ಇದೆ. ಮೂಲಭೂತ ಆಸ್ತಿಗಳಾದ ಮನೆ ಮತ್ತು ಭೂಮಿ ಕೂಡ ವ್ಯಾಪಕವಾಗಿ ಅಸಮಾನವಾಗಿ ಹಂಚಿಕೆಯಾಗಿದೆ. ಈ ಆಸ್ತಿಯಲ್ಲಿ ಮಹಿಳೆಗೆ ಪಾಲು ಇಲ್ಲದ ಸ್ಥಿತಿ ಇದೆ. ಆಸ್ತಿ ಹಕ್ಕುಗಳಿಲ್ಲದಿರುವಿಕೆಯು ಮಹಿಳೆಯ ಬದುಕನ್ನು ದುರ್ಬಲಗೊಳಿಸುವುದಲ್ಲದೆ, ವಾಣಿಜ್ಯ, ಆರ್ಥಿಕ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ಮಹಿಳೆಯರು ಪ್ರವೇಶಿಸಿ ಅಭಿವೃದ್ಧಿಗೊಳ್ಳುವುದು ಕಠಿಣವಾಗಿದೆ.

ಈ ವಿಷಯದಲ್ಲಿ ಸ್ಥಳೀಯ ವ್ಯತ್ಯಾಸಗಳಿದ್ದರೂ ಮಹಿಳೆಗೆ ಆಸ್ತಿ ನಿರಾಕರಣ ಹಾಗೂ ಆಸ್ತಿ ಹಂಚಿಕೆ ಅಸಮಾನತೆಯು ವಿಶ್ವದಾದ್ಯಂತ ಬಹುಮಟ್ಟಿಗೆ ಅಸ್ತಿತ್ವದಲ್ಲಿ ಈಗಲೂ ಇದೆ. ಉದಾಹರಣೆಗೆ ಭಾರತದ ಬಹುತೇಕ ಕಡೆಗಳಲ್ಲಿ ಸಾಂಪ್ರದಾಯಕ ಆಸ್ತಿ ಹಕ್ಕುಗಳು ಪುರುಷರ ಪರವಾಗಿಯೇ ಇದೆ. ಆದರೆ ಕೇರಳ ರಾಜ್ಯದ ಪ್ರಭಾವಶಾಲಿ ಸಮುದಾಯವಾದ ನಾಯರ್‌ಗಳಲ್ಲಿ ಆಸ್ತಿ ಹಕ್ಕು ಅನುವಂಶೀಯ ವಾಗಿ ಮಾತೃ ಪ್ರಧಾನವಾಗಿದ್ದು, ಮಹಿಳೆಗೆ ದೊರಕುತ್ತಿತ್ತು. ಇಂಥ ಮಹಿಳಾ ಆಸ್ತಿ ಹಕ್ಕು ಅನುವಂಶೀಯತೆಯನ್ನು ಕರ್ನಾಟಕ ರಾಜ್ಯದ ಇಂದಿನ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ಬಂಟರು ಮತ್ತು ಪೂಜಾರಿ ಎಂಬ ಭೂಮಾಲೀಕ ಹಾಗೂ ಗೇಣಿದಾರ ಸಾಮಾಜಿಕ ವರ್ಗಗಳಲ್ಲೂ ಕಾಣಬಹುದಾಗಿದೆ.

**ಕುಟುಂಬ ಅಸಮಾನತೆ:** ಕುಟುಂಬದೊಳಗೆ ಲಿಂಗ ಸಂಬಂಧಗಳಲ್ಲಿ ಮೂಲಭೂತ ಅಸಮಾನತೆಗಳು ಸರ್ವೇಸಾಮಾನ್ಯವಾಗಿದೆ. ಅವುಗಳು ಆನೇಕ ರೂಪಗಳಲ್ಲಿ ತಲೆಯೆತ್ತಿವೆ. ಶಿಶು ಬದುಕುಳಿಯುವ ಸಾಧ್ಯತೆ ಅಥವಾ ಪುತ್ರಪ್ರೇಮ ಹಾಗೂ ಶಿಕ್ಷಣ ಅಥವಾ ಉನ್ನತ ಹುದ್ದೆಗಳಿಗೆ ಮಹಿಳೆಯರ ಪ್ರವೇಶ ಮುಂತಾದ ಮಹಿಳಾ ವಿರೋಧಿ ಪೂರ್ವಾಗ್ರಹವಿಲ್ಲದಿರುವೆಡೆಗಳಲ್ಲೂ ಮನೆಗೆಲಸ ಮತ್ತು ಲಾಲನೆ-ಪಾಲನೆ ಜವಾಬ್ದಾರಿಯನ್ನು ಹಂಚಿಕೊಳ್ಳುವುದರಲ್ಲಿ ಅಸಮಾನತೆಗಳು ಇವೆ.

ಅಮರ್ತ್ಯ ಸೇನ್ ೨೦೦೧ರ ಹಾರ್ವರ್ಡ್ ಉಪನ್ಯಾಸದಲ್ಲಿ ವಿಶೇಷವಾಗಿ ಮರಣ ಅಸಮಾನತೆ ಮತ್ತು ಭ್ರೂಣ ಅಸಮಾನತೆ ಕುರಿತು ವಿವರಿಸಿರುವರು. ಎಲ್ಲ ದೇಶಗಳ ಸಂದರ್ಭದಲ್ಲೂ ಎಲ್ಲ ತರಹದ ಲಿಂಗ ಅಸಮಾನತೆಗಳು ಎದ್ದು ತೋರುವುದಿಲ್ಲ; ಬೇರೆ-ಬೇರೆ ದೇಶಗಳು ವಿಭಿನ್ನ ಲಿಂಗ ಅಸಮಾನತೆ ಸಂಬಂಧಿ ಸಮಸ್ಯೆಗಳನ್ನು ಎದುರಿಸುತ್ತಿವೆ.

ಅವರು ಈ ಸಂಬಂಧವಾಗಿ ವೈಜ್ಞಾನಿಕವಾಗಿ ಅಧ್ಯಯನಗಳಾಗಬೇಕೆಂದು ಹೇಳಿದ್ದಾರೆ.

೧. ಹುಡುಗರಿಗೆ ಹೋಲಿಸಿದಂತೆ ಹುಡುಗಿಯರ ಆಹಾರ ಕೊರತೆ ಸಮಸ್ಯೆ

೨. ಗರ್ಭಿಣಿಯರ ಆಹಾರ ಕೊರತೆ

೩. ಅಲ್ಪ ಜನನ ತೂಕದ(ನವಜಾತ ಶಿಶುಗಳ) ಅಸ್ತಿತ್ವ

೪. ಮಹಿಳೆಯರ ಹೃದಯ ಬೇನೆಗಳು

೫. ಪೌಷ್ಟಿಕ ಆಹಾರದ ಕೊರತೆ

೬. ಋತುಚಕ್ರದ ಸಮಸ್ಯೆ

೭. ಬಾಲ್ಯ ವಿವಾಹಗಳು ಸಂಸಾರದ ಬಂಧನದಲ್ಲಿ ಮುಳುಗಿರುವುದರಿಂದ ಬೇಗ ಮುಪ್ಪು ಆವರಿಸುವಂತೆ ಕಾಣವುದು

೮. ಬಾಲ್ಯವಿವಾಹಗಳಿಂದ ಶರೀರ ನಲುಗುವುದು.

ಸೇನ್ ಕಲ್ಯಾಣ ಆರ್ಥಿಕ ಚಿಂತಕರಾಗಿದ್ದು ಸಾಮಾಜಿಕ ಅಭಿವೃದ್ಧಿ ಗಮನಿಸಿದ ಪೆರಟೋರವರ ಚಿಂತನೆಯನ್ನು ತಮ್ಮದೇ ಆದ ಆರ್ಥಿಕ ಆಂಶಗಳ ಮೂಲಕ ವಿಶ್ಲೇಷಿಸಿದ್ದಾರೆ.

೧. ಸಣ್ಣ ಆರ್ಥಿಕ ಹಿಡುವಳಿಗಳಲ್ಲಿ ರೈತನು ಹೆಚ್ಚು ದುಡಿದರೆ ಬೃಹತ್ ಹಿಡುವಳಿಗಿಂತ ಹೆಚ್ಚು ದಕ್ಷವಾಗುತ್ತದೆ.

೨. ಬಂಡವಾಳ ಪ್ರಮುಖ ತಂತ್ರಜ್ಞಾನ, ಭವಿಷ್ಯದ ಅನುಭೋಗದ ದೃಷ್ಟಿಯಿಂದ ಕೆಲವು ತ್ಯಾಗವನ್ನು ಹೊಂದಿರುತ್ತದೆ. ಈ ವಿಷಯವನ್ನು ಸೇನ್ ಅವರ Choice of Technique ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ.

೩. ಶ್ರಮ ಆಧಾರಿತ ತಂತ್ರಜ್ಞಾನಗಳು ಮತ್ತು ಅವುಗಳ ಆನ್ವಯಿಕ ಪರಿಣಾಮಗಳನ್ನು ವಿಸ್ತಾರವಾದ ನೆಲೆಯಲ್ಲಿ ಚರ್ಚಿಸಿದ್ದಾರೆ.

೪. ಆರ್ಥಿಕ ಯೋಜನಾ ಕ್ರಿಯೆಯಲ್ಲಿ ಬಂಡವಾಳ ಸರಕುಗಳಿಗೆ ಬದಲಾಗಿ ಮೂಲಭೂತ ವಸ್ತುಗಳ ಮಹತ್ವವನ್ನು ಸೇನ್ ಅವರ ಗೆಳೆಯ ಕೆ.ಎನ್ ರಾಜ್ ಎತ್ತಿ ಹಿಡಿದ್ದಾರೆ.

ಭಾರತೀಯ ಯೋಜನೆಯಲ್ಲಿ ಶಿಕ್ಷಣದ ಆಯಾಮಗಳನ್ನು ಸಂಪೂರ್ಣ ಉಲ್ಲಂಘಿಸಲಾಗಿದೆ ಯೆಂದು ವಿಸ್ತೃತವಾಗಿ ಪ್ರತಿಪಾದಿಸಿದ್ದರೆ(ಪ್ರೊ. ಎಚ್. ಲಿಂಗಪ್ಪ, ೨೦೦೭ "ಬುದ್ಧ-ಬಸವ- ಅಮರ್ತ್ಯ ಸೇನ್ ಜನಕಲ್ಯಾಣ ಆರ್ಥಿಕ ಚಿಂತನೆಗಳು" ಎಂಬ ರಚಿಸಿರುವ ಪು. ೪೨ ಮತ್ತು ೪೮).

ಸೇನ್ ಅಭಿವೃದ್ಧಿಗಾಗಿ, ಬಡವರ ಆರ್ಥಿಕ ವಿಮೋಚನೆಗೆ ದುಡಿದಿದ್ದಾರೆ. ಹೀಗಾಗಿ ಅಭಿವೃದ್ಧಿ ಆರ್ಥಶಾಸ್ತ್ರದ ನೀತಿ ನಿರೂಪಣಾ ಸಾಮರ್ಥ್ಯಗಳು ಮತ್ತು ಸಾಮಾಜಿಕ ಉಪಯುಕ್ತತೆಗಳು ಅಪಾರವಾಗಿ

ವಿಸ್ತರಿಸಲ್ಪಟ್ಟಿವೆ. ಅದ್ದರಿಂದ ಸೇನ್ ಅವರನ್ನು ಕಲ್ಯಾಣ ಅರ್ಥಶಾಸ್ತ್ರದ ಅಥವಾ ಅಭಿವೃದ್ಧಿಗೆ ಕೊಡುಗೆಯಾಗಿ ನೋಬೆಲ್‌ಗೆ ಘನತೆ ಹೆಚ್ಚಿಸುವಂತೆ ಲಭಿಸಿರುವುದು ಆಶಾದಾಯಕ ಸಂಗತಿ.

## ೨.೬. ಉಪಸಂಹಾರ

ಈ ಎರಡನೆಯ ಅಧ್ಯಾಯದಲ್ಲಿ ದಲಿತ ಮಾನವ ಅಭಿವೃದ್ಧಿಯ ವಿವಿಧ ಆಯಾಮಗಳನ್ನು ಚರ್ಚಿಸಲಾಗಿದೆ. ಎರಡನೆಯ ಅಧ್ಯಾಯ 'ಮಾನವ ಅಭಿವೃದ್ಧಿ ಪ್ರಣಾಳಿಕೆಯ ಚಾರಿತ್ರಿಕ ಹಿನ್ನೆಲೆ'ಯಲ್ಲಿ ಅಭಿವೃದ್ಧಿಗೆ ಸಂಬಂಧಿಸಿದ ಸೈದ್ಧಾಂತಿಕ ಸಂಗತಿಗಳನ್ನು ಚರ್ಚಿಸಲಾಗಿದೆ. ಇದಲ್ಲದೆ ಮಾನವ ಅಭಿವೃದ್ಧಿ ಪ್ರಣಾಳಿಕೆ ಕುರಿತು ಈ ಹಿಂದಿನ ಅಧ್ಯಾಯದಲ್ಲಿ ಅಧ್ಯಯನಗಳ ಸಮೀಕ್ಷೆಯನ್ನು ಮಾಡಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಐತಿಹಾಸಿಕವಾಗಿ ಮಾನವ ಅಭಿವೃದ್ಧಿ ಪ್ರಣಾಳಿಕೆಯ ಮೂಲವನ್ನು ಗ್ರೀಕ್ ತತ್ವಜ್ಞಾನಿಗಳ ಬರಹಗಳಲ್ಲಿ ಗುರುತಿಸಬಹುದಾಗಿದೆ. ಅಲ್ಲಿ ಅರಿಸ್ಟಾಟಲ್ ಮುಂತಾದವರು ಅಭಿವೃದ್ಧಿಯನ್ನು ಜನರ ನೆಲೆಯಿಂದ ಪರಿಭಾವಿಸಿಕೊಳ್ಳಲು ಪ್ರಯತ್ನಿಸಿದ್ದನ್ನು ಕಾಣಬಹುದು. ಆದರೆ ಇದಕ್ಕೆ ಒಂದು ಸ್ಪಷ್ಟ ರೂಪವನ್ನು ಆಧುನಿಕ ಕಾಲದಲ್ಲಿ ಅಮರ್ತ್ಯ ಸೆನ್, ಮೆಹಬೂಬ್ ಉಲ್-ಹಕ್, ಮಾರ್ಥ ನುಸ್ ಬಮ್, ಜೀನ್ ಡ್ರೀಜ್ ಮುಂತಾದವರು ನೀಡಿದರು. ಇವರೆಲ್ಲರ ಅಭಿಮತದಂತೆ ಅಭಿವೃದ್ಧಿ ಅನ್ನುವುದು ಜನರಿಗೆ ಸಂಬಂಧಿಸಿದ ಸಂಗತಿ ಅನ್ನುವುದನ್ನು ಈ ಎರಡನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಇಲ್ಲಿ ಅಮರ್ತ್ಯ ಸೇನ್ ಮತ್ತು ಮೆಹಬೂಬ್ ಉಲ್-ಹಕ್ ಅವರು ಪ್ರತಿಪಾದಿಸಿದ ವರಮಾನ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿಗಳ ನಡುವಿನ ವ್ಯತ್ಯಾಸಗಳನ್ನು ವಿವರವಾಗಿ ಚರ್ಚಿಸಲಾಗಿದೆ. ಇದರ ಜೊತೆಗೆ ಆರ್ಥಿಕ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿಗಳ ನಡುವಿನ ಭಿನ್ನತೆಗಳನ್ನು ಗುರುತಿಸಲಾಗಿದೆ.

ಮಾನವ ಅಭಿವೃದ್ಧಿ ಪ್ರಣಾಳಿಕೆಯ ಚಾರಿತ್ರಿಕ ಬೆಳವಣಿಗೆಯಲ್ಲಿ ಅತ್ಯಂತ ಭಾವನಾತ್ಮಕ ಹಂತವೆಂದರೆ ೧೯೯೦ರಲ್ಲಿ ಮೆಹಬೂಬ್ ಉಲ್ ಹಕ್ ಅವರು ವಿಶ್ವಸಂಸ್ಥೆಯ ಯು.ಎನ್.ಡಿ.ಪಿ.ಗೆ ರೂಪಿಸಿದ ವರದಿಯನ್ನು ಕಟ್ಟಿದ ಮಾನವ ಅಭಿವೃದ್ಧಿ ಸೂಚ್ಯಂಕವಾಗಿದೆ. ಈ ಸೂಚ್ಯಂಕವನ್ನು ರೂಪಿಸಿದ ಕೀರ್ತಿ ಮೆಹಬೂಬ್ ಉಲ್ ಹಕ್ ಅವರಿಗೆ ಸಲ್ಲಬೇಕು. ಈ ಪ್ರಣಾಳಿಕೆಯ ಬೆಳವಣಿಗೆಯಲ್ಲಿ ಮತ್ತೊಂದು ಗುರುತಿಸಬೇಕಾದ ಹಂತವೆಂದರೆ ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರವನ್ನು ಗುರುತಿಸಲು ಅಭಿವೃದ್ಧಿಪಡಿಸಿದ ಲಿಂಗ ಸಂಬಂಧಿ ಅಭಿವೃದ್ಧಿ ಸೂಚ್ಯಂಕ(೧೯೯೫). ಮಾನವ ಅಭಿವೃದ್ಧಿ ಪ್ರಣಾಳಿಕೆಗೆ ಜಾಗತಿಕ ಮತ್ತು ಕಾರ್ಯನಿರ್ವಹಣಾ ರೂಪವನ್ನು ವಿಶ್ವಸಂಸ್ಥೆಯ ಯು.ಎನ್.ಡಿ.ಪಿ.ಯು. ನೀಡಿತು. ಅದು ೧೯೯೦ರಿಂದ ಪ್ರಕಟಿಸುತ್ತಿರುವ ಮಾನವ ಅಭಿವೃದ್ಧಿ ವರದಿಗಳು ಜಾಗತಿಕ ಮಟ್ಟದಲ್ಲಿ ಮಾನವ ಅಭಿವೃದ್ಧಿ ಪ್ರಣಾಳಿಕೆಗೆ ಒಂದು ಮನ್ನಣೆಯನ್ನು ದೊರಕಿಸಿಕೊಟ್ಟವು ಆ ಹಿನ್ನೆಲೆಯಲ್ಲಿ ಇಂದು ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಹೊಸ ಆಲೋಚನೆಗಳನ್ನು ಅಳವಡಿಸಿಕೊಳ್ಳುತ್ತ ಬಂದಿದೆ. ಅದನ್ನು ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಮೂರು

# ಕರ್ನಾಟಕದಲ್ಲಿ ದಲಿತ ಮಾನವ ಅಭಿವೃದ್ಧಿ

ಪೀಠಿಕೆ

ಕರ್ನಾಟಕದಲ್ಲಿ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ : ೨೦೦೫

ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಡಾ. ಚಂದ್ರ ಪೂಜಾರಿ ಅವರ ಅರ್ಥಯಾನ

ಕರ್ನಾಟಕದಲ್ಲಿ ದಲಿತ ಮಾನವ ಅಭಿವೃದ್ಧಿ ಸ್ಥಿತಿಗತಿಗಳು

ಉಪಸಂಹಾರ

ಅಧ್ಯಾಯ ಮೂರು

# ಕರ್ನಾಟಕದಲ್ಲಿ ದಲಿತ ಮಾನವ ಅಭಿವೃದ್ಧಿ

ಕರ್ನಾಟಕ ರಾಜ್ಯ, ಕರ್ನಾಟಕ ಜಿಲ್ಲೆಗಳ ಮಾನವ ಅಭಿವೃದ್ಧಿಯ ಸ್ಥಿತಿಗತಿಯನ್ನಷ್ಟೇ ತಿಳಿದು ಕೊಂಡರೆ ಸಾಲದು. ಶತ ಶತಮಾನಗಳಿಂದ ಅರಣ್ಯರೋಧನೆಯನ್ನು ಅನುಭವಿಸಿ ಎಲ್ಲ ರೀತಿಯ ತಾರತಮ್ಯಕ್ಕೆ ಒಳಗಾಗಿರುವ ವಂಚಿತ ದಲಿತರ ಅಭಿವೃದ್ಧಿಯ ಮಟ್ಟವನ್ನು ತಿಳಿದುಕೊಳ್ಳುವುದು ಕೂಡ ಮುಖ್ಯ ಸಂಗತಿಯಾಗಿದೆ. ಇಂತಹ ಒಂದು ಪ್ರಯತ್ನದ ಫಲವೇ ದಲಿತ ಮಾನವ ಅಭಿವೃದ್ಧಿ ಸೂಚಿ. ದೇಶದಲ್ಲಿಯೇ ಕರ್ನಾಟಕ ರಾಜ್ಯ ಮೊಟ್ಟಮೊದಲ ಬಾರಿಗೆ ಮಾನವ ಅಭಿವೃದ್ಧಿ ವರದಿ-೨೦೦೫ರಲ್ಲಿ ಪ್ರಕಟಿಸಿದೆ.

ರಾಜ್ಯದಲ್ಲಿ ಪರಿಶಿಷ್ಟರ ಮಾನವ ಅಭಿವೃದ್ಧಿಯ ಸ್ಥಿತಿಯು ರಾಜ್ಯದ ಮಿಕ್ಕ ಜನವರ್ಗಕ್ಕಿಂತ ದಶಕದಷ್ಟು ಹಲವು ಅವಲೋಕನಗಳ ಮೂಲಕ ಹಿಂದಿದೆ. ದಲಿತರು ಹೊಂದಿರುವ ಭೂಮಿ, ನೀರಾವರಿ, ಶಿಕ್ಷಣ, ಇತರೆ ಮೂಲಸೌಕರ್ಯಗಳಿಂದ ಹೇಗೆ ವಂಚಿತರಾಗಿರುವುದು ಕಂಡು ಬರುತ್ತದೆ. ಹೈದರಾಬಾದ್-ಕರ್ನಾಟಕ, ಮುಂಬೈ-ಕರ್ನಾಟಕ, ಹಳೆ-ಕರ್ನಾಟಕ(ಮೈಸೂರು) ಭಾಗದ ಸಾಮಾಜಿಕ-ಆರ್ಥಿಕ ಸ್ಥಿತಿಗತಿಯ ಪ್ರಭಾವಳಿಯು ಕೂಡ ಮುಖ್ಯವಾಗಿದೆ. ಆದ್ದರಿಂದ ಸಾಮಾಜಿಕ-ಆರ್ಥಿಕ ಅಭಿವೃದ್ಧಿಯಲ್ಲಿ ಹಿಂದುಳಿದಿರುವ ಅಂಶಗಳು ಕಳವಳಪಡುವಂತಹ ವಿಷಯವಾಗಿದೆ. ಆದಕಾರಣ ಪರಿಶಿಷ್ಟ ಜಾತಿ/ಪಂಗಡದವರ ಸಾಮಾನ್ಯ ಸ್ಥಿತಿಗತಿ ಒಟ್ಟು ಭಾರತದ ಸ್ಥಿತಿಗತಿಗಿಂತ ಹೇಗೆ ಉತ್ತಮವಾಗಿದೆ, ದೇಶವ್ಯಾಪ್ತಿಯ ನೆಲೆಯಲ್ಲಿ ಯಾವ ರೀತಿಯ ಆಯಾಮಗಳನ್ನು ಹೊಂದಿರು ವುದನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಹಾಗೆಯೇ ಡಾ. ಎಂ. ಚಂದ್ರ ಪೂಜಾರಿ ಅವರ ಕರ್ನಾಟಕ ದಲಿತ ಮಾನವ ಅಭಿವೃದ್ಧಿ ವರದಿ ಕುರಿತು ಚರ್ಚಿಸಲಾಗಿದೆ.

**೩.೨. ಕರ್ನಾಟಕದಲ್ಲಿ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ: ೨೦೦೫**

ಕರ್ನಾಟಕದ ಜನಸಂಖ್ಯೆಯಲ್ಲಿ ದಲಿತರು ಪ್ರಮುಖರು. ಕರ್ನಾಟಕದಲ್ಲಿ ಸುಮಾರು ೧೫೧ ಉಪಜಾತಿಗಳನ್ನು ದಲಿತರೆಂದು ಗುರುತಿಸಲಾಗಿದೆ. ಈ ಜಾತಿಗಳ ಪೈಕಿ ಅನೇಕ ಜಾತಿಗಳು ಸಂಖ್ಯೆಯಲ್ಲಿ ತುಂಬಾ ಚಿಕ್ಕದಾಗಿವೆ. ಕರ್ನಾಟಕದಲ್ಲಿ ದಲಿತರು ಒಂದು ಮುಖ್ಯ ಗುಂಪಾಗಿದ್ದರೂ

ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಪನ್ಮೂಲಗಳ ದೃಷ್ಟಿಯಿಂದ ಅವರು ದುರ್ಬಲರಾಗಿದ್ದಾರೆ.

ಭಾರತೀಯ ಹಿಂದೂ ಸಮಾಜದ ರಚನೆಯಲ್ಲಿ ಅನೇಕ ಜಾತಿಗಳನ್ನು ಅಸ್ಪೃಶ್ಯ ಜಾತಿಗಳೆಂದು ಪ್ರಸ್ತಾಪಿಸಲಾಗಿದೆ. ಹಾಗಾಗಿ ಪ್ರತ್ಯೇಕವಾಗಿ ಉಳಿದಿರುವ ಮತ್ತು ಅವರು ಅಸ್ಪೃಶ್ಯತೆಯ ಅನಾನುಕೂಲತೆಯಿಂದ ದಲಿತರು ಹಿಂದೂ ಸಾಂಪ್ರದಾಯಿಕ ಜಾತಿ ಸ್ತರದಲ್ಲಿ ಕೆಳಮಟ್ಟದ ಸ್ಥಾನಮಾನವನ್ನು ಹೊಂದಿದ್ದು, ಅವಕಾಶಗಳಿಂದ ವಂಚಿತರಾಗುವಂತೆ ಮಾಡಿತು. ಹಾಗಾಗಿ ಸಮಾಜದ ಒಂದು ಮುಖ್ಯ ಗುಂಪು ಅನಭಿವೃದ್ಧಿಯ ಕೆಳಸ್ತರಕ್ಕೆ ತಲುಪಿರುವುದು ವ್ಯಕ್ತವಾಗುತ್ತದೆ. ವಂಚಿತತೆಯ ಪರಿಸ್ಥಿತಿಗಳನ್ನೆದುರಿಸುತ್ತಿರುವ ಜನರು ಅದರಲ್ಲೂ ವಿಶೇಷವಾಗಿ ದಲಿತರು ಮಾನವ ಅಭಿವೃದ್ಧಿ ಮಟ್ಟಗಳನ್ನು ಪ್ರಬಲವಾದ ವರ್ಗಕ್ಕೆ ಸಮಾನವಾದ ಮಟ್ಟಗಳಿಗೆ ಮೇಲೆತ್ತುವವರೆಗೂ ಮಾನವ ಅಭಿವೃದ್ಧಿ ಪರಿಕಲ್ಪನೆಯು ನಿಕೃಷ್ಟ ಮಹತ್ವ ಹೊಂದಿರುತ್ತದೆ ಎಂಬ ಸತ್ಯಾಸತ್ಯತೆಯನ್ನು ಪರಿಶೀಲಿಸಲು ಮತ್ತು ಆ ಮೂಲಕ ಸಮುದಾಯದ ಕಲ್ಯಾಣದ ಕಡೆ ಪ್ರಯತ್ನವಾಗಬೇಕಿದೆ.

ದಲಿತ ಜನಸಮೂಹಗಳು ಆರ್ಥಿಕ ಅಭಿವೃದ್ಧಿ ಹಾಗೂ ಮಾನವ ಅಭಿವೃದ್ಧಿ ಎರಡರಲ್ಲೂ ಉಳಿದ ಜನಸಮೂಹಕ್ಕಿಂತ ಹಿಂದುಳಿದಿವೆ. ಈ ಜನ ಸಮೂಹಗಳ ಬದುಕನ್ನು ಉತ್ತಮಪಡಿಸಿಕೊಳ್ಳುವ ದಿಶೆಯಲ್ಲಿ ಸರ್ಕಾರವು ಅನೇಕ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಾ ಬಂದಿದೆ. ಆದರೆ ಅವು ಇವರ ಬದುಕನ್ನು ಉತ್ತಮಗೊಳಿಸುವಲ್ಲಿ ಸಂಪೂರ್ಣವಾಗಿ ಯಶಸ್ವಿಯಾಗಿಲ್ಲ. ಇತ್ತೀಚೆಗಿನ ಸಂಶೋಧನೆಗಳು ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿ ಜಾತಿಗಳು ತಮ್ಮ ಶ್ರೇಣೀಕರಣದ ಸ್ವರೂಪವನ್ನು ಕಳೆದುಕೊಳ್ಳುತ್ತಿವೆಯೆಂದೂ ಮತ್ತು ಅವು ಇಂದು ಕೇವಲ ಭಿನ್ನತೆಯ ಅನನ್ಯತೆಯ ಆಕರಗಳಾಗಿವೆಯೆಂದೂ ಪ್ರತಿಪಾದಿಸುತ್ತಿವೆ.

ಜೇಮ್ಸ್ ಮೇನರ್ ೨೦೦೭, ಎಂ.ಎನ್.ಶ್ರೀನಿವಾಸ್ ೨೦೦೫ ಈ ಬಗೆಯ ಅಧ್ಯಯನಗಳ ಮುಖ್ಯ ಸಮಸ್ಯೆಯೆಂದರೆ ಅವು ಕರ್ನಾಟಕದ ಪ್ರಾದೇಶಿಕ ವಿಭಿನ್ನತೆಗಳನ್ನು ಪರಿಗಣಿಸುತ್ತಿಲ್ಲ. ಈ ಬಗೆಯ ಅಧ್ಯಯನಗಳು ಮುಖ್ಯವಾಗಿ ದಕ್ಷಿಣ ಕರ್ನಾಟಕ ಪ್ರದೇಶವನ್ನು ಅಂದರೆ ಹಳೆಯ ಮೈಸೂರು ಸಂಸ್ಥಾನದ ಪ್ರದೇಶವನ್ನು ಮಾತ್ರ ಒಳಗೊಳ್ಳುತ್ತದೆ. ಈ ಅಧ್ಯಯನಗಳ ತಥ್ಯಗಳನ್ನು ಸಾರಸಗಟಾಗಿ ಉತ್ತರ ಕರ್ನಾಟಕ ಪ್ರದೇಶಕ್ಕೆ ಅದರಲ್ಲೂ ಮುಖ್ಯವಾಗಿ ರಾಜ್ಯದ ಹಿಂದುಳಿದ ಜಿಲ್ಲೆಗಳಾದ ವಿಜಯಪುರ, ಬಾಗಲಕೋಟೆ, ಕಲಬುರಗಿ, ರಾಯಚೂರು, ಕೊಪ್ಪಳ, ಬೀದರ್ ಮತ್ತು ಬಳ್ಳಾರಿಗಳಿಗೆ ಅನ್ವಯಿಸುವುದು ಸಾಧ್ಯವಿಲ್ಲ. ರಾಜ್ಯದ ಉತ್ತರ ಭಾಗದ ಜಿಲ್ಲೆಗಳಲ್ಲಿ ಊಳಿಗಮಾನ್ಯ ಜಮೀನ್ದಾರಿ ಪದ್ಧತಿಗಳು ಇನ್ನೂ ಗಟ್ಟಿಯಾಗಿ ಉಳಿದುಕೊಂಡು ಬಂದಿರುವುದನ್ನು ನಾವು ಕಡೆಗಣಿಸುವುದು ಸರಿಯಲ್ಲ. ಉದಾಹರಣೆಗೆ ವಿಜಯಪುರದಂತಹ ಜಿಲ್ಲೆಯಲ್ಲಿರುವ ಜಮೀನುದಾರಿಕೆಯ

ಅಸ್ತಿತ್ವವನ್ನು ಚರ್ಚಿಸಬೇಕಾಗುತ್ತದೆ. ಮೇನರ್ ಮತ್ತು ಶ್ರೀನಿವಾಸ್.ಎಂ.ಎನ್ ವಾದಿಸುವಂತೆ ರಾಜ್ಯದ ದಕ್ಷಿಣ ಭಾಗದ ಜಿಲ್ಲೆಗಳಲ್ಲಿ ಜಾತಿಗಳು ತಮ್ಮ ಶ್ರೇಣೀಕರಣದ ಸ್ವರೂಪವನ್ನು ಕಳೆದುಕೊಂಡಿರಬಹುದು. ಕಳೆದ ಒಂದು ಶತಮಾನದ(ಏಕೀಕರಣದ ಪೂರ್ವದ ೫೦ ವರ್ಷ ಮತ್ತು ಏಕೀಕರಣದ ನಂತರದ ೫೦ ವರ್ಷ) ಅವಧಿಯಲ್ಲಿ ರಾಜ್ಯದ ದಕ್ಷಿಣ ಭಾಗದ ಜಿಲ್ಲೆಗಳಲ್ಲಿ ತೀವ್ರಗತಿಯ ಸಾಮಾಜಿಕ, ಆರ್ಥಿಕ ಪರಿವರ್ತನೆಗಳಾಗಿವೆ. ಈ ಬಗೆಯ ಪರಿವರ್ತನೆಯ ಪರಿಣಾಮವಾಗಿ ಮೇನರ್ ತಿಳಿಸುವ ಬದಲಾವಣೆ ಕಾಣಬಹುದು. ಈ ಮಾತನ್ನು ಉತ್ತರ ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದಂತೆ ಹೇಳುವುದು ಸಾಧ್ಯವಿಲ್ಲ. ದಕ್ಷಿಣ ಕರ್ನಾಟಕ ಪ್ರದೇಶದಲ್ಲಿ ಊಳಿಗಮಾನ್ಯ ವ್ಯವಸ್ಥೆಯ ಅಳಿದು ಬಂಡವಾಳಶಾಹಿ ವ್ಯವಸ್ಥೆಯ ೧೯೫೦ರ ನಂತರ ಬೆಳೆಯತೊಡಗಿತು. ಆದರೆ ಉತ್ತರ ಕರ್ನಾಟಕದಲ್ಲಿ ಅದರಲ್ಲೂ ಅಲ್ಲಿನ ಹಿಂದುಳಿದ ಜಿಲ್ಲೆಗಳಲ್ಲಿ ಸಾಮಾಜಿಕ ಬದಲಾವಣೆಯ ಗತಿ ತುಂಬಾ ಮಂದವಾಗಿತ್ತು. ದಕ್ಷಿಣ ಕರ್ನಾಟಕ ಪ್ರದೇಶವು ಏಕೀಕರಣ ಪೂರ್ವದಲ್ಲೇ ತೀವ್ರ ಬದಲಾವಣೆಗಳನ್ನು ಅನುಭವಿಸಿತು. ಅದರಿಂದಾಗಿ ಅಲ್ಲಿ ಬಂಡವಾಳಶಾಹಿ ಬೇರು ಬಿಡುವುದು ಸಾಧ್ಯವಾಯಿತು.

ಸ್ವಾತಂತ್ರ್ಯ ನಂತರ ಹಾಗೂ ಏಕೀಕರಣದ ನಂತರ ಅಲ್ಲಿ ಬದಲಾವಣೆಯ ಗತಿ ತೀವ್ರವಾಯಿತು. ಉತ್ತರ ಕರ್ನಾಟಕ ಪ್ರದೇಶದಲ್ಲಿ ಬದಲಾವಣೆಯ ಗಾಳಿಯು ಏಕೀಕರಣದ ನಂತರ ಬೀಸತೊಡಗಿತು. ಆಧುನಿಕತೆಯೆಂಬುದು ತುಂಬಾ ತಡವಾಗಿ ಉತ್ತರ ಕರ್ನಾಟಕ ಪ್ರದೇಶವನ್ನು ಪ್ರವೇಶಿಸಿತು. ದಕ್ಷಿಣ ಕರ್ನಾಟಕ ಪ್ರದೇಶದಲ್ಲಿ ಆಧುನಿಕೋತ್ತರ ಸಮಾಜದ ಬಗ್ಗೆ ಮಾತನಾಡುವುದಿದ್ದರೆ ಉತ್ತರ ಕರ್ನಾಟಕದ ಹಿಂದುಳಿದಿರುವ ಜಿಲ್ಲೆಗಳ ಸಂದರ್ಭದಲ್ಲಿ ಆಧುನಿಕತೆ ಕುರಿತಂತೆ ಚರ್ಚಿಸಬೇಕಾದ ಸ್ಥಿತಿಯಿದೆ. ಈ ಕಾರಣದಿಂದಾಗಿಯೇ ಅಲ್ಲಿ ಜಾತಿ ವ್ಯವಸ್ಥೆ ಇನ್ನೂ ಶ್ರೇಣೀಕರಣದ ಆಕರವಾಗಿ ಮುಂದುವರೆದಿದೆ. ಅದಕ್ಕೆ ಸಂಬಂಧಿಸಿದ ಇತರೆ ತಾರತಮ್ಯಗಳಾದ ದಬ್ಬಾಳಿಕೆ, ಮೌಢ್ಯದ, ದೇವರ ಹೆಸರಿನಲ್ಲಿ ದೇವದಾಸಿಯರು ದಲಿತ ವರ್ಗದವರೇ ಪ್ರಧಾನವಾಗಿದ್ದಾರೆ. ಆ ಮೂಲಕ ಮೂಡನಂಬಿಕೆ ಅಲ್ಲಿ ಮುಂದುವರಿದಿದೆ. ದಲಿತರು ಅನುಭವಿಸುವ ಮಾನಸಿಕ ನೋವು ಕಷ್ಟಕಾರ್ಪಣ್ಯಗಳನ್ನು ಹೇಳತೀರದು.

ಕರ್ನಾಟಕ ಸರ್ಕಾರದ ಯೋಜನಾ ಇಲಾಖೆಯು ಸಿದ್ಧಪಡಿಸಿರುವ ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫ರಲ್ಲಿ ಪ್ರಥಮ ಬಾರಿಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ದಲಿತರ ಸಾಮರ್ಥ್ಯವನ್ನು ಅಳೆಯುವ ಒಂದು ಪ್ರಯತ್ನ ಮಾಡಲಾಗಿದೆ.

ಕೋಷ್ಟಕ ೩.೧. ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಜನಸಂಖ್ಯೆಯ ಪ್ರಮಾಣ:೧೯೯೧, ೨೦೦೧ ಮತ್ತು ೨೦೧೧

| ಕ್ರ.ಸಂ. | ವಿವರಗಳು | ೧೯೯೧ (ಲಕ್ಷಗಳಲ್ಲಿ) | ೨೦೦೧ (ಲಕ್ಷಗಳಲ್ಲಿ) | ೨೦೧೧ (ಲಕ್ಷಗಳಲ್ಲಿ) |
|---|---|---|---|---|
| ೧ | ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಜನಸಂಖ್ಯೆ ಮತ್ತು ಒಟ್ಟು ಜನಸಂಖ್ಯೆಯಲ್ಲಿ ಅವರ ಪ್ರಮಾಣ | ೭೩.೬೯ (ಶೇ.೧೬.೩೮) | ೮೫.೬೩ (ಶೇ.೧೬.೨೦) | ೧೦೪.೭೪ (ಶೇ.೧೭.೧೪) |
| ೨ | ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಜನಸಂಖ್ಯೆ ಮತ್ತು ಒಟ್ಟು ಜನಸಂಖ್ಯೆಯಲ್ಲಿ ಅವರ ಪ್ರಮಾಣ | ೧೯.೧೫ (ಶೇ.೪.೨೬) | ೩೪.೬೩ (ಶೇ.೬.೫೫) | ೪೨.೪೮ (ಶೇ.೬.೯೫) |
| ೩ | ಒಟ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಜನಸಂಖ್ಯೆ ಮತ್ತು ಒಟ್ಟು ಜನಸಂಖ್ಯೆಯಲ್ಲಿ ಅವರ ಪ್ರಮಾಣ | ೯೨.೮೪ (ಶೇ.೨೦.೬೪) | ೧೨೦.೨೬ (ಶೇ.೨೨,೭೫) | ೧೪೭.೨೨ (೨೪.೦೯) |

ಮೂಲ: ಸೆನ್ಸಸ್ ಆಫ್ ಇಂಡಿಯಾ ೧೯೯೧,೨೦೦೧ ಮತ್ತು ೨೦೧೧

ಕನಾಟಕದ ಒಟ್ಟು ಜನಸಂಖ್ಯೆಯಲ್ಲಿ ಪ.ಜಾ. ಜನಸಂಖ್ಯೆಯ ಪ್ರಮಾಣ ೧೯೯೧ರಲ್ಲಿ ಶೇ. ೧೬.೩೮ರಷ್ಟಿದ್ದುದು ೨೦೦೧ರಲ್ಲಿ ಅದು ಶೇ. ೧೬.೨೦ಕ್ಕೆ ಇಳಿದಿದೆ. ಒಟ್ಟು ಜನಸಂಖ್ಯೆಯು ತೀವ್ರವಾಗಿ ಏರಿಕೆಯಾಗಿರುವುದರಿಂದ ೨೦೧೧ರಲ್ಲಿ ಪ.ಜಾ. ಪ್ರಮಾಣ ೧೯೯೧ಕ್ಕಿಂತ ಕಡಿಮೆಯಾಗಿದೆ. ಆದರೆ ೨೦೧೧ರಲ್ಲಿ ಅದು ಶೇ. ೧೭.೧೪ಕ್ಕೆರಿದೆ. ಕೋಷ್ಟಕ ೩.೨ರಲ್ಲಿ ಒಟ್ಟು ಜನಸಂಖ್ಯೆ, ಪ.ಜಾ. ಮತ್ತು ಪ.ಪಂ. ಜನಸಂಖ್ಯೆಗಳ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಪ್ರತ್ಯೇಕವಾಗಿ ತೋರಿಸಲಾಗಿದೆ. ಒಟ್ಟು ಜನಸಂಖ್ಯೆಯ ಸೂಚ್ಯಂಕವು ೨೦೦೧ಕ್ಕಾದರೆ ಪ.ಜಾ. ಮತ್ತು ಪ.ಪಂ. ಜನಸಂಖ್ಯೆಯ ಮಾನವ ಅಭೀವೃದ್ಧಿ ಸೂಚ್ಯಂಕವು ೨೦೦೪ಕ್ಕೆ ಲೆಕ್ಕ ಹಾಕಲಾಗಿದೆ. ಇದನ್ನು ರಾಜ್ಯದ ಆಯ್ದ ಪ.ಜಾ. ಮತ್ತು ಪ.ಪಂ. ಕುಟುಂಬಗಳಿಂದ ಮಾಹಿತಿಯನ್ನು ಸಂಗ್ರಹಿಸಿ ವಿಶೇಷವಾಗಿ ಸೂಚ್ಯಂಕವನ್ನು ರೂಪಿಸಲಾಗಿದೆ. ಆದರೆ ಈ ಸೂಚ್ಯಂಕಗಳು ಮುಂದಿನ ವರ್ಷಗಳಿಗೆ ಲಭ್ಯವಿಲ್ಲ.

**ಕೋಷ್ಟಕ-೩.೨. ಮಾನವ ಅಭಿವೃದ್ಧಿ ಸೂಚ್ಯಂಕ : ೨೦೦೧**

| ಕ್ರಸಂ. | ವಿವರ | ಹೆಚ್.ಡಿ.ಐ | ಜಿ.ಡಿ.ಐ |
|---|---|---|---|
| ೧. | ಒಟ್ಟು ಜನಸಂಖ್ಯೆ ೨೦೦೧ | ೦.೬೫೦ | ೦.೬೩೭ |
| ೨. | ಪ.ಜಾತಿ – ೨೦೦೪ | ೦.೫೭೫ | ೦.೫೬೪ |
| ೩. | ಪ.ಪಂ – ೨೦೦೪ | ೦.೫೩೯ | |
| | ೧೯೯೧ | ೦.೫೪೧ | ೦.೫೨೭ |

**ಮೂಲ:** ಕರ್ನಾಟಕ ಸರ್ಕಾರ,೨೦೦೬ ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫

ಕೋಷ್ಟಕವನ್ನು ಗಮನಿಸಿದಾಗ ಮಾನವ ಅಭಿವೃದ್ಧಿ ಸೂಚ್ಯಂಕಕ್ಕೆ ಸಂಬಂಧಿಸಿದಂತೆ ಒಟ್ಟು ಜನಸಂಖ್ಯೆಯಲ್ಲಿ ಪ.ಜಾತಿ ಹಾಗೂ ಪ.ಪಂಗಡಗಳ ಸೂಚ್ಯಂಕಗಳ ನಡುವೆ ಅಂತರವಿರುವುದು ಕೂಡ ಕಂಡು ಬರುತ್ತದೆ. ಪ.ಜಾತಿಯ ಮಾನವ ಅಭಿವೃದ್ಧಿ ಸೂಚ್ಯಂಕವು ಒಟ್ಟು ಜನಸಂಖ್ಯೆಯ ಮಾನವ ಅಭಿವೃದ್ಧಿ ಸೂಚ್ಯಂಕಕ್ಕಿಂತ ೦.೦೭೫ ಅಂಶಗಳಷ್ಟು ಕಡಿಮೆ ಇದೆ. ಪ.ಪಂಗಡಕ್ಕೆ ಸಂಬಂಧಿಸಿದಂತೆ ಸೂಚ್ಯಂಕವು ೦.೧೧೧ ಅಂಶಗಳಷ್ಟು ಕಡಿಮೆಯಿದೆ. ಅಂದರೆ ಪ.ಜಾತಿಯ ಮಾನವ ಅಭಿವೃದ್ಧಿ ಸೂಚ್ಯಂಕವು ಒಟ್ಟು ಜನಸಂಖ್ಯೆಯ ಸೂಚ್ಯಂಕದ ಶೇ. ೮೮.೪೬ರಷ್ಟಿದೆ. ಪ.ಪಂಗಡದ ಸೂಚ್ಯಂಕವು ಒಟ್ಟು ಜನಸಂಖ್ಯೆಯ ಸೂಚ್ಯಂಕದ ಶೇ. ೮೨.೯೨ರಷ್ಟಿದೆ.

**ಲಿಂಗ ಅನುಪಾತ:**

ಪರಿಶಿಷ್ಟ ಜಾತಿಗಳ ಲಿಂಗಾನುಪಾತವು ೯೭೩ ಪರಿಶಿಷ್ಟ ಪಂಗಡಗಳಿಗಿಂತ ೯೭೨ ಉತ್ತಮವಾಗಿದೆ ಅಲ್ಲದೇ ಒಟ್ಟು ಜನಸಂಖ್ಯೆಯ ಲಿಂಗಾನುಪಾತಕ್ಕಿಂತಲೂ ೯೬೫ ಉತ್ತಮವಾಗಿದೆ. ಅಷ್ಟೇ ಅಲ್ಲ, ಇಡೀ ಭಾರತದ ಪರಿಶಿಷ್ಟ ಜಾತಿಗಳ ಲಿಂಗಾನುಪಾತಕ್ಕಿಂತಲೂ ೯೩೬ ಅದು ಅಧಿಕವಾಗಿದೆ.

೧೯೯೧ರಲ್ಲಿ ೯೬೦, ೨೦೦೧ರಲ್ಲಿ ೯೬೫ಕ್ಕೆ ಏರಿದೆ; ಒಟ್ಟು ಜನಸಂಖ್ಯೆಯು ಲಿಂಗಾನುಪಾತಕ್ಕೆ ಹೋಲಿಸಿದರೆ ಅದೇ ಅವಧಿಯಲ್ಲಿ ೯೬೨ರಿಂದ ೯೭೩ ಅಧಿಕಗೊಂಡ ಪರಿಶಿಷ್ಟ ಜಾತಿಯ ಲಿಂಗಾನುಪಾತವು ಕಳೆದ ದಶಕದ ಅವಧಿಯಲ್ಲಿ ರಾಜ್ಯದಲ್ಲಿ ಗುರುತರ ಸುಧಾರಣೆ ತೋರಿಸಿದೆ. ಪರಿಶಿಷ್ಟ ಜಾತಿಗಳು ವಿಶೇಷವಾಗಿ ಮಹಿಳೆಯರು ಕಡಿಮೆ ಸಾಕ್ಷರತೆಯನ್ನು ಹೊಂದಿರುವ ಅಂಶವನ್ನು ಒಟ್ಟು ಜನಸಂಖ್ಯೆಯ ಸಾಕ್ಷರತೆಗೆ ಹೋಲಿಸಿದಾಗ ಪರಿಶಿಷ್ಟ ಜಾತಿಗಳಲ್ಲಿನ ಅಧಿಕ ಲಿಂಗಾನುಪಾತದ ಮಹತ್ವ ಅರಿವಾಗುತ್ತದೆ. ಪರಿಶಿಷ್ಟ ಜಾತಿಯಲ್ಲಿ ಗಂಡು ಮಗುವನ್ನೇ ಪಡೆಯಬೇಕೆಂಬುದು ಒಂದು ಆದ್ಯತೆಯಾಗಿ ಉಳಿದಿಲ್ಲ. ಈ ಜನಸಮೂಹವು ಪುರುಷಶಾಹಿಯಿಂದ ಮುಕ್ತವಾಗಿರುವಂತೆ ಕಾಣುತ್ತದೆ. ಆದರೆ ದುರದೃಷ್ಟಕರ ಸಂಗತಿಯೆಂದರೆ ನಗರ ಪ್ರದೇಶದಲ್ಲಿ ಲಿಂಗಾನುಪಾತವು ೯೬೧ ಇದ್ದರೆ, ಗ್ರಾಮೀಣ ಪ್ರದೇಶದಲ್ಲಿ ಅದು ೯೭೭ ಅಧಿಕವಾಗಿದೆ.

**ಕೋಷ್ಟಕ. ೩.೩. ಲಿಂಗ ಅಭಿವೃದ್ಧಿ ಸೂಚಿ**

| ಕ್ರಸಂ | ವಿವರ | ಲಿಂಗ ಸಂಬಂಧಿ ಅಭಿವೃದ್ಧಿ | |
|---|---|---|---|
| | | ೨೦೦೧ | ೧೯೯೧ |
| ೧ | ಒಟ್ಟು ಕರ್ನಾಟಕ ಜನಸಂಖ್ಯೆ | ೦.೬೩೭ | ೦.೫೨೫ |
| ೨ | ಪ.ಜಾತಿ – ೨೦೦೪ | ೦.೫೬೪ | – |
| ೩ | ಪ.ಪಂ – ೨೦೦೪ | ೦.೫೨೭ | – |

ಕೋಷ್ಟಕ ೩.೩ರ ಬಗ್ಗೆ ಸೂಚಿಸಿರುವಂತೆ ಲಿಂಗ ಸಂಬಂಧಿ ಅಭಿವೃದ್ದಿ ಸೂಚ್ಯಂಕದ ಬಗ್ಗೆ ೨೦೦೪ರ ಮಾಹಿತಿಯೆದೆ ವಿನಾ ಮುಂದಿನ ವರ್ಷಗಳಿಗೆ ಸೂಚ್ಯಂಕಗಳ ಮೌಲ್ಯ ದೊರಯುವುದಿಲ್ಲ. ಲಿಂಗ ಸಂಬಂಧಿ ಅಭಿವೃದ್ಧಿ ಸೂಚ್ಯಂಕಕ್ಕೆ ಸಂಬಂಧಿಸಿದಂತೆಯೂ ಪ.ಜಾತಿಯ ಸೂಚ್ಯಂಕವು ಒಟ್ಟು ಜನಸಂಖ್ಯೆಯ ಸೂಚ್ಯಂಕದ ಶೇ. ೮೮.೫೪ರಷ್ಟಿದ್ದರೆ ಪ.ಪಂಗಡದ ಸೂಚ್ಯಂಕವು ಒಟ್ಟು ಜನಸಂಖ್ಯೆಯ ಸೂಚ್ಯಂಕದ ಶೇ. ೮೨.೭೩ರಷ್ಟಿದೆ. ಒಟ್ಟಾರೆ ಪ.ಜಾತಿ ಮತ್ತು ಪ.ಪಂಗಡಗಳ ಜನಸಮೂಹದ ಅಭಿವೃದ್ಧಿ ಸ್ಥಿತಿಗತಿಯು ಉಳಿದ ಜನಸಮೂಹದ ಅಭಿವೃದ್ಧಿ ಸ್ಥಿತಿಗಿಂತ ಕೆಳಮಟ್ಟದಲ್ಲಿದೆ. (ಜಿಲ್ಲಾ ಮಾನವ ಅಭಿವೃದ್ಧಿ ವರದಿ ವಿಜಯಪುರ–೨೦೦೮ ಪು. ೧೬೯–೭೧೭)

**೩.೩. ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಡಾ. ಚಂದ್ರ ಪೂಜಾರಿ ಅವರ ಅರ್ಥಯಾನ**

ಎಂ. ಚಂದ್ರ ಪೂಜಾರಿ ಅವರು ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಸಿದ್ದಪಡಿಸಿದ್ದಾರೆ. ಅವರು ಕನ್ನಡ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರು/ಮಾರ್ಗದರ್ಶಕರು ಆಗಿ ಕರ್ತವ್ಯ ನಿರ್ವಹಿಸುವುದರ ಜೊತೆಯಲ್ಲಿ ಸರ್ಕಾರದ ಮಾನವ ಅಭಿವೃದ್ಧಿ ವರದಿ ಸಿದ್ದಪಡಿಸುವ ಕೆಲಸದಲ್ಲಿ ಭಾಗಿಯಾಗಿದ್ದು, ಜೊತೆಗೆ ಮಾನವ ಅಭಿವೃದ್ಧಿ ವರದಿ ಸಿದ್ಧಪಡಿಸುವ ಸಂಪನ್ಮೂಲ ವ್ಯಕ್ತಿಗಳಿಗೆ ನಡೆಸಿದ ಎಲ್ಲಾ ತರಬೇತಿ ಕಾರ್ಯಕ್ರಮಗಳಿಗೆ ಹಾಜರಾಗಿ ದಲಿತ ಅಭಿವೃದ್ಧಿ ಸೂಚ್ಯಂಕ ಕುರಿತು ಉಪನ್ಯಾಸ ನೀಡಿರುತ್ತಾರೆ. ಅಷ್ಟು ಮಾತ್ರವಲ್ಲದೆ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕಗಳಲ್ಲಿರುವ ದೋಷಗಳ ತಿದ್ದುಪಡಿಗೆ ನಡೆಸಿದ ಸಭೆಗಳಲ್ಲೂ ಹಾಜರಾಗಿ ಸಂಪನ್ಮೂಲ ವ್ಯಕ್ತಿಗಳಿಗೆ ಮಾರ್ಗದರ್ಶನ ನೀಡಿರುತ್ತಾರೆ. ಅಲ್ಲದೆ ದಲಿತ ಮಾನವ ಅಭಿವೃದ್ಧಿ ಮತ್ತು ದಲಿತ ಅಭಿವೃದ್ಧಿ ಪುಸ್ತಕಗಳನ್ನು ಕೂಡ ಪ್ರಕಟಿಸಿರುತ್ತಾರೆ.

ದಲಿತ ಮಾನವ ಸೂಚ್ಯಂಕವನ್ನು ಕರ್ನಾಟಕದಲ್ಲಿ ಮಾತ್ರವಲ್ಲ ಇಡೀ ದೇಶದಲ್ಲೇ ಮೊದಲ ಬಾರಿಗೆ ಅಭಿವೃದ್ಧಿಪಡಿಸಲಾಗಿದೆ. ಆದರೂ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಸರ್ಕಾರದ ಮಾನವ ಅಭಿವೃದ್ಧಿಯಲ್ಲಿರುವ ಇತರೆ ಸೂಚ್ಯಂಕಗಳ ಸ್ಥಾನಮಾನ ಪಡೆಯಲಿಲ್ಲ. ಕಾರಣ ಮೇಲಾಧಿಕಾರಿಗಳ ಹುನ್ನಾರದಿಂದ ಇದು ಹೊರಗೆ ಉಳಿದಿದೆ. ಯಾವುದೇ ಕ್ಷುಲ್ಲಕ ಕಾರಣ ನೀಡಿ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ಅಂಚಿಗೆ ಸರಿಸಿದ್ದು ನೋಡಿದಾಗ ದಲಿತರು ಊರಲ್ಲಿ

ಮಾತ್ರ ಎಲ್ಲರೊಂದಿಗಿರುವ ಅವಕಾಶದಿಂದ ವಂಚಿತರಾಗಿ ಹಾಗೇ ಅವರ ಅಭಿವೃದ್ಧಿ ಬಗ್ಗೆ ಇರುವ ಸೂಚ್ಯಂಕ ಕೂಡ ಎಲ್ಲಾ ಇಂಡೆಕ್ಸ್‌ಗಳೊಂದಿಗಿರುವ ಅವಕಾಶದಿಂದ ವಂಚಿತವಾಗಿದೆಯೆನ್ನುವ ತೀರ್ಮಾನಗಳು ಮೇಲುನೋಟಕ್ಕೆ ಎಡೆಮಾಡಿಕೊಡುತ್ತದೆ.

**೩.೩.೧. ದಲಿತ ಮಾನವ ಅಭಿವೃದ್ಧಿ ಅಗತ್ಯತೆಗಳು:**

ದಲಿತೇತರರ ಅಭಿವೃದ್ಧಿಗೆ ಹೋಲಿಸಿದರೆ ದಲಿತ ಅಭಿವೃದ್ಧಿ ತುಂಬಾ ಹಿಂದಿದೆ ಎನ್ನುವುದು ಮೇಲ್ನೋಟಕ್ಕೆ ತಿಳಿಯುವ ವಿಚಾರ. ಇಂತಹ ಸಂದರ್ಭದಲ್ಲಿ ದಲಿತ ಅಭಿವೃದ್ಧಿಯನ್ನು ಮಾಪನ ಮಾಡುವುದು ಮಾತ್ರ ಮುಖ್ಯವಲ್ಲ ಹಲವು ವರ್ಷಗಳ ಅಭಿವೃದ್ಧಿ ನಂತರವೂ ದಲಿತರು ಏಕೆ ದಲಿತೇತರರ ಸಮ ಬೆಳೆಯಲಿಲ್ಲ ಎನ್ನುವ ಪ್ರಶ್ನೆ ಕೂಡ ಮುಖ್ಯ. ದಲಿತರ ಅನಾಭಿವೃದ್ಧಿ ದಲಿತರಿಗೆ ಸೀಮಿತಗೊಂಡ ಸಮಸ್ಯೆಯೇ ಅಥವಾ ಒಟ್ಟು ಪರಿಸರದ ಸಮಸ್ಯೆಯೇ ಎನ್ನುವ ಪ್ರಶ್ನೆ ಹುಟ್ಟುತ್ತದೆ. ಆಗ ಒಂದು ದೊಡ್ಡ ಗುಂಪು ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಥಿಕ ಹಿನ್ನೆಡೆ ಒಂದು ಹಂತದ ಅಭಿವೃದ್ಧಿ ಮಟ್ಟವನ್ನು ಹಿಂದಕ್ಕೆ ಹಾಕಿದಾಗ ಇದರಿಂದ ಒಟ್ಟಾರೆ ರಾಷ್ಟ್ರ/ರಾಜ್ಯದ ಬೆಳವಣಿಗೆಯು ಸಹ ಕುಂಟಿತವಾಗುತ್ತದೆ ಎಂಬ ಆಲೋಚನೆ ಯಾರು ಮಾಡುತ್ತಿಲ್ಲ.

ದಲಿತರ ಅಭಿವೃದ್ಧಿ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಅಥವಾ ಅರ್ಥ ಮಾಡಿಕೊಳ್ಳಲು ತುಂಬಾ ಸಂಕೀರ್ಣವಾದ ಇಂಡೆಕ್ಸ್ ಅಥವಾ ಸೂಚ್ಯಂಕಗಳ ಅಗತ್ಯವಿಲ್ಲ, ತೆರೆದ ಮನಸ್ಸಿನಿಂದ ಮತ್ತೊಬ್ಬರ ಸ್ಥಾನದಲ್ಲಿ ನಿಂತು ಆಲೋಚಿಸುವ ಶಕ್ತಿ, ಮತ್ತೊಬ್ಬರ ಬಗ್ಗೆ ಕಷ್ಟಸುಖಗಳ ತಮ್ಮ ಇತಿಮಿತಿಯೊಳಗೆ ಸ್ಪಂದಿಸುವ ಕಾಳಜಿ ಇರುವ ಎಲ್ಲರಿಗೂ ದಲಿತರ ದುಃಸ್ಥಿತಿಯನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವಾಗಲಾರದು. ಹಾಗೆಂದು ಅಭಿವೃದ್ಧಿ ಮಾಪಕಗಳು ಬೇಡವೇ ಬೇಡ ಎನ್ನುವ ವಾದ ಇಲ್ಲ. ಆದರೆ ಎಷ್ಟೋ ಬಾರಿ ನಮ್ಮ ಅಧ್ಯಯನಗಳು, ಮಾಪಕಗಳು ಕಾಲ ಬುಡದಲ್ಲಿರುವಾಗ ದೂರದಲ್ಲಿರುವ ಬಣವೆಯಲ್ಲಿ ಸೂಜಿ ಹುಡುಕುವ ಕೆಲಸ ಮಾಡುತ್ತಿರುತ್ತವೆ. ಇದು ಸರಿಯಲ್ಲ. ಅಷ್ಟು ಮಾತ್ರವಲ್ಲ ತಾಂತ್ರಿಕವಾಗಿ ಶುದ್ಧವಾದ ಅಭಿವೃದ್ಧಿ ಮಾಪಕ ಸಿದ್ಧಗೊಂಡ ಕೂಡಲೇ ದಲಿತರ ಅಭಿವೃದ್ಧಿ ಸಮಸ್ಯೆಗಳು ಪರಿಹಾರವಾಗುವುದಿಲ್ಲ. ಏಕೆಂದರೆ ಜ್ವರದ ಮಾಪಕ ಜ್ವರದ ಡಿಗ್ರಿಯನ್ನು ಅಳೆದಂತೆ ಇಂತಹ ಮಾಪಕಗಳು ದಲಿತರ ಅಭಿವೃದ್ಧಿ ಮಟ್ಟವನ್ನು ಅಳೆಯಬಹುದು. ಈ ಮಾಪನದಿಂದ ದಲಿತೇತರರ ಅಭಿವೃದ್ಧಿಗೆ ಹೋಲಿಸಿ ನೋಡಿದಾಗ ದಲಿತ ಅಭಿವೃದ್ಧಿ ಎಲ್ಲಿದೆಯೆಂದು ಮನವರಿಕೆಯಾಗಬಹುದು. ಆದರೆ ಸುಮಾರು ಏಳು ದಶಕಗಳ ಅಭಿವೃದ್ಧಿ ಪ್ರಕ್ರಿಯೆಯ ನಂತರವೂ ಶಿಕ್ಷಣ, ಉದ್ಯೋಗ, ರಾಜಕೀಯ ಮೀಸಲಾತಿಗಳ ನಂತರವೂ ದಲಿತರು ದಲಿತೇತರರಿಗೆ ಹೋಲಿಸಿದಾಗ ತುಂಬ ಹಿಂದಿರಲು ಕಾರಣಗಳೇನು ಎನ್ನುವುದನ್ನು ಅಭಿವೃದ್ಧಿ ಮಾಪಕಗಳು, ಹೇಳುವುದಿಲ್ಲ. ಬದಲಿಗೆ ಯಾವ ಮಟ್ಟದಲಿದ್ದರು ಎಂಬುದು ತಿಳಿಯಬಹುದು (ಚಂದ್ರ ಪೂಜಾರಿ. ಎಂ., ೨೦೧೬, "ದಲಿತ ಮಾನವ ಅಭಿವೃದ್ಧಿ", ಕ್ರಿಯಾ ಪ್ರಕಾಶನ, ಪು. ೨೯–೩೦).

### ೩.೩.೨. ದಲಿತ ಮಾನವ ಅಭಿವೃದ್ಧಿ ಸೂಚಿಗಳು

ಶ್ರೇಣೀಕರಗೊಂಡ ಜಾತಿ ವ್ಯವಸ್ಥೆಯ ಕೆಳಹಂತದಲ್ಲಿ ಅಂಟಿಕೊಂಡಿರುವುದು ಅಸ್ಪೃಶ್ಯತೆ ಇದು ಒಂದು ಸಾಮಾಜಿಕವಾದ ಅರ್ಬುದ ರೋಗದ ಸಮಾನಾಂತರವಾದ ಸಮಸ್ಯೆಯಾಗಿದೆ. ಇದರ ಸಾಮರ್ಥ್ಯವು ಸೃಷ್ಟಿಸುವ ಸಂಗತಿಗಳನ್ನು ಮಾನವ ಅಭಿವೃದ್ಧಿ ಸೂಚಿಯು ಪರಿಗಣಿಸಿಯೇ ಇಲ್ಲ. ಆದಕಾರಣ ಮಾನವ ಅಭಿವೃದ್ಧಿ ಸೂಚಿಯನ್ನು ಯಥಾರೂಪದಲ್ಲಿ ಅಂದರೆ ಪಿರಮಿಡ್ ಬುಡದಲ್ಲಿರುವವರ ಅಭಿವೃದ್ಧಿಯನ್ನು ಮಾಪನ ಮಾಡಲು ಸಾಧ್ಯವಿಲ್ಲ. ಅಭಿವೃದ್ಧಿಯನ್ನು ಅಳತೆ ಮಾಡಲು ಪ್ರತ್ಯೇಕ ಸೂಚಿಯನ್ನು ಕಟ್ಟುವ ಅನಿವಾರ್ಯತೆ ಇರುವುದು ಮತ್ತೊಂದು ಅಭಿಪ್ರಾಯ.

ಮಾನವ ಅಭಿವೃದ್ಧಿ ಸೂಚಿಯಲ್ಲಿರುವ ಅಭಾವವನ್ನು ಸರಿಪಡಿಸುವ ಜೊತೆಗೆ ರಾಜಕೀಯ ಅಂಶಗಳು ಒಳಗೊಂಡರೆ ತುಂಬಾ ಪರಿಣಾಮಕಾರಿಯಾಗುತ್ತದೆ. ಹೀಗೆ ದಲಿತ ಮಾನವ ಅಭಿವೃದ್ಧಿಯ ಸೂಚಿಯು ಪ್ರಮುಖವಾಗಿ ಆರು ಆಯಾಮಗಳನ್ನು ಒಳಗೊಂಡಿವೆ. ಸ್ವಾತಂತ್ರ್ಯ, ತಾರತಮ್ಯ ಜೀವನಮಟ್ಟ, ಲಿಂಗಸಂಬಂಧಿ ಸಮಸ್ಯೆ, ಮೂಲ ಸೌಕರ್ಯಗಳ ದೊರಕುವಿಕೆ ಅಭಿವೃದ್ಧಿ ಸೂಚಿಗಳನ್ನು ಗುರುತಿಸಲಾಗಿದೆ. ದಲಿತ ಮಾನವ ಅಭಿವೃದ್ಧಿ ಸೂಚಿ ಜೊತೆಗೆ ಇನ್ನು ಹತ್ತು ಸೂಚಿ (ಇಂಡೆಕ್ಸ್)ಗಳನ್ನು ಒಳಗೊಂಡಿದೆ.

#### ೧. ಸಾಂಸ್ಥಿಕ ಒಳಗೊಳ್ಳುವಿಕೆ ಸೂಚ್ಯಂಕ

ಸಂಯುಕ್ತ ಸರ್ಕಾರದ ಅಂಗ ಸಂಸ್ಥೆಯಾದ ಜಿಲ್ಲಾ ಪಂಚಾಯತ್ ತನ್ನ ಆಡಳಿತವನ್ನು ಹೀಗೆ ವಿಸ್ತರಿಸಿದೆ. ಶಿಕ್ಷಣ ಸ್ಥಾಯಿ ಸಮಿತಿ, ಸಾಮಾಜಿಕ ಆರ್ಥಿಕ ನ್ಯಾಯ ಸಮಿತಿ, ಗ್ರಾಮ್ಯ ನೈಮಲ್ಯ ಮತ್ತು ನೀರು ಪೂರೈಕೆಯ ಸಂಸ್ಥೆಗಳು ಮುಖ್ಯವಾಗಿರುತ್ತದೆ. ಸಾಮಾಜಿಕ ನ್ಯಾಯ ಮತ್ತು ಸಬಲೀಕರಣದ ದೃಷ್ಟಿಯಿಂದ ಕಾರ್ಯನಿರ್ವಹಿಸಿರುತ್ತಾರೆ. ಈ ಸಂಸ್ಥೆಗಳಲ್ಲಿ ದಲಿತರ ಜನಸಂಖ್ಯೆಗೆ ಅನುಗುಣವಾಗಿ ನಿರ್ದಿಷ್ಟ ಸಂಖ್ಯೆಯ ಸೀಟುಗಳನ್ನು ಅವರಿಗೆ ಮೀಸಲಿರಿಸಲಾಗಿದೆ. ಮೀಸಲಿಟ್ಟ ಸೀಟುಗಳನ್ನು ತುಂಬದಿದ್ದರೆ ಕಾನೂನಿಗೆ ವಿರೋಧವಾಗುತ್ತದೆ ಎನ್ನುವ ಕಾರಣದಿಂದ ಎಲ್ಲ ಮೀಸಲಿಟ್ಟ ಸೀಟುಗಳನ್ನು ತುಂಬಲಾಗುತ್ತದೆ. ಅದುದರಿಂದ ಮೀಸಲಿಟ್ಟ ಸೀಟುಗಳಿಗಿಂತ ಹೆಚ್ಚು ದಲಿತ ಪ್ರತಿನಿಧಿಗಳು ಈ ಸಂಸ್ಥೆಗಳಲ್ಲಿ ಪಾಲುಗೊಂಡರೆ ಅಭಿವೃದ್ಧಿಯೆಂದು ಪರಿಗಣಿಸಲಾಗಿದೆ.

#### ೨. ಸಾಮಾಜಿಕ ಒಳಗೊಳ್ಳುವಿಕೆ ಸೂಚ್ಯಂಕ

ಸಾಮಾಜಿಕ ತಳಹಂತದಲ್ಲಿ ಬದುಕುವ ಅಸ್ಪೃಶ್ಯತೆಯ ಬದುಕು ಅತ್ಯಂತ ಕರುಣಾಜನಕವಾದ ಸಾಮಾಜಿಕ ಸಮಸ್ಯೆಯಾಗಿ ಜೀವಂತವಾಗಿಯೇ ಮುಂದುವರೆದಿದೆ. ಅದು ವಿವಿಧ ರೂಪಗಳಲ್ಲಿ ರೂಪಾಂತರಗೊಂಡಿರುವುದು ಕೂಡ ಆಚರಣೆಯಲ್ಲಿದೆ. ಸಾಮಾಜಿಕ ಒಳಗೊಳ್ಳುವಿಕೆಯನ್ನು ಮಾಡುವ ಮಾಪನಗಳ ಸೂಚ್ಯಂಕವನ್ನು ಅಭಿವೃದ್ಧಿಪಡಿಸಲಾಗಿದೆ. ಇದರಲ್ಲಿ ಅಂತರ್ಗತವಾದ ಐದು ಸಂಗತಿಗಳು ಒಳಗೊಂಡಿವೆ. ಅವುಗಳಲ್ಲಿ ದಲಿತೇತರಂತೆ ಪಾಲುಗೊಳ್ಳುವ ಸಾಧ್ಯತೆ, ದಲಿತೇತರಂತೆ ಊರ ದೇವಸ್ಥಾನಗಳಿಗೆ ಪ್ರವೇಶ ಇರುವುದು ಮತ್ತು ಹೋಟೇಲುಗಳಲ್ಲಿ ದಲಿತೇತರಂತೆ ಎಲ್ಲ ಕಡೆ ಒಳಗೊಳ್ಳಲ್ಪಟ್ಟರೆ ಅಸ್ಪೃಶ್ಯತೆ ಕಡಿಮೆಯಾಗುತ್ತದೆ ಎನ್ನುವ ತೀರ್ಮಾನಕ್ಕೆ ಬರಲಾಗುವುದು.

### ೩.೩.೨. ದಲಿತ ಮಾನವ ಅಭಿವೃದ್ಧಿ ಸೂಚಿಗಳು

ಶ್ರೇಣೀಕರಗೊಂಡ ಜಾತಿ ವ್ಯವಸ್ಥೆಯ ಕೆಳಹಂತದಲ್ಲಿ ಅಂಟಿಕೊಂಡಿರುವುದು ಅಸ್ಪೃಶ್ಯತೆ ಇದು ಒಂದು ಸಾಮಾಜಿಕವಾದ ಅರ್ಬುದ ರೋಗದ ಸಮಾನಾಂತರವಾದ ಸಮಸ್ಯೆಯಾಗಿದೆ. ಇದರ ಸಾಮರ್ಥ್ಯವು ಸೃಷ್ಟಿಸುವ ಸಂಗತಿಗಳನ್ನು ಮಾನವ ಅಭಿವೃದ್ಧಿ ಸೂಚಿಯು ಪರಿಗಣಿಸಿಯೇ ಇಲ್ಲ. ಆದಕಾರಣ ಮಾನವ ಅಭಿವೃದ್ಧಿ ಸೂಚಿಯನ್ನು ಯಥಾರೂಪದಲ್ಲಿ ಅಂದರೆ ಪಿರಮಿಡ್ ಬುಡದಲ್ಲಿ ರುವವರ ಅಭಿವೃದ್ಧಿಯನ್ನು ಮಾಪನ ಮಾಡಲು ಸಾಧ್ಯವಿಲ್ಲ. ಅಭಿವೃದ್ಧಿಯನ್ನು ಅಳತೆ ಮಾಡಲು ಪ್ರತ್ಯೇಕ ಸೂಚಿಯನ್ನು ಕಟ್ಟುವ ಅನಿವಾರ್ಯತೆ ಇರುವುದು ಮತ್ತೊಂದು ಅಭಿಪ್ರಾಯ.

ಮಾನವ ಅಭಿವೃದ್ಧಿ ಸೂಚಿಯಲ್ಲಿರುವ ಅಭಾವವನ್ನು ಸರಿಪಡಿಸುವ ಜೊತೆಗೆ ರಾಜಕೀಯ ಅಂಶಗಳು ಒಳಗೊಂಡರೆ ತುಂಬಾ ಪರಿಣಾಮಕಾರಿಯಾಗುತ್ತದೆ. ಹೀಗೆ ದಲಿತ ಮಾನವ ಅಭಿವೃದ್ಧಿಯ ಸೂಚಿಯು ಪ್ರಮುಖವಾಗಿ ಆರು ಆಯಾಮಗಳನ್ನು ಒಳಗೊಂಡಿವೆ. ಸ್ವಾತಂತ್ರ್ಯ, ತಾರತಮ್ಯ ಜೀವನಮಟ್ಟ, ಲಿಂಗಸಂಬಂಧಿ ಸಮಸ್ಯೆ, ಮೂಲ ಸೌಕರ್ಯಗಳ ದೊರಕುವಿಕೆ ಅಭಿವೃದ್ಧಿ ಸೂಚಿಗಳನ್ನು ಗುರುತಿಸಲಾಗಿದೆ. ದಲಿತ ಮಾನವ ಅಭಿವೃದ್ಧಿ ಸೂಚಿ ಜೊತೆಗೆ ಇನ್ನು ಹತ್ತು ಸೂಚಿ (ಇಂಡೆಕ್ಸ್)ಗಳನ್ನು ಒಳಗೊಂಡಿದೆ.

#### ೧. ಸಾಂಸ್ಥಿಕ ಒಳಗೊಳ್ಳುವಿಕೆ ಸೂಚ್ಯಂಕ

ಸಂಯುಕ್ತ ಸರ್ಕಾರದ ಅಂಗ ಸಂಸ್ಥೆಯಾದ ಜಿಲ್ಲಾ ಪಂಚಾಯತ್ ತನ್ನ ಆಡಳಿತವನ್ನು ಹೀಗೆ ವಿಸ್ತರಿಸಿದೆ. ಶಿಕ್ಷಣ ಸ್ಥಾಯಿ ಸಮಿತಿ, ಸಾಮಾಜಿಕ ಆರ್ಥಿಕ ನ್ಯಾಯ ಸಮಿತಿ, ಗ್ರಾಮ್ಯ ನೈಮಲ್ಯ ಮತ್ತು ನೀರು ಪೂರೈಕೆಯ ಸಂಸ್ಥೆಗಳು ಮುಖ್ಯವಾಗಿರುತ್ತದೆ. ಸಾಮಾಜಿಕ ನ್ಯಾಯ ಮತ್ತು ಸಬಲೀಕರಣದ ದೃಷ್ಟಿಯಿಂದ ಕಾರ್ಯನಿರ್ವಹಿಸಿರುತ್ತಾರೆ. ಈ ಸಂಸ್ಥೆಗಳಲ್ಲಿ ದಲಿತರ ಜನಸಂಖ್ಯೆಗೆ ಅನುಗುಣವಾಗಿ ನಿರ್ದಿಷ್ಟ ಸಂಖ್ಯೆಯ ಸೀಟುಗಳನ್ನು ಅವರಿಗೆ ಮೀಸಲಿರಿಸಲಾಗಿದೆ. ಮೀಸಲಿಟ್ಟ ಸೀಟುಗಳನ್ನು ತುಂಬದಿದ್ದರೆ ಕಾನೂನಿಗೆ ವಿರೋಧವಾಗುತ್ತದೆ ಎನ್ನುವ ಕಾರಣದಿಂದ ಎಲ್ಲ ಮೀಸಲಿಟ್ಟ ಸೀಟುಗಳನ್ನು ತುಂಬಲಾಗುತ್ತದೆ. ಅದುದರಿಂದ ಮೀಸಲಿಟ್ಟ ಸೀಟುಗಳಿಗಿಂತ ಹೆಚ್ಚು ದಲಿತ ಪ್ರತಿನಿಧಿಗಳು ಈ ಸಂಸ್ಥೆಗಳಲ್ಲಿ ಪಾಲುಗೊಂಡರೆ ಅಭಿವೃದ್ಧಿಯೆಂದು ಪರಿಗಣಿಸಲಾಗಿದೆ.

#### ೨. ಸಾಮಾಜಿಕ ಒಳಗೊಳ್ಳುವಿಕೆ ಸೂಚ್ಯಂಕ

ಸಾಮಾಜಿಕ ತಳಹಂತದಲ್ಲಿ ಬದುಕುವ ಅಸ್ಪೃಶ್ಯತೆಯ ಬದುಕು ಅತ್ಯಂತ ಕರುಣಾಜನಕವಾದ ಸಾಮಾಜಿಕ ಸಮಸ್ಯೆಯಾಗಿ ಜೀವಂತವಾಗಿಯೇ ಮುಂದುವರೆದಿದೆ. ಅದು ವಿವಿಧ ರೂಪಗಳಲ್ಲಿ ರೂಪಾಂತರಗೊಂಡಿರುವುದು ಕೂಡ ಆಚರಣೆಯಲ್ಲಿದೆ. ಸಾಮಾಜಿಕ ಒಳಗೊಳ್ಳುವಿಕೆಯನ್ನು ಮಾಡುವ ಮಾಪನಗಳ ಸೂಚ್ಯಂಕವನ್ನು ಅಭಿವೃದ್ಧಿಪಡಿಸಲಾಗಿದೆ. ಇದರಲ್ಲಿ ಅಂತರ್ಗತವಾದ ಐದು ಸಂಗತಿಗಳು ಒಳಗೊಂಡಿವೆ. ಅವುಗಳಲ್ಲಿ ದಲಿತೇತರಂತೆ ಪಾಲುಗೊಳ್ಳುವ ಸಾಧ್ಯತೆ, ದಲಿತೇತರಂತೆ ಊರ ದೇವಸ್ಥಾನಗಳಿಗೆ ಪ್ರವೇಶ ಇರುವುದು ಮತ್ತು ಹೋಟೇಲುಗಳಲ್ಲಿ ದಲಿತೇತರಂತೆ ಎಲ್ಲ ಕಡೆ ಒಳಗೊಳ್ಳಲ್ಪಟ್ಟರೆ ಅಸ್ಪೃಶ್ಯತೆ ಕಡಿಮೆಯಾಗುತ್ತದೆ ಎನ್ನುವ ತೀರ್ಮಾನಕ್ಕೆ ಬರಲಾಗುವುದು.

### ೩. ತಾರತಮ್ಯ ಅನುಭವದ ಸೂಚ್ಯಂಕ

ಸ್ವಾತಂತ್ರ್ಯ ಬಂದು ಏಳು ದಶಕಗಳು ಗತಿಸಿದರೂ, ಸಾಮಾಜಿಕ ವ್ಯವಸ್ಥೆಯಲ್ಲಿ ವಿವಿಧ ಅಭಿವೃದ್ಧಿ ಅವಕಾಶಗಳನ್ನು ಬಳಸಿಕೊಳ್ಳುವಲ್ಲಿ ದಲಿತರು ತಾರತಮ್ಯಗಳನ್ನು ಎದುರಿಸುತ್ತಿದ್ದಾರೆ. ತಾರತಮ್ಯಗಳು ಕಡಿಮೆಯಾಗುವ ವಾತಾವರಣ ಉಂಟಾದರೆ, ದಲಿತರು ಅಭಿವೃದ್ಧಿಯ ಸಾಧ್ಯತೆಗಳು ಹೆಚ್ಚಾಗುತ್ತವೆ ಎನ್ನುವ ಗ್ರಹಿಕೆ ಈ ಸೂಚಿಯಲ್ಲಿದೆ. ಶಾಲೆಯಲ್ಲಿ ದಲಿತ ಮಕ್ಕಳು ಎದುರಿಸುವ ತಾರತಮ್ಯಗಳು, ಆರೋಗ್ಯ ಅನುಕೂಲಗಳನ್ನು ಪಡೆಯುವಾಗ ಅನುಭವಿಸುವ ತಾರತಮ್ಯಗಳು, ಕುಡಿಯುವ ನೀರಿನ ವಿತರಣೆಯಲ್ಲಿ ತಾರತಮ್ಯ, ಗ್ರಾಮದಲ್ಲಿ ಸೃಷ್ಟಿಯಾಗುವ ಉದ್ಯೋಗಗಳನ್ನು ಪಡೆಯುವಲ್ಲಿನ ತಾರತಮ್ಯಗಳು ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಎದುರಿಸುವ ತಾರತಮ್ಯಗಳು ಹೀಗೆ ಒಟ್ಟು ಐದು ಸೂಚಿಗಳನ್ನು ಪರಿಗಣಿಸಲಾಗಿದೆ.

### ೪. ತಾರತಮ್ಯ ವಿರುದ್ಧ ಪ್ರತಿಭಟನೆ

ಶತಮಾನಗಳಿಂದಲೂ ವಂಚಿತವಾಗಿರುವ ದಲಿತರ ಬದುಕಿನ ಸುಸ್ಥಿರತೆಯನ್ನು ಸಂವಿಧಾನದ ಕಾನೂನುಗಳ ಊರುಗೋಲಿನಿಂದ ಮೂಲ ಸೌಕರ್ಯ ಹೊಂದಲು ಯತ್ನಿಸುತ್ತಿದ್ದಾರೆ. ಅದರಲ್ಲೂ ಶಿಕ್ಷಣ, ಆರೋಗ್ಯ, ಉದ್ಯೋಗ, ಕುಡಿಯುವ ನೀರು ಪಡೆಯಲು ಅವಕಾಶವಾದಲ್ಲಿ ದಲಿತ ಅಭಿವೃದ್ಧಿ ಸಾಧ್ಯತೆ ಹೆಚ್ಚಾದಂತೆ ಒಂದುವೇಳೆ ಮೂಲ ಸೌಕರ್ಯ ಲಭ್ಯವಾಗದಿದ್ದಲ್ಲಿ ಅಭಿವೃದ್ಧಿ ಹಿನ್ನಡೆಯಾಗುತ್ತದೆ. ಅದನ್ನು ಪಡೆಯಲು ಪ್ರತಿಭಟಿಸುವ ಸಾಧ್ಯತೆ ಹೆಚ್ಚಾದಂತೆ ದಲಿತ ಅಭಿವೃದ್ಧಿ ಹೆಚ್ಚಾಗುತ್ತದೆಯೆಂದು ಗ್ರಹಿಸಲಾಗಿದೆ. ಏಕೆಂದರೆ ಪ್ರತಿಭಟಿಸಬೇಕಾದರೆ ಎರಡು ಸಂಗತಿಗಳ ಇರುವಿಕೆ ಮುಖ್ಯ. ಒಂದು ಮೇಲ್ಜಾತಿಗಳ ನಿರ್ದಿಷ್ಟ ನಡವಳಿಕೆ ಸರಿಯಿಲ್ಲ ಎನ್ನುವ ಗ್ರಹಿಕೆ. ಇದು ಸಾಧ್ಯ ವಾಗುವುದು ಸಮಾನತೆಯ ಪ್ರಜ್ಞೆ ಬಲಗೊಂಡ ಸಂದರ್ಭದಲ್ಲಿ, ದಲಿತರು ಮತ್ತು ದಲಿತೇತರರಿಗೆ ಸಮಾನರು ಎನ್ನುವ ಪ್ರಜ್ಞೆ ಜಾಗೃತಗೊಂಡ ಸಂದರ್ಭದಲ್ಲಿ, ಎರಡು ಪ್ರತಿಭಟನೆಯ ಪರಿಣಾಮ ಎದುರಿಸುವ ಶಕ್ತಿ ಕೂಡ ಇಲ್ಲಿ ಮುಖ್ಯ. ಪ್ರತಿಭಟನೆಯ ಪರಿಣಾಮ ಸೋಲಬಹುದು ಅಥವಾ ಗೆಲ್ಲಬಹುದು. ಗೆದ್ದರೆ ಸಮಸ್ಯೆಯಿಲ್ಲ, ಾದರೆ ಸೋತಾಗ ಏನು ಮಾಡಬಹುದೆನ್ನುವುದರ ಬಗ್ಗೆ ಖಚಿತತೆ ಇರುವವರು ಮಾತ್ರ ಪ್ರತಿಭಟಿಸಲು ಸಾಧ್ಯ. ಅಂದರೆ ಸೋತಾಗ ಕಳೆದುಕೊಳ್ಳುವ ಸ್ಥಳೀಯ ಆರ್ಥಿಕ ಅವಕಾಶಗಳ ಬದಲು ಬೇರೆ ಅವಕಾಶಗಳ ಸಾಧ್ಯತೆಯ ಭರವಸೆ ಇದ್ದಾಗ ಪ್ರತಿಭಟಿಸುವ ಸಾಧ್ಯತೆಗಳು ಹೆಚ್ಚು.

### ೫. ಸಂಘರ್ಷ ಪರಿಹಾರದ ಸೂಚ್ಯಂಕ

ಸಮಸ್ಯೆಗಳು ಪರಿಹಾರವಾಗದಿದ್ದಲ್ಲಿ ಪ್ರತಿಭಟನೆ ಆರಂಭವಾಗುತ್ತವೆ. ಇವತ್ತಿನ ಪರಿಸ್ಥಿತಿಯಲ್ಲಿ ಸಂಘರ್ಷವಿಲ್ಲದೆ ಪರಿಹಾರ ಲಭಿಸುವುದು ಕಷ್ಟವಾಗಿರುತ್ತದೆ. ಸಂಘರ್ಷದ ಮೂಲಕ ದಲಿತರು ಪ್ರತಿಭಟಿಸುತ್ತಾರೆ, ಪರಿಣಾಮವಾಗಿ, ಸಮಸ್ಯೆಯ ಪರಿಹಾರ ಹೇಗಾಗಿದೆ ಎನ್ನುವುದನ್ನು ಈ ಸೂಚ್ಯಂಕ ಮಾಪನ ಮಾಡುತ್ತದೆ. ಸಮಸ್ಯೆಗಳನ್ನು ಪರಿಹಾರ ಮಾಡದೆ ಮುಂದೂಡುವುದು, ಮೇಲ್ಜಾತಿಗಳಿಗೆ

ಅನುಕೂಲವಾಗುವ ರೀತಿಯಲ್ಲಿ ಪರಿಹರಿಸುವುದು, ದಲಿತರಿಗೆ ಅನುಕೂಲವಾಗುವ ರೀತಿಯಲ್ಲಿ ಪರಿಹರಿಸುವುದು ಮತ್ತು ಎಲ್ಲರಿಗೂ ಅನುಕೂಲವಾಗುವ ರೀತಿಯಲ್ಲಿ ಪರಿಹರಿಸುವುದು. ಹೀಗೆ ಸಮಸ್ಯೆಗಳನ್ನು ದಲಿತರಿಗೆ ಸಮಾಧಾನ ತರುವ ರೀತಿಯಲ್ಲಿ ಪರಿಗಣಿಸಲಾಗಿದೆ.

**೬. ಸ್ವಾತಂತ್ರ್ಯ ಅನುಭವದ ಸೂಚ್ಯಂಕ**

ಭಾರತಕ್ಕೆ ಸ್ವಾತಂತ್ರ್ಯ ಸಂಭ್ರಮ ಪ್ರಾಪ್ತವಾಯಿತು. ನಲ್ವತ್ತೇಳರ ಸ್ವಾತಂತ್ರ್ಯವನ್ನು ಎಲ್ಲರೂ ಪಡೆದರು ದೇಶದಲ್ಲಿ ಗಂಭೀರ ಸಮಸ್ಯೆಗಳಾದ ಅನಕ್ಷರತೆ, ಅಜ್ಞಾನ, ಮೂಢನಂಬಿಕೆ ಮತ್ತು ಅಸ್ಪೃಶ್ಯತೆ ಜೀವಂತವಾಗಿದೆ. ಅದರ ವ್ಯಾಪ್ತಿಯ ಜಾತಿ ವ್ಯವಸ್ಥೆಯಲ್ಲಿ ಎಲ್ಲರೂ ಪಿರಾಮಿಡ್‌ನ ಬುಡದಲ್ಲಿರುವರು ಅನುಭವಿಸುತ್ತಿದ್ದಾರೆಯೇ ಎನ್ನುವುದು ಈ ಸೂಚ್ಯಂಕ ಮಾಪನ ಮಾಡುತ್ತದೆ. ಬಹುತೇಕ ಸಂದರ್ಭದಲ್ಲಿ ನಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯವು ತಳಸ್ತರದ ವ್ಯಕ್ತಿಗೆ ವಿಸ್ತರಿಸುವಂತಹ ವಾತಾವರಣ ಅಗತ್ಯವಾಗಿ ಬೇಕಾಗಿರುತ್ತದೆ. ಆದರೆ ದಮನಕಾರಿ ನಡೆಗೆ ಅಂಕುಶ ತೊಡಿಸುವುದು ಸಂವಿಧಾನದ ಆಶಯದಿಂದ ಸ್ವಾತಂತ್ರ್ಯ ಅನುಭವ ಸೂಚ್ಯಂಕವಾಗಿದೆ. ಈ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ಈ ಸೂಚ್ಯಂಕವನ್ನು ಕಟ್ಟಲು ಐದು ಅಂಶಗಳನ್ನು ಅಥವಾ ಸೂಚಿಗಳನ್ನು ಬಳಸಲಾಗಿದೆ. ತಮಗಾಗುವ ಎಲ್ಲ ತಾರತಮ್ಯಗಳನ್ನು ಪ್ರಶ್ನಿಸುವ ಸ್ವಾತಂತ್ರ್ಯ ದಲಿತರಿಗಿದೆಯೇ? ದಲಿತೇತರರು ನಡೆದಾಡುವ ಎಲ್ಲ ಪ್ರದೇಶಗಳಲ್ಲೂ ನಡೆದಾಡುವ ಸ್ವಾತಂತ್ರ್ಯ ದಲಿತರಿಗಿದೆಯೇ? ದಲಿತೇತರರಿಗೆ ಲಭ್ಯವಾಗುವ ಎಲ್ಲ ಉದ್ಯೋಗದ ಅವಕಾಶಗಳನ್ನು ಪಡೆಯುವ ಸ್ವಾತಂತ್ರ್ಯ ದಲಿತರಿಗಿದೆಯೇ? ದಲಿತೇತರರಂತೆ ಊರಿನ ಎಲ್ಲ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವ ಸ್ವಾತಂತ್ರ್ಯ ದಲಿತರಿಗಿದೆಯೇ? ಇತ್ಯಾದಿ ಅಂಶಗಳನ್ನು ಈ ಸೂಚ್ಯಂಕ ಒಳಗೊಂಡಿದೆ.

**೭. ಜೀವನಮಟ್ಟ ಸೂಚ್ಯಂಕ**

ಪ್ರಸ್ತಾಪಿಸಿರುವ ಮೇಲಿನ ಆರು ಸೂಚ್ಯಂಕಗಳು ದಲಿತರ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುತ್ತದೆ. ದಲಿತರ ಆರ್ಥಿಕಾಭಿವೃದ್ಧಿಯನ್ನು ಮಾಪನ ಮಾಡಲು ಈ ಸೂಚ್ಯಂಕವನ್ನು ಬಳಸಲಾಗಿದೆ. ಜನರ ಜೀವನ ಮಟ್ಟದಲ್ಲಿ ಅವರು ವಾಸಿಸುವ ಮತ್ತು ಅವಲಂಬಿಸಿರುವ ಸಂಗತಿಗಳು ಮುಖ್ಯವಾಗಿರುತ್ತವೆ. ಅವರು ಹೊಂದಿರುವ ಮನೆಗಳು, ಭೂಹಿಡುವಳಿ, ಕೃಷಿಯೇತರ ಚಟುವಟಿಕೆಗಳು, ಕರೆಂಟ್ ಕನೆಕ್ಷನ್, ಮೋಟರ್ ಬೈಕ್, ಸ್ಕೂಟರ್ ಇವೆಲ್ಲವನ್ನು ಊರಲ್ಲಿರುವ ದಲಿತ ಹಾಗೂ ಅನುಪಾತಕ್ಕೆ ಹೋಲಿಸಿ ಮಾಪನ ಮಾಡಲಾಗಿದೆ. ಊರಲ್ಲಿ ದಲಿತೇತರರ ಮತ್ತು ದಲಿತ ಕುಟುಂಬಗಳು ೭೦:೩೦ ಅನುಪಾತದಲ್ಲಿದ್ದಾಗ ಮೇಲಿನ ಎಲ್ಲಾ ರೀತಿಯ ಸವಲತ್ತುಗಳು ೭೦:೩೦ ಅನುಪಾತದಲ್ಲಿರಬೇಕು. ದಲಿತರ ಆಸ್ತಿಪಾಸ್ತಿಗಳು ಈ ಅನುಪಾತಕ್ಕಿಂತ ಕಡಿಮೆ ಇದ್ದರೆ ದಲಿತರ ಜೀವನ ಮಟ್ಟ ಸೂಚ್ಯಂಕ ಕಡಿಮೆ ಇರುವುದೆಂದು ಪರಿಭಾವಿಸಬಹುದು.

## ೮. ದಲಿತ ಅಭಿವೃದ್ಧಿ ಲಿಂಗ ಸಂಬಂಧಿ ಸೂಚ್ಯಂಕ

ದಲಿತ ಮಹಿಳೆ ಬೇರೆ ಮಹಿಳೆಗಿಂತ ಭಿನ್ನ ವಾತಾವರಣದಲ್ಲಿ ಜೀವಿಸುತ್ತಿದ್ದಾಳೆ. ಅವರ ಆರೋಗ್ಯಕ್ಕೆ ಸಂಬಂಧಿಸಿದಂತೆ ಈ ಸೂಚ್ಯಂಕ ಮನನ ಮಾಡಬಹುದು. ದಲಿತ ಮಹಿಳೆ ಕೂಲಿ ಕಾರ್ಮಿಕಳಾಗಿದ್ದು ಆಕೆಯ ಜೀವನ ಅದನ್ನೇ ಅವಲಂಬಿಸಿರುವುದರಿಂದ ದಣಿವರಿಯದೇ ಕೆಲಸ ಮಾಡಬೇಕಾಗಿರುತ್ತದೆ. ಹೆರಿಗೆ ಸಮೀಪ ಅಥವಾ ಹೆರಿಗೆಯ ನಂತರ ಕನಿಷ್ಠ ಮೂರು ತಿಂಗಳು ಬಾಣಂತಿ ಮತ್ತು ಮಗುವಿನ ಆರೈಕೆ ಮುಖ್ಯವಾಗಿರುತ್ತದೆ. ಮಹಿಳೆಗೆ ಕನಿಷ್ಠ ಮೂರು ತಿಂಗಳ ವಿಶ್ರಾಂತಿ ಬೇಕೆನ್ನುವುದರ ಅರಿವಿನ ಬಗ್ಗೆ ಖಚಿತತೆ ಇದೆ. ಆದರೆ ಪ್ರಸವಪೂರ್ವ ಎಷ್ಟು ದಿನ ವಿಶ್ರಾಂತಿಯಿರಬೇಕೆನ್ನುವುದರ ಬಗ್ಗೆ ಖಚಿತತೆ ಇಲ್ಲ. ಪ್ರಸವ ಮುನ್ನ ಗರ್ಭಿಣಿ ಮಹಿಳೆ ಕೆಲವೊಂದು ಮುಂಜಾಗರೂಕತೆಯನ್ನು ವಹಿಸಬೇಕೆಂದು ತಜ್ಞ ವೈದ್ಯರು ಸೂಚಿಸುತ್ತಾರೆ. ಆಕೆಯು ಆ ಸಮಯದಲ್ಲಿ ಪರಿಶ್ರಮದ ತ್ರಾಸದಾಯಕ ದುಡಿಮೆ ತರುವಲ್ಲಿ ನಿರತಳಾಗಿರುತ್ತಾಳೆ. ಭಾರ ಎತ್ತುವುದು, ಜೋರಾಗಿ ನಡೆಯುವುದು. ಬೇಡ ಎಂಬ ಸಲಹೆಗಳನ್ನು ವೈದ್ಯರು ಪ್ರಸವಪೂರ್ವದಲ್ಲಿ ಗರ್ಭಿಣಿಯರಿಗೆ ಸಲಹೆ ನೀಡುತ್ತಾರೆ. ಈ ಕಾರಣಗಳಿಂದ ಪ್ರಸವದ ನಂತರ ಮೂರು ತಿಂಗಳು ವಿಶ್ರಾಂತಿ ಅಗತ್ಯ ಎನ್ನುವ ತೀರ್ಮಾನಕ್ಕೆ ಬರಲಾಗಿದೆ. ಆಸ್ಪತ್ರೆಯಲ್ಲಿ ಹೆರಿಗೆಯಾಗುವುದು ಸುರಕ್ಷಿತ ಎಂದಾಗಿದೆ. ದಮನಿತ ಸಮುದಾಯದ ಗರ್ಭಿಣಿ ಹೆಂಗಸರು ಕಬ್ಬಿಣ ಅಂಶವುಳ್ಳ ಮತ್ತು ಪೌಷ್ಠಿಕಾಂಶಗಳ ಕೊರತೆಯನ್ನು ಸರಿಪಡಿಸಲು ಸರಕಾರವು ಉಪಯುಕ್ತವಾದ ಹಲವೊಂದು ಕ್ರಿಯಾ ಯೋಜನೆ ರೂಪಿಸಿ ನೆರವು ನೀಡುತ್ತಿದೆ. ಇಂತಹ ಸವಲತ್ತುಗಳು ಎಷ್ಟರಮಟ್ಟಿಗೆ ತಲುಪುತ್ತಿದೆ ಎಂಬುದು ಮುಖ್ಯ ಸಂಗತಿಯಾಗಿದೆ.

## ೯. ಮೂಲ ಸೌಲಭ್ಯಗಳ ಸೂಚ್ಯಂಕ

ಆಧುನಿಕ ಯುಗದಲ್ಲಿ ಜನಸಾಮಾನ್ಯರೆಲ್ಲರಿಗೂ ಅಭಿವೃದ್ಧಿಯ ಮೂಲ ಸೌಕರ್ಯ ವಿಸ್ತರಿಸಲೇ ಬೇಕು. ಶುದ್ಧವಾದ ಕುಡಿಯುವ ನೀರು, ರಸ್ತೆ, ನೈರ್ಮಲ್ಯ ಚರಂಡಿ ಮುಂತಾದವುಗಳನ್ನು ಮೂಲ ಸೌಕರ್ಯಗಳೆಂದು ಪರಿಗಣಿಸಲಾಗಿದೆ. ಎಲ್ಲ ಊರುಗಳಲ್ಲಿ ಮತ್ತು ಪಟ್ಟಣಗಳಲ್ಲಿ ಈ ಮೂಲ ಸೌಕರ್ಯ ಅನುಕೂಲಸ್ಥರು ಇರುವ ವಾಸಿಸುವ ಪ್ರದೇಶಗಳಲ್ಲಿ ಕಂಡುಬರುತ್ತದೆ. ದಲಿತರ ಕೇರಿಯಲ್ಲಿ ಜನರಿಗೆ ಮೂಲ ಸೌಕರ್ಯ ನೀಡುವುದರಿಂದ ದಲಿತ ಮಾನವ ಅಭಿವೃದ್ಧಿಯುಂಟಾಗುತ್ತದೆ.

## ೧೦. ಶೈಕ್ಷಣೆ ಸೌಲಭ್ಯಗಳ ಲಭ್ಯತೆಯ ಸೂಚ್ಯಂಕ

ಕಲ್ಯಾಣ ರಾಷ್ಟ್ರದ ಪರಿಕಲ್ಪನೆಯಲ್ಲಿ ನಮ್ಮ ದೇಶದ ಸರ್ಕಾರಗಳು ಎಲ್ಲರಿಗೂ ಶಿಕ್ಷಣವನ್ನು ಸಂವಿಧಾನದತ್ತವಾಗಿ ನೀಡುತ್ತಿವೆ. ಅದನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕ್ರಿಯಾ ಯೋಜನೆ ರೂಪಿಸಿದ್ದಾರೆ. ಜಾರಿಯ ಸಂದರ್ಭದ ಅಡೆತಡೆಯನ್ನು ನಿವಾರಿಸುವುದು ಮುಖ್ಯ ಸಂಗತಿಯಾಗಿದೆ. ದಾಖಲಾತಿ, ಡ್ರಾಪ್‌ಔಟ್ ಹಾಗೂ ಟ್ರಾಸಿಶನ್ ರೇಟ್ ಈ ಮೂರು ಸೂಚಿಗಳನ್ನು ಬಳಸಿಕೊಂಡು ದಲಿತ ಮಕ್ಕಳ ಶೈಕ್ಷಣಿಕ ಅಭಿವೃದ್ಧಿಯನ್ನು ದಲಿತೇತರ ಮಕ್ಕಳ ಶೈಕ್ಷಣಿಕ ಅಭಿವೃದ್ಧಿಗೆ ಹೋಲಿಸಿ ಮಾಪನ ಮಾಡಲಾಗಿದೆ.

ಮೇಲಿನ ಎಲ್ಲ ಸೂಚ್ಯಂಕಗಳು ದಲಿತೇತರರ ಅಭಿವೃದ್ಧಿಗೆ ಹೋಲಿಸಿ ನೋಡಿದಾಗ ದಲಿತ ಅಭಿವೃದ್ಧಿ ಸ್ಥಿತಿಯನ್ನು ತೋರಿಸುತ್ತವೆ. ಪ್ರತಿ ಸೂಚ್ಯಂಕಗಳಲ್ಲೂ ಮೂರರಿಂದ ಐದು ಸೂಚಿಗಳಿವೆ. ಪ್ರತಿ ಸೂಚಿಗೂ ದಲಿತೇತರರ ಅಭಿವೃದ್ಧಿಗೆ ಹೋಲಿಸಿ ದಲಿತ ಅಭಿವೃದ್ಧಿಯನ್ನು ಗುರುತಿಸುವ ಅಂಕ ಅಥವಾ ವೈಟೇಜ್ ನೀಡಲಾಗಿದೆ. ದಲಿತೇತರರಿಗೆ ಹೋಲಿಸಿದಾಗ ದಲಿತ ಅಭಿವೃದ್ಧಿ ಕಡಿಮೆಯಿದ್ದರೆ ಸೂಚಿ ಶೂನ್ಯ ಅಂಕ ಅಥವಾ ವೈಟೇಜ್ ಪಡೆಯುತ್ತದೆ. ದಲಿತೇತರರಿಗೆ ಸಮಾದಾನದ ದಲಿತ ಅಭಿವೃದ್ಧಿ ಇದ್ದರೆ ಒಂದು ವೈಟೇಜ್ ನೀಡಲಾಗುವುದು. ದಲಿತೇತರರಿಗಿಂತ ಉತ್ತಮ ದಲಿತ ಅಭಿವೃದ್ಧಿ ಇದ್ದರೆ ಎರಡು ಅಂಕ ನೀಡಲಾಗುವುದು. ಎಲ್ಲ ಸೂಚಿಗಳು ಗಳಿಸಿದ ಮೌಲ್ಯ ಗಳನ್ನು ಕೂಡಿಸಿ ಅವುಗಳ ಗರಿಷ್ಠ ಮೌಲ್ಯದ ಮೊತ್ತದಿಂದ ಭಾಗಿಸಿ ಪ್ರತಿ ಸೂಚ್ಯಂಕದ ಮೌಲ್ಯವನ್ನು ಪಡೆಯಲಾಗಿದೆ. ಮೇಲಿನ ಹತ್ತು ಸೂಚ್ಯಂಕಗಳ ಸರಾಸರಿ ಮೌಲ್ಯವನ್ನು ಸಮಗ್ರ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಮೌಲ್ಯವೆಂದು ಪರಿಗಣಿಸಲಾಗಿದೆ.

ಪ್ರತಿ ಸೂಚ್ಯಂಕದ ಅಂಕಗಳು ಸಕಾರಾತ್ಮಕವಾಗಿ ಜೋಡಿಸಲ್ಪಟ್ಟಿವೆ. ಅಂದರೆ ಸೂಚ್ಯಂಕದ ಅಂಕ ಹೆಚ್ಚಾದಂತೆ ದಲಿತ ಮಾನವ ಅಭಿವೃದ್ಧಿ ಸ್ಥಿತಿ ಸುಧಾರಿಸಿದಂತೆ ಮತ್ತು ಕಡಿಮೆಯಾದಂತೆ ದಲಿತ ಅಭಿವೃದ್ಧಿ ಸ್ಥಿತಿ ಕಡಿಮೆ ಇರುವುದನ್ನು ತೋರಿಸುತ್ತದೆ. ಸಮಗ್ರ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಅಂಕ ೦.೪ಕ್ಕಿಂತ ಕಡಿಮೆ ಇದ್ದರೆ ಅಥವಾ ದಲಿತೇತರ ಅಭಿವೃದ್ಧಿಯ ಶೇ. ೪೦ರಷ್ಟು ಕೂಡ ದಲಿತ ಅಭಿವೃದ್ಧಿ ಇಲ್ಲದಿದ್ದರೆ ದಲಿತ ಮಾನವ ಅಭಿವೃದ್ಧಿ ಸ್ಥಿತಿ ಕೆಟ್ಟದಿದೆ ಎಂದರ್ಥ. ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಅಂಕ ೦.೪ ಮತ್ತು ೦.೬ ಮಧ್ಯೆ ಇದ್ದರೆ ಅಥವಾ ದಲಿತೇತರರ ಅಭಿವೃದ್ಧಿಯ ಶೇ.೪೦ ಮತ್ತು ೬೦ರ ಮಧ್ಯೆ ಇದ್ದರೆ ದಲಿತ ಮಾನವ ಅಭಿವೃದ್ಧಿ ಸ್ಥಿತಿ ಸಾಧಾರಣ ಇದೆ ಎಂದರ್ಥ. ದಲಿತ ಸೂಚ್ಯಂಕ ಅಂಕ ೦.೬ ಮತ್ತು ೦.೮ರ ನಡುವೆ ದಲಿತೇತರರ ಅಭಿವೃದ್ಧಿಯ ಶೇ. ೬೦ ಮತ್ತು ೮೦ರ ಮಧ್ಯೆ ಇದ್ದರೆ ಮಾನವ ಅಭಿವೃದ್ಧಿ ಸ್ಥಿತಿ ಉತ್ತಮ. ಸೂಚ್ಯಂಕ ಅಂಕ ೦.೮ಕ್ಕಿಂತ ಹೆಚ್ಚಿದ್ದರೆ ಅಥವಾ ದಲಿತೇತರರ ಅಭಿವೃದ್ಧಿಗೆ ಸಮಸಮ ಇದ್ದರೆ ದಲಿತ ಮಾನವ ಅಭಿವೃದ್ಧಿ ಸ್ಥಿತಿ ಅತ್ಯುತ್ತಮ ಎನ್ನುವ ತೀರ್ಮಾನಕ್ಕೆ ಬರಲಾಗುತ್ತದೆ.

**೩.೪. ಕರ್ನಾಟಕದಲ್ಲಿ ದಲಿತ ಮಾನವ ಅಭಿವೃದ್ಧಿ ಸ್ಥಿತಿಗತಿಗಳು**

ಸ್ಪರ್ಶರು ಮತ್ತು ಅಸ್ಪೃಶ್ಯರನ್ನು ಒಳಗೊಂಡ ಪರಿಶಿಷ್ಟ ಜಾತಿ ದಲಿತರ ಗುಂಪಿನಲ್ಲಿ ಸುಮಾರು ೧೦೧ ಜಾತಿಗಳಿಂತ ಹೆಚ್ಚು ಜಾತಿ ಮತ್ತು ಉಪಜಾತಿಗಳು ಅಸ್ತಿತ್ವದಲ್ಲಿವೆ. ಸಾಮಾನ್ಯವಾಗಿ ದಲಿತರು ಹೊಲಗೇರಿ ಎಂಬ ಪ್ರದೇಶ ಅಥವಾ ಗ್ರಾಮದ ಹೊರಗಿನ ಪ್ರತ್ಯೇಕ ಹಟ್ಟಿಗಳಲ್ಲಿ ವಾಸಿಸುತ್ತಿದ್ದವರಾಗಿದ್ದಾರೆ. ಈ ವಾಡಿಕೆಯನ್ನು ಇಂದಿನ ದಿವಸಗಳಲ್ಲಿ ಕಾನೂನುಬಾಹಿರವೆಂದು ಮಾಡಲಾಗಿದೆ ಅಷ್ಟೇ. ಆದಿ ಕರ್ನಾಟಕ, ಹೊಲೆಯ, ಚಲವಾದಿ, ಮಹಾರ್, ಮಾಲ, ಮಾದಿಗ, ಮಾಂಗ, ಮೋಚಿ, ಆದಿದ್ರಾವಿಡ, ಸಮಗಾರ, ಢೋರ್, ಬಂಜಾರ ಮತ್ತು ಭೋವಿ ಇವುಗಳು ಪರಿಶಿಷ್ಟ ಜಾತಿಗಳ ಪೈಕಿ ಪ್ರಧಾನವಾದವುಗಳು, ಆದಿ ಕರ್ನಾಟಕ ಎನ್ನುವ ಹೆಸರಿನ ಸಮುದಾಯ

ಅತ್ಯಂತ ದೊಡ್ಡ ಗುಂಪಾಗಿ (೩೪.೧೩ ಪ್ರತಿಶತ) ಹೊರಹೊಮ್ಮಿದ್ದು, ನಂತರ ಬಂಜಾರಾ(೧೧.೮೫ ಪ್ರತಿಶತ), ಭೋವಿ(೧೦.೦೪ ಪ್ರತಿಶತ) ಮತ್ತು ಆದಿದ್ರಾವಿಡರ (೬.೯೮ ಪ್ರತಿಶತ) ಜಾತಿಗಳಿವೆ(ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫ ಪು. ೨೩೦).

### ೩.೪.೧. ಕರ್ನಾಟಕದಲ್ಲಿ ದಲಿತ ಮಾನವ ಅಭಿವೃದ್ಧಿ ಅಧ್ಯಯನ

ಒಂದು ದೇಶ, ರಾಜ್ಯ, ಜಿಲ್ಲೆಯ ಮಾನವ ಅಭಿವೃದ್ಧಿ ಸ್ಥಿತಿಗತಿಯನ್ನಷ್ಟೇ ತಿಳಿದುಕೊಂಡರೆ ಸಾಲದು. ಸಮಾಜದ ಅವಕಾಶ ವಂಚಿತ ಹಾಗೂ ಶೋಷಿತ ದುರ್ಬಲ ಉಪಸಂಖ್ಯೆಯ ಮಾನವ ಅಭಿವೃದ್ಧಿ ಸಾಧನೆಯ ಮಟ್ಟಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫ರಲ್ಲಿ ಗಮನಿಸಿದರೆ ಇತರ ವರ್ಗಗಳ ಮಾನವ ಅಭಿವೃದ್ಧಿ ಮತ್ತು ದಲಿತ ಮಾನವ ಅಭಿವೃದ್ಧಿಯಲ್ಲಿ ವ್ಯತ್ಯಾಸವಿರುವುದನ್ನು ಕಾಣಬಹುದಾಗಿದೆ. ೨೦೦೫ರ ಕರ್ನಾಟಕ ಮಾನವ ಅಭಿವೃದ್ಧಿ ವರದಿ ಸೂಚಿ-೨೦೦೫ರಲ್ಲಿ ದಲಿತರ ಆಯುಷ್ಯ, ಸಾಕ್ಷರತೆ, ಆದಾಯ, ಉತ್ಪನ್ನ, ಕರ್ನಾಟಕದ ಇತರ ವರ್ಗಗಳಿಗಿಂತ ಕಡಿಮೆ ಇರುವುದನ್ನು ಕಾಣಬಹದು. ಅಲ್ಲದೇ ೨೦೧೪ರಲ್ಲಿ ಸಂಯುಕ್ತ ದಲಿತ ಮಾನವ ಅಭಿವೃದ್ಧಿ ಸೂಚಿಯನ್ನು ಕರ್ನಾಟಕ ೩೦ ಜಿಲ್ಲೆಗಳಿಗೆ ಅಳವಡಿಸಿಕೊಂಡು ಕರ್ನಾಟಕ ಸರ್ಕಾರ ವರದಿ ಸಿದ್ಧಗೊಳಿಸಿದೆ. ಪ್ರಸ್ತುತ ಚರ್ಚಿಸುತ್ತಿರುವ ಕರ್ನಾಟಕ ಮಾನವ ಅಧ್ಯಯನ ವಿಷಯದಲ್ಲಿ ೨೦೦೫ರಲ್ಲಿ ಪ್ರಕಟವಾದ ಕರ್ನಾಟಕ ಮಾನವ ಅಭಿವೃದ್ಧಿ ವರದಿಯನ್ನು ಬಳಸಿಕೊಂಡು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳನ್ನು ಕೂಡಿಸಿ ಸಂಯಕ್ತವಾಗಿ ದಲಿತರು ಅನ್ನುವುದನ್ನು ಇಲ್ಲಿ ಪರಿಭಾವಿಸಿಕೊಳ್ಳಲಾಗಿದೆ.

## ಕೋಷ್ಟಕ ೩.೪–ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಮಾನವ ಅಭಿವೃದ್ಧಿ ಸೂಚಿ ೨೦೦೪

| ರಾಜ್ಯ ಜನಸಂಖ್ಯೆ ವರ್ಗ | ಜನನ ಕಾಲದ ನಿರೀಕ್ಷಿತ ಆಯುಷ್ಯ ಪ್ರಮಾಣ | ಸಾಕ್ಷರತಾ ದರ | ಸಂಯುಕ್ತ ದಾಖಲಾತಿ (೧–೧೨ನೇ ತರಗತಿ) | ತಲಾವಾರು ಚಾಲ್ತಿ ಆದಾಯ | ತಲಾವಾರು ಒಟ್ಟು ಆಂತರಿಕ ಉತ್ಪನ್ನ (ರೂ.ಗಳಲ್ಲಿ) | ತಲಾವಾರು ನೈಜ ಒಟ್ಟು ಆಂತರಿಕ ಉತ್ಪನ್ನ (ರೂ.ಗಳಲ್ಲಿ) | ಆರೋಗ್ಯ ಸೂಚ್ಯಂಕ | ಶಿಕ್ಷಣ ಸೂಚ್ಯಂಕ | ಆದಾಯ ಸೂಚ್ಯಂಕ | ಮಾನವ ಅಭಿವೃದ್ಧಿ ಸೂಚಿ |
|---|---|---|---|---|---|---|---|---|---|---|
| ಕರ್ನಾಟಕ | ೨೦೦೪ | | | | | | | | | |
| ಪರಿಶಿಷ್ಟ ಜಾತಿ | ೬೨ | ೫೨.೯ | ೮೧.೦೪ | ೬೯೫೧ | ೨೮೬೪ | ೧೩೭೯ | ೦.೬೧ | ೦.೬೩ | ೦.೪೩ | ೦.೫೩ |
| ಪರಿಶಿಷ್ಟ ಪಂಗಡ | ೬೧.೮ | ೪೮.೨ | ೩೭.೩೧ | ೫೩೭೯ | ೬೪೩೦ | ೧೪೧೪ | ೦.೬೧ | ೦.೬೧ | ೦.೫೬ | ೦.೫೪ |
| ಎಲ್ಲಾ ವರ್ಗ | ೬೫.೮ | ೬೬.೬ | ೮೦.೨೮ | ೫೩೭೯ | ೬೪೩೦ | ೧೪೧೪ | ೦.೬೧ | ೦.೫೬ | ೦.೪೪ | ೦.೫೪ |

ಮೂಲ: ೧. ೨೦೦೪ರ ಸಾಲಿನ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಜನನ ಕಾಲದ ನಿರೀಕ್ಷಿತ ಆಯುಷ್ಯ ಪ್ರಮಾಣ ಅಂದಾಜುಗಳು ಹಾಗೂ ತಲಾವಾರು ಆದಾಯ ಅಂದಾಜುಗಳ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಬಗ್ಗೆ ನಡೆಸಿದ ಮಾದರಿ ಸಮೀಕ್ಷೆಯನ್ನು ಆಧರಿಸಿದೆ. ೨. ಸಾಕ್ಷರತಾ ದರ ಮತ್ತು ೬–೧೮ ವರ್ಷ ವಯೋಗುಂಪಿನ ಮಕ್ಕಳ ಅಂಶವನ್ನು ೨೦೦೧ರ ಜನಗಣತಿಯಿಂದ ಪಡೆಯಲಾಗಿದೆ. ೩. ಒಟ್ಟು ದಾಖಲಾತಿ ಅನುಪಾತ ೧ ರಿಂದ ೧೨ನೇ ತರಗತಿವರೆಗಿನ ಅಂಕಿ–ಅಂಶಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರ ಕಛೇರಿ, ಕರ್ನಾಟಕ ಇವರಿಂದ ಪಡೆಯಲಾಗಿದೆ.

## ಲಿಂಗ ಸಂಬಂಧಿ ಮಾನವ ಅಭಿವೃದ್ಧಿ

ರಾಜ್ಯ ಮಟ್ಟದಲ್ಲಿ ಲಿಂಗ ಸಂಬಂಧಿ ಅಭಿವೃದ್ಧಿ ಸೂಚಿಯು ೧೯೯೧ರಲ್ಲಿ ೦.೫೨೫ರಿಂದ ೨೦೦೧ರಲ್ಲಿ ೦.೬೩೭ಕ್ಕೆ ಏರಿಕೆಯಾಗಿದ್ದು, ೧೦ ವರ್ಷಗಳ ಅವಧಿಯಲ್ಲಿ ಇದು ಶೇ. ೨೧ರಷ್ಟು ಏರಿಕೆ ದಾಖಲಾಗಿದೆ. ಲಿಂಗ ತಾರತಮ್ಯಗಳು ಬಹಳ ನಿಧಾನವಾಗಿ ಕಡಿಮೆಯಾಗುತ್ತಿವೆ. ಇದೇ ಅವಧಿಯಲ್ಲಿ ಮಾನವ ಅಭಿವೃದ್ಧಿ ಸೂಚಿಯ ಶೇ. ೨೦ರಷ್ಟು ಏರಿಕೆಗೆ ಹೋಲಿಸಿದರೆ ಲಿಂಗ ಸಂಬಂಧಿ ಅಭಿವೃದ್ಧಿ ಸೂಚಿ (ಜಿ.ಡಿ.ಐ.) ಅದಕ್ಕಿಂತ ಸ್ವಲ್ಪ ಮಾತ್ರವೇ ಅಧಿಕವಾಗಿದೆ. ಲಿಂಗ ಸಂಬಂಧಿ ಅಭಿವೃದ್ಧಿ ಸೂಚಿ ಸ್ಥಾನ ಪಟ್ಟಿಯು ೧೯೯೧ ಹಾಗೂ ೨೦೦೧ರಲ್ಲಿ ಮಾನವ ಅಭಿವೃದ್ಧಿ ಸೂಚಿ ಸ್ಥಾನ ಪಟ್ಟಿಯೊಂದಿಗೆ ಬಹುತೇಕ ಜಿಲ್ಲೆಗಳೊಂದಿಗೆ ಉತ್ತಮವಾಗಿ ಹೋಲಿಕೆಯಾಗುತ್ತದೆ. ಹೆಚ್ಚಿನ ಮಟ್ಟದ ಮಾನವ ಅಭಿವೃದ್ಧಿ ಸಾಧಿಸಿರುವ ಜಿಲ್ಲೆಗಳಲ್ಲಿ ಲಿಂಗ ತಾರತಮ್ಯ ಕಡಿಮೆ ಮಟ್ಟದಲ್ಲಿರುತ್ತದೆ ಮತ್ತು ಕಡಿಮೆ ಮಟ್ಟದ ಮಾನವ ಅಭಿವೃದ್ಧಿ ಸಾಧಿಸಿರುವ ಜಿಲ್ಲೆಗಳಲ್ಲಿ ಲಿಂಗ ತಾರತಮ್ಯ ಹೆಚ್ಚಿನ ಮಟ್ಟದಲ್ಲಿರುತ್ತದೆ ಎಂಬುದನ್ನು ಸೂಚಿಸುತ್ತದೆ.

ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರು ಅಲಕ್ಷ್ಯಗೊಳಗಾದಂತೆ ಪರಿಶಿಷ್ಟ ವರ್ಗಗಳನ್ನು ಸಹ ಗಣನೀಯ ಪ್ರಮಾಣದಲ್ಲಿ ಉದಾಸೀನ ಮಾಡಿದೆಯೆಂಬುದನ್ನು ಲಭ್ಯವಿರುವ ಅಂಕಿ–ಅಂಶಗಳು ವ್ಯಕ್ತಪಡಿಸುತ್ತವೆ. ಪರಿಶಿಷ್ಟ ಜಾತಿಗಳ ಮಾನವ ಅಭಿವೃದ್ಧಿ ಸಾಧನೆಯು (೦.೫೮೯) ಉತ್ತಮವಾಗಿದ್ದರೂ, ಅದು ಒಟ್ಟು ಜನಸಂಖ್ಯೆಯ ಮಾನವ ಅಭಿವೃದ್ಧಿ ಸಾಧನೆಗಿಂತ (೦.೬೫೦) ತೀರ ಕಡಿಮೆ ಇದೆ. ಈ ಅಂತರವು ಪರಿಶಿಷ್ಟ ಜಾತಿಗಳಿಗೆ ಶೇಕಡ, ೧೧ರಷ್ಟು ಮತ್ತು ಪರಿಶಿಷ್ಟ ವರ್ಗಗಳಿಗೆ ಶೇಕಡ ೧೨ರಷ್ಟು ಇದೆ. ಪರಿಶಿಷ್ಟ ಜಾತಿ ಮತ್ತು ವರ್ಗಗಳ ಮಾನವ ಅಭಿವೃದ್ಧಿ ಸೂಚಿಗಳು ೧೯೯೧ರಲ್ಲಿನ ಒಟ್ಟು ಜನಸಂಖ್ಯೆಯ ಮಾನವ ಅಭಿವೃದ್ಧಿ ಸೂಚಿಗೆ (೦.೫೪೧) ಸಮೀಪವಾಗಿವೆ. ೨೦೦೪ರಲ್ಲಿ ಪರಿಶಿಷ್ಟ ಜಾತಿಗಳ ಮಾನವ ಅಭಿವೃದ್ಧಿ ಸೂಚಿಯು ರಾಜ್ಯವು ೧೯೯೧ರಲ್ಲಿ ಹೊಂದಿದ ಮಾನವ ಅಭಿವೃದ್ಧಿ ಸೂಚಿಗಿಂತ ಶೇಕಡ ೬ರಷ್ಟು ಹೆಚ್ಚಾಗಿದ್ದರೆ, ೨೦೦೪ರಲ್ಲಿನ ಪರಿಶಿಷ್ಟ ವರ್ಗಗಳ ಮಾನವ ಅಭಿವೃದ್ಧಿ ಸೂಚಿಯು ೧೯೯೧ರಲ್ಲಿ ರಾಜ್ಯದ ಒಟ್ಟು ಜನಸಂಖ್ಯೆ ಹೊಂದಿದ ಮಟ್ಟವನ್ನು ಸಹ ಮುಟ್ಟಲು ಸಾಧ್ಯವಾಗಿಲ್ಲ. ಅದು ೧೯೯೧ರಲ್ಲಿ ಒಟ್ಟು ಜನಸಂಖ್ಯೆ ಹೊಂದಿದ ಮಾನವ ಅಭಿವೃದ್ಧಿ ಸೂಚಿಗಿಂತ ಶೇಕಡ ೦.೫೫ರಷ್ಟು ಕಡಿಮೆ ಇದೆ. ಕರ್ನಾಟಕದಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗಗಳ ಮಾನವ ಅಭಿವೃದ್ಧಿ ಸ್ಥಿತಿಯು ರಾಜ್ಯದ ಉಳಿದ ಜನ ವರ್ಗಕ್ಕಿಂತ ಒಂದು ದಶಕದಷ್ಟು ಹಿಂದಿದೆ. ಜನಸಂಖ್ಯೆಯ ಗಮನಾರ್ಹ ಭಾಗದಷ್ಟಿರುವ ಈ ವರ್ಗವು ರಾಜ್ಯದ ಜನಸಂಖ್ಯೆಯ ಇತರರಿಗಿಂತ ಸಾಮಾಜಿಕ ಆರ್ಥಿಕ ಅಭಿವೃದ್ಧಿಯಲ್ಲಿ ಇಷ್ಟೊಂದು ಹಿಂದಿರುವ ಅಂಶವು ಆತಂಕಪಡುವಂಥ ಸಂಗತಿಯಾಗಿದೆ. ಇಂತಹ ಸ್ಥಿತಿಯು ಸಾಮಾನ್ಯವಾಗಿ ಒಟ್ಟು ಭಾರತದ ಸ್ಥಿತಿಗಿಂತ ಉತ್ತಮವಾಗಿದ್ದು ರಾಷ್ಟ್ರದಲ್ಲಿ ಈ ವಿಷಯ ವ್ಯಾಪಕವಾದ ಆಯಾಮಗಳನ್ನು ಪಡೆದಿರುವುದನ್ನು ಪ್ರಸ್ತುತಪಡಿಸಿರುವ ಕೋಷ್ಟಕಗಳಲ್ಲಿ ಕಾಣಬಹುದಾಗಿದೆ.

## ಕೋಷ್ಟಕ-೩.೫-ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಸಾಕ್ಷರತೆ ಮತ್ತು ಆರ್ಥಿಕ ಸಂಗತಿಗಳು

| ರಾಜ್ಯ ಜನಸಂಖ್ಯಾ ಪ್ರವರ್ಗ | ಜನನ ಕಾಲದ ನಿರೀಕ್ಷಿತ | | ಸಾಕ್ಷರತಾ ದರ | | ಸಂಯುಕ್ತ ದಾಖಲಾತಿ | | ಆರ್ಥಿಕ ಚಟುವಟಿಕೆ ಯಲ್ಲಿ ತೊಡಗಿದ ಜನಸಂಖ್ಯೆ ಶೇಕಡ ಮಹಿಳೆ/ ಪುರುಷ | | ಮಹಿಳೆ ಕೃಷಿ, ಕೂಲಿದರ ಮತ್ತು ನಡುವಿನ ಅನುಪಾತ |
|---|---|---|---|---|---|---|---|---|---|
| | ಮಹಿಳೆ/ ಪುರುಷ | | ಮಹಿಳೆ/ಪುರುಷ | | ಮಹಿಳೆ/ ಪುರುಷ | | | | |
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |
| ಕರ್ನಾಟಕ-೨೦೦೪ ಪರಿಶಿಷ್ಟ ಜತಿ | ೬೩.೨ | ೬೦.೩ | ೪೧.೩೨ | ೬೩.೬೫ | ೮೦.೯೯ | ೮೬.೯೪ | ೪೦.೮೩ | ೫೯.೧೩ | ೦.೬೫ |
| ಪರಿಶಿಷ್ಟ ಪಂಗಡ | ೬೨ | ೬೧.೫ | ೩೬.೫೩ | ೫೯.೬೬ | ೬೮.೨೪ | ೩೬.೧ | ೪೧.೬೮ | ೫೮.೩೨ | ೦.೬೫ |
| ಎಲ್ಲಾ ವರ್ಗ | ೬೩ | ೬೪.೫ | ೫೬.೮೩ | ೩೬.೧ | ೩೩.೬೫ | ೮೨.೩೩ | ೩೫.೨೬ | ೬೪.೩೪ | ೦.೬೫ |

ಮೂಲ: ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫, ಯೋಜನಾ ಮತ್ತು ಸಾಂಖ್ಯಿಕ ಇಲಾಖೆ ಕರ್ನಾಟಕ ಸರ್ಕಾರ.

## ಕೋಷ್ಟಕ-೩.೬-ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವರಮಾನ ಮತ್ತು ಆರ್ಥಿಕ ಸಂಗತಿಗಳು

| ರಾಜ್ಯ ಜನಸಂಖ್ಯೆ ವರ್ಗ | ತಲಾವಾರು ಒಟ್ಟು ಆದಾಯ ಉತ್ಪನ್ನ | ಮಹಿಳೆಯರ ತಲಾವಾರು ಒಟ್ಟು ಆಂತರಿಕ ಉತ್ಪನ್ನ | ಪುರುಷರ ತಲಾವಾರು ಒಟ್ಟು ಆಂತರಿಕ ಉತ್ಪನ್ನ | ಆರೋಗ್ಯ ಸೂಚ್ಯಂಕ | ಸಮಾನ ಹಂಚಿಕೆಯಾದ ಶಿಕ್ಷಣ ಸೂಚ್ಯಂಕ | ಆದಾಯ ಸೂಚ್ಯಂಕ | ಲಿಂಗ ಸಂಬಂಧಿ ಅಭಿವೃದ್ಧಿ ಸೂಚಿ |
|---|---|---|---|---|---|---|---|
| ೧ | ೧೧ | ೧೨ | ೧೩ | ೧೪ | ೧೫ | ೧೬ | ೧೭ |
| ಕರ್ನಾಟಕ-೨೦೦೪ ಪರಿಶಿಷ್ಟ ಜಾತಿ | ೧೩೯೯ | ೧೦೮೦ | ೨೩೪೧ | ೦.೬೧೫ | ೦.೬೨೨ | ೦.೮೫೪ | ೦.೫೩೪ |
| ಪರಿಶಿಷ್ಟ ಪಂಗಡ | ೧೪೧೪ | ೯೧೦ | ೧೯೦೪ | ೦.೬೧೧ | ೦.೫೪೮ | ೦.೪೨೨ | ೦.೫೨೩ |
| ಎಲ್ಲಾ ವರ್ಗ | ೨೮೫೪ | ೧೫೨೦ | ೪೧೪೧ | ೦.೬೭೬ | ೦.೩೦೪ | ೦.೫೨೬ | ೦.೬೩೭ |

ಮೂಲ: ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೪, ಯೋಜನಾ ಮತ್ತು ಸಾಂಖ್ಯಿಕ ಇಲಾಖೆ, ಕರ್ನಾಟಕ ಸರ್ಕಾರ, ೨೦೦೬.

**ಕೋಷ್ಟಕ-೩.೭ ಸಾಮಾಜಿಕ ಗುಂಪುಗಳ ಮಾನವ ಅಭಿವೃದ್ಧಿ ಸೂಚಿ ಮತ್ತು ಲಿಂಗ ಅಭಿವೃದ್ಧಿ ಸೂಚಿ ೨೦೦೧**

| ಸೂಚಿ | ಎಲ್ಲಾ ವರ್ಗ | ಪರಿಶಿಷ್ಟ ಜಾತಿ | ಅಂತರ | ಪರಿಶಿಷ್ಟ ಪಂಗಡ | ಅಂತರ |
|---|---|---|---|---|---|
| ಮಾನವ ಅಭಿವೃದ್ಧಿ ಸೂಚಿ | ೦.೬೫೦ | ೦.೫೭೪ | ೦.೦೭೦ | ೦.೫೩೯ | ೦.೧೧೧ |
| ಲಿಂಗ ಅಭಿವೃದ್ಧಿ ಸೂಚಿ | ೦.೬೩೭ | ೦.೫೬೪ | ೦.೦೭೩ | ೦.೫೨೭ | ೦.೦೦೧ |
| ಮಾನವ ಅಭಿವೃದ್ಧಿ ಮತ್ತು ಲಿಂಗ ಅಭಿವೃದ್ಧಿ ಸೂಚಿಗಳ ನಡುವಿನ ವ್ಯತ್ಯಾಸ | ೦.೦೧೩ | ೦.೦೧೧ | – | ೦.೦೧೨ | – |

**ಮೂಲ:** ೧. ೨೦೦೪ರ ಸಾಲಿನ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಜನನ ಕಾಲದ ನಿರೀಕ್ಷಿತ ಆಯುಷ್ಯ ಪ್ರಮಾಣ ಅಂದಾಜುಗಳು ಹಾಗೂ ತಲಾವಾರು ಆದಾಯ ಅಂದಾಜುಗಳ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಬಗ್ಗೆ ನಡೆಸಿದ ಮಾದರಿ ಸಮೀಕ್ಷೆಯನ್ನು ಆದರಿಸಿದೆ.

೨. ಒಟ್ಟು ದಾಖಾಲಾತಿ ಅನುಪಾತ ೧ರಿಂದ ೧೨ನೇ ತರಗತಿವರೆಗಿನ ಅಂಕಿ-ಅಂಶಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತ ಕಛೇರಿ ಕರ್ನಾಟಕ ಸರ್ಕಾರ ಇವರಿಂದ ಪಡೆಯಲಾಗಿದೆ.

ಲಿಂಗ ಸಂಬಂಧಿ ಅಭಿವೃದ್ಧಿ ಸೂಚಿಯಿಂದ ಮಾಪನ ಮಾಡಿದ ಪ್ರಕಾರ ಲಿಂಗ ಸಮಾನತೆಯ ವಿಷಯದಲ್ಲಿ ಪರಿಶಿಷ್ಟ ಜಾತಿಯ ಮಹಿಳೆಯರ ಸ್ಥಿತಿಯು ಪರಿಶಿಷ್ಟ ವರ್ಗದ ಮಹಿಳೆಯರ ಸ್ಥಿತಿಗಿಂತ ಉತ್ತಮವಾಗಿದೆ. ಆದರೆ ಇದು ಕೇವಲ ಕೆಲ ಅಂಶಿಕ ವ್ಯತ್ಯಾಸ ಮಾತ್ರ. ಏಕೆಂದರೆ ರಾಜ್ಯದ ಸರಾಸರಿ ಲಿಂಗ ಸಂಬಂಧಿ ಅಭಿವೃದ್ಧಿ ಸೂಚಿಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಮಹಿಳೆಯರ ಲಿಂಗ ಅಭಿವೃದ್ಧಿ ಸೂಚಿಯಲ್ಲಿ ೨೦೦೪ರ ಲಿಂಗ ಸಂಬಂಧಿ ಅಭಿವೃದ್ಧಿ ಸೂಚಿಯಲ್ಲಿನ ಪ್ರತಿಯೊಂದು ಸೂಚ್ಯಂಕದಲ್ಲಿನ ಮೌಲ್ಯಗಳು ೧೯೯೧ರ ರಾಜ್ಯ ಲಿಂಗ ಸಂಬಂಧಿ ಅಭಿವೃದ್ಧಿ ಸೂಚಿ ಮೌಲ್ಯಗಳಿಗೆ ಹತ್ತಿರದ್ದಾಗಿದೆ. ೨೦೦೧ರ ಅಂಕಿಗಳಂತೆ ಈ ತಾರತಮ್ಯದ ಆಂತರಿಕ ವ್ಯಾಪ್ತಿಯ ಇಡೀ ಜನಸಂಖ್ಯೆಗೆ ೦.೦೧೩ ಆಗಿದ್ದರೆ ಪರಿಶಿಷ್ಟ ಪಂಗಡ ೦.೦೧೨ ಮತ್ತು ಪರಿಶಿಷ್ಟ ಜಾತಿಗಳಿಗೆ ೦.೧೧ ಆಗಿದೆ. ಆದಾಗ್ಯೂ ಸಹ ಮಾನವ ಅಭಿವೃದ್ಧಿ ಸೂಚಿ ಮತ್ತು ಲಿಂಗ ಸಂಬಂಧಿ ಅಭಿವೃದ್ಧಿ ಸೂಚಿಗಳಲ್ಲಿ ರಾಜ್ಯ ಸರಾಸರಿಗೂ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಸೂಚಿಗಳಿಗೂ ಬಹಳಷ್ಟು ವ್ಯತ್ಯಾಸವಿರುವುದು ವ್ಯಕ್ತವಾಗುತ್ತದೆ.

**ಸಾಮಾಜಿಕ ಗುಂಪುವಾರು ಬಡತನ ಮತ್ತು ಜೀವನ ಮಟ್ಟ.**

ರಾಜ್ಯದ ಗ್ರಾಮೀಣ ಜನಸಂಖ್ಯೆಯಲ್ಲಿ ಶೇ. ೨೦ರಷ್ಟು ಪರಿಶಿಷ್ಟ ಜಾತಿಯವರಾಗಿದ್ದಾರೆ. ಪರಿಶಿಷ್ಟ ಪಂಗಡದವರ ಪ್ರಮಾಣ ಶೇ.೮. ಒಟ್ಟಾರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಕುಟುಂಬಗಳ ಪ್ರಮಾಣ ಶೇ. ೨೮ರಷ್ಟು, ಇವೆರಡು ಸಾಮಾಜಿಕ ಗುಂಪುಗಳಲ್ಲಿ ಸರಾಸರಿ ಅನುಭೋಗದ ಮಟ್ಟವು ನಿಕೃಷ್ಟವಾಗಿದೆ. ಇವೆರಡು ಗುಂಪುಗಳಲ್ಲಿ ಬಡತನ ಪ್ರಮಾಣ ಶೇ. ೨೫ರಷ್ಟು ಇದೆ. ಕರ್ನಾಟಕದ ನಗರ ಪ್ರದೇಶದಲ್ಲಿ ಇವೆರಡು ಸಾಮಾಜಿಕ ಗುಂಪುಗಳ ಪ್ರಮಾಣ ಸುಮಾರು ಶೇ. ೧೫ರಷ್ಟಿದ್ದು ಬಡತನದ ಪ್ರಮಾಣ ಶೇ. ೫೦ರಷ್ಟಾಗಿದೆ. ಉಳಿದ ಸಾಮಾಜಿಕ ಗುಂಪುಗಳಲ್ಲಿ ಬಡತನದ ಪ್ರಮಾಣದ ಕೇವಲ ಶೇ. ೧೬ರಷ್ಟಾಗುತ್ತದೆ. ಹೀಗಾಗಿ ಈ ಸಾಮಾಜಿಕ ಗುಂಪುಗಳು ಮತ್ತು ಉಳಿದ ಜನವರ್ಗಗಳ ನಡುವೆ ಜೀವನ ಮಟ್ಟದ ಸುಧಾರಣೆಗೆ ಸಂಬಂಧಿಸಿದಂತೆ ತೀವ್ರತರವಾದ ಅಂತರಗಳಿದ್ದು, ಹೋಗಲಾಡಿಸಬೇಕಾಗಿದೆ.

ರಾಜ್ಯದ ಗ್ರಾಮೀಣ ಜನಸಂಖ್ಯೆಯ ಉಳಿದ ಸಾಮಾಜಿಕ ಗುಂಪುಗಳ ಪೈಕಿ ಇತರೆ ಹಿಂದುಳಿದ ವರ್ಗಗಳ (ಒ.ಬಿ.ಸಿ) ಪ್ರಮಾಣ ಶೇ. ೩೯ ಆಗಿದ್ದು, ಅವರಲ್ಲಿ ಶೇ. ೧೯ರಷ್ಟು ಜನರು ಬಡತನ ರೇಖೆಗಿಂತ ಕೆಳಗಿನ ಜೀವನ ಮಟ್ಟವನ್ನು ಹೊಂದಿದ್ದಾರೆ. ಈ ಪ್ರಮಾಣವು ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡಗಳಲ್ಲಿನ ಬಡತನ ಪ್ರಮಾಣಕ್ಕಿಂತ ಗಣನೀಯವಾಗಿಯೂ ಕಡಿಮೆ ಇದೆ. ನಗರ ಕರ್ನಾಟಕದಲ್ಲಿ ಇತರೆ ಹಿಂದುಳಿದ ವರ್ಗಗಳ ಪ್ರಮಾಣ ಶೇ. ೩೧ರಷ್ಟಿದ್ದು, ಅವರಲ್ಲಿ ಸುಮಾರು ಶೇ. ೩೦ರಷ್ಟು ಜನರು ಬಡವರಾಗಿದ್ದಾರೆ. ಅಂದರೆ ಗ್ರಾಮೀಣ ಪ್ರದೇಶದಲ್ಲಿ ಈ ಸಮುದಾಯದ ಬಡತನ ಪ್ರಮಾಣಕ್ಕಿಂತ ನಗರ ಬಡತನ ಪ್ರಮಾಣವು ಎರಡು ಪಟ್ಟು ಅಧಿಕವಾಗಿದೆ.

**ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮಕ್ಕಳ ಬಡತನ**

ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳ ಮಕ್ಕಳಲ್ಲಿ ಸರ್ಕಾರ ಗಮನ ನೀಡಬೇಕಾದ ವರ್ಗವೆಂದರೆ ೧೫ ವರ್ಷಕ್ಕಿಂತ ಕಡಿಮೆಯಿರುವ ಮಕ್ಕಳು; ಅವರ ಬಡತನವು ವಾಸ್ತವಾಂಶಗಳ ಮೇಲೆ ಹಾಗೂ ಮಾನವ ಅಭಿವೃದ್ಧಿ ಸಾಮರ್ಥ್ಯ ಇವೆರಡರ ಮೇಲೂ ವೈಯಕ್ತಿಕವಾಗಿ ಅಷ್ಟೇ ಅಲ್ಲ ಇಡೀ ಸಮಾಜದ ಮೇಲೂ ತೀವ್ರ ದುಷ್ಪರಿಣಾಮ ಬೀರುತ್ತದೆ. ಶಿಕ್ಷಣ ಆರೋಗ್ಯ ಹಾಗೂ ಆಹಾರ ಭದ್ರತೆಗಳಿಗೆ ಸಂಬಂಧಿಸಿದಂತೆ ಪರಿಶಿಷ್ಟ ಜಾತಿ ಕುಟುಂಬಗಳ ಮಕ್ಕಳ ಸಾಧನೆಯು ಉಳಿದ ಕುಟುಂಬಗಳ ಮಕ್ಕಳ ಸಾಧನೆಗಿಂತ ತುಂಬಾ ಕಡಿಮೆ ಪ್ರಮಾಣದಲ್ಲಿದೆ.

ಪೌಷ್ಠಿಕ ಕೊರತೆಯನ್ನು ಅನುಭವಿಸುತ್ತಿರುವ ಮಕ್ಕಳ ಪ್ರಮಾಣವನ್ನೇ ಬಡತನವೆಂದು ವ್ಯಾಖ್ಯಾನಿಸಬಹುದು. ಸಾಮಾನ್ಯವಾಗಿ ಎಲ್ಲಾ ಭಾಗಗಳಲ್ಲೂ ಬಡತನದಲ್ಲಿರುವ ಮಕ್ಕಳ ಪ್ರಮಾಣವು ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಸಾಧಾರಣವಾಗಿ ಸಮಾನವಾಗಿದೆ. ಕರ್ನಾಟಕದಲ್ಲಿ ಗ್ರಾಮೀಣ ಕುಟುಂಬಗಳಲ್ಲಿನ ಶೇ. ೨೫ರಷ್ಟು ಮಕ್ಕಳು ಬಡತನದಿಂದ ನರಳುತ್ತಿದ್ದಾರೆ. ನಗರ ಗ್ರಾಮೀಣ ಪ್ರದೇಶದ ಮತ್ತು ಮಕ್ಕಳ ಬಡತನ ಮಟ್ಟಕ್ಕಿಂತ ಒಂದೂವರೆ ಪಟ್ಟು ಅಧಿಕವಾಗಿದೆ.

**ಕರ್ನಾಟಕದಲ್ಲಿ ಪರಿಶಿಷ್ಟ ಜಾತಿಗಳಿಗೆ ಭೂಮಿ, ಉದ್ಯೋಗ ಮತ್ತು ಆದಾಯ ಹಂಚಿಕೆ;**

ಭಾರತದ ಬಹುತೇಕ ಭಾಗಗಳಲ್ಲಿ ಆರ್ಥಿಕ ಸ್ಥಾನಮಾನ ಮತ್ತು ಆರ್ಥಿಕ ಹಂಚಿಕೆಗಳ ರಚನೆಗಳ ನಡುವೆ ಸಹ ಸಂಬಂಧವಿದೆ. ಕಾರಣವೇನೆಂದರೆ ಐತಿಹಾಸಿಕವಾಗಿ ಉದ್ಯೋಗಗಳು, ಆದಾಯ ಮತ್ತು ಆಸ್ತಿಗಳ ಅವಕಾಶಗಳನ್ನು ಕೆಳಜಾತಿಯವರಿಗೆ ಹೋಲಿಸಿದರೆ ಮೇಲ್ಜಾತಿಯವರು ಅಧಿಕವಾಗಿ ಹೊಂದಿದ್ದಾರೆ. ಆಧುನಿಕ ಕಾಲದಲ್ಲಿ ಜಾತಿ ಕಸುಬುಗಳ ನಡುವಿನ ಸಂಬಂಧವು ಶಿಥಿಲಗೊಳ್ಳುತ್ತಿದೆ. ಪರಿಶಿಷ್ಟ ಜಾತಿಗಳಲ್ಲಿ ಗಣನೀಯವಾದ ಉದ್ಯೋಗ ವೈವಿಧ್ಯತೆಯನ್ನು ತರುವಲ್ಲಿ ಸರ್ಕಾರದ ನೀತಿಗಳು ಪ್ರಯತ್ನಿಸಿದರೂ ಸಹ ಅಸ್ಪೃಶ್ಯರೆನಿಸಿಕೊಂಡಿರುವವರು ಕೆಳಮಟ್ಟದ ವರಮಾನದ ಕನಿಷ್ಟ ಮಾನವ ಅಭಿವೃದ್ಧಿ ಸೂಚಿಗಳೊಂದಿಗೆ ಬಹದೊಡ್ಡ ಸಂಖ್ಯೆಯಲ್ಲಿದ್ದಾರೆ.

ಬಹುತೇಕರು ಜೀವನೋಪಾಯಕ್ಕಾಗಿ ಕೃಷಿಯನ್ನು ಅವಲಂಬಿಸಿರುತ್ತಾರೆ. ದಲಿತರು ಭೂ-ಮಾಲೀಕರ ಜಮೀನುಗಳಲ್ಲಿ ಕೂಲಿಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ. ಅದರಲ್ಲಿ ಭೂ ಒಡೆತನ ಅವಲೋಕಿಸಿದರೆ, ಶಿವರಾಮ ಕಾರಂತರ ಚೋಮನ ದುಡಿ ಮಾದರಿಯ ಬದುಕುಗಳೇ ಆಗಿರುತ್ತವೆ. ಸಾಮಾನ್ಯವಾಗಿ ಸಣ್ಣ ಹಿಡುವಳಿದಾರರಾಗಿರುವ ದಲಿತರು ಹೊಂದಿರುವ ಹಿಡುವಳಿ ಪ್ರಮಾಣ ಅಲ್ಪವೇ ಆಗಿರುತ್ತದೆ.

೨೦೦೧ರ ಜನಗಣತಿಯ ಪ್ರಕಾರ ಒಟ್ಟು ಸಾಗುವಳಿ ಹಿಡುವಳಿಯ ಪ್ರಮಾಣ ೭೦.೭೯ ಲಕ್ಷ ಹೆಕ್ಟೇರು ಭೂಮಿ ಹೊಂದಿದ್ದಾರೆ. ರಾಜ್ಯದ ಪರಿಶಿಷ್ಟ ಜಾತಿ ಜನಸಂಖ್ಯೆಯ ೧೯.೨೧ ಪ್ರತಿಶತ ಅವರ ಜನಸಂಖ್ಯೆಗನುಗುಣವಾಗಿ ಭೂ ಒಡೆತನ ಲಭಿಸಿಲ್ಲ, ಲಭಿಸಿದ್ದರೆ ತುಂಡು ಭೂ ಭೂಮಿಯ ಒಡೆತನವಾಗಿರುತ್ತದೆ. "ಉಳುವವನೇ ಭೂಮಿಯ ಒಡೆಯ" ಎಂಬ ಶಾಸನ ಪರಿಣಾಮಕಾರಿಯಾಗಿ ಜಾರಿಯಾಗಿದ್ದರೆ ಭೂಮಿ ಹಂಚಿಕೆಯಲ್ಲಿ ಅಸಮರ್ಥ ಕಾಣುತ್ತಿರಲಿಲ್ಲ, ಸರ್ಕಾರದ ಭೂಮಿ ದಲಿತರಿಗೆ ಲಭಿಸಿದ್ದರೂ ಸ್ವತಂತ್ರ ಭಾರತದಲ್ಲಿ ಜೀತಗಾರಿಕೆಯಿಂದ ವಿಮುಕ್ತಿ ಹೊಂದಿ, ದಲಿತರು ಭೂಮಿ ಉಳುವ ಸ್ಥಿತಿವಂತರಾಗಬೇಕಿತ್ತು. ಆದರೆ ಸರ್ಕಾರದ ಭೂ ನೀತಿಗಳು ವಿಶೇಷವಾಗಿ ಅಸ್ಪೃಶ್ಯರೆನಿಸಿಕೊಂಡಿರುವ ಜನರಿಗೆ ತಲುಪಿದ್ದರೆ ವರಮಾನದಲ್ಲಿ ಚೇತರಿಕೆ ಆಗಿ ಮಾನವ ಅಭಿವೃದ್ಧಿ ಸೂಚಿಗಳೊಂದಿಗೆ ಬಹುದೊಡ್ಡ ಸಂಖ್ಯೆಯಲ್ಲಿ ಅವಕಾಶ ಪ್ರಾಪ್ತವಾಗುತ್ತಿತ್ತು.

**ಭೂ ಒಡೆತನದ ಮಾದರಿಗಳು:**

ಸ್ವಾತಂತ್ರ್ಯ ನಂತರದಲ್ಲಿ ದೇಶವನ್ನು ಆಳಿದ ಎಲ್ಲಾ ರಾಜಕೀಯ ಪಕ್ಷಗಳು ಭೂಮಿಗೆ ಸಂಬಂಧಿಸಿದಂತೆ ಉತ್ತಮವಾದ ಚಿಂತನೆಯನ್ನು, ಸಾಮಾಜಿಕ ನ್ಯಾಯದ ಬಗ್ಗೆ ಕಠಿಣವಾಗಿ ಚಿಂತಿಸಿದ್ದರೆ ತಳಹಂತದ ಅಂಚಿನ ಜನರ ಆರ್ಥಿಕ ಸ್ಥಿತಿಗತಿ ಉತ್ತಮವಾಗಿರುತ್ತಿತ್ತು. ದುರಂತವೆಂದರೆ, ಬಡತನದ ವಿಚಾರಕ್ಕೆ ಬಂದರೆ ಶೇ. ೪೫ರಷ್ಟು ಜನರು ಒಪ್ಪತ್ತಿನ ಊಟಕ್ಕಾಗಿ ಪರದಾಡುತ್ತಿರುವುದನ್ನು ಕಾಣುತ್ತಿದ್ದೇವೆ. ಭೂಮಿಯು ಉಳ್ಳವರ ಪಾಲಾಗಿದೆ. ಸರಿಯಾಗಿ ಭೂಮಿ ಇಲ್ಲದವರಿಗೆ ಹಂಚಿಕೆ ಸಮರ್ಪಕವಾಗಿಲ್ಲ. ಅಂಬೇಡ್ಕರ್ ಆಶಯಗಳು, ಸಂವಿಧಾನದ ಆಶಯಗಳು ಊರ್ಜಿತಗೊಳಿಸಿ ಕೊಂಡಿಲ್ಲ. ಆಳುವ ವರ್ಗಗಳಿಗೆ ಭೂಮಿ ಕೇಳಿದರೆ ಅಕ್ಕಿ-ಗೋಧಿ-ರಾಗಿ ನೀಡುತ್ತಿದ್ದಾರೆ. ಹಸು ಕೇಳಿದರೆ ಹಾಲು ಕೊಡುತ್ತಿದ್ದಾರೆ. ಇಂತಹ ಪರಿಸ್ಥಿತಿಯ ಭೂಮಾದರಿ ದಲಿತರಿಗಿ ಪ್ರಾಪ್ತವಾಗಿದೆ.

## ಕೋಷ್ಟಕ-೩.೮. ಸಾಮಾಜಿಕ ಗುಂಪುವಾರು ಜೀವನಮಟ್ಟಗಳು ಅಸಮಾನತೆ ಹಾಗೂ ಬಡತನ ಕರ್ನಾಟಕ ಹಾಗೂ ಭಾರತ (೧೯೯೦-೨೦೦೦)

| ಸಾಮಾಜಿಕ ಗುಂಪುಗಳು | ಒಟ್ಟು ಜನಸಂಖ್ಯೆಯಲ್ಲಿ ಪಾಲು(%) | ಸರಾಸರಿ ತಲಾ ಅನುಭೋಗ (ರೂ.ಮಾಹೆ) | ಬಡತನ ಪ್ರಮಾಣ (%) ಲಾರೆನ್ಜ್ | ಅನುಭೋಗ ಹಂಚಿಕೆಯಲ್ಲಿನ ಸಾಪೇಕ್ಷ ಅಸಮಾನತೆ (ಲಾರೆನ್ಜ್ ಅನುಪಾತ (%) | ಒಟ್ಟು ಜನಸಂಖ್ಯೆಯಲ್ಲಿ ಪಾಲು (%) (ರೂ.ಗಳಲ್ಲಿ) | ಸರಾಸರಿ ತಲಾ ಅನುಭೋಗ (ರೂ.ಮಾಹೆ) | ಬಡತನ ಪ್ರಮಾಣ (%) | ಅನುಭೋಗ ಹಂಚಿಕೆಯಲ್ಲಿ ಸಾಪೇಕ್ಷ ಅಸಮಾನತೆ (ಲಾರೆನ್ಜ್ ಅನುಪಾತ)(%) |
|---|---|---|---|---|---|---|---|---|
| | ಗ್ರಾಮೀಣ ಕರ್ನಾಟಕ | | | | ಗ್ರಾಮೀಣ ಭಾರತ | | | |
| ಪರಿಶಿಷ್ಟ ಜಾತಿ | ೧೯.೬೫ | ೪೧೯.೩೯ | ೨೧.೬೩ | ೨೩.೧೩ | ೨೭.೧೩ | ೪೧೮.೫೧ | ೩೫.೮೨ | ೨೩.೭೬ |
| ಪರಿಶಿಷ್ಟ ಪಂಗಡ | ೭.೮೩ | ೪೦೪.೨೮ | ೨೪.೭೮ | ೧೩.೩೧ | ೬.೭ | ೩೮೩.೬೯ | ೪೫.೧೨ | ೨೪.೮೧ |
| ಇತರ ಹಿಂದುಳಿದ ವರ್ಗಗಳು | ೩೧.೧೫ | ೫೦೭.೪೫ | ೧೬.೧೫ | ೨೫.೫೩ | ೫೯.೦೪ | ೫೭೭.೨೨ | ೧೫.೮೨ | ೨೬.೮೯ |
| ಇತರೆ | ೩೩.೩೧ | ೫೬೦.೦೮ | ೧೨.೧೧ | ೨೫.೫೩ | ೫೯.೦೪ | ೫೭೭.೨೨ | ೧೫.೮೬ | ೨೬.೮೯ |
| ಒಟ್ಟು | ೧೦೦ | ೪೯೯.೯ | ೧೮.೦೮ | ೨೪.೪೮ | ೧೦೦ | ೪೮೫.೮೮ | ೨೭.೭೩ | ೨೬.೫೮ |
| | ನಗರ ಕರ್ನಾಟಕ | | | | ನಗರ ಭಾರತ | | | |
| ಪರಿಶಿಷ್ಟ ಜಾತಿ | ೧೦.೩೯ | ೫೬೨.೭೨ | ೪೭.೫ | ೨೭.೬೫ | ೧೪.೩೫ | ೬೦೮.೭೬ | ೩೮.೧೨ | ೨೩.೮೭ |
| ಪರಿಶಿಷ್ಟ ಪಂಗಡ | ೪.೫ | ೬೩೪.೨ | ೫೦.೬೩ | ೩೩.೪೯ | ೩.೪ | ೬೯೦.೫೨ | ೩೫.೨೯ | ೩೨.೮ |
| ಇತರ ಹಿಂದುಳಿದ ವರ್ಗಗಳು | ೩೦.೭೫ | ೮೨೯.೦೫ | ೨೯.೦೯ | ೩೦.೯೨ | ೩೦.೩೮ | ೩೭೮.೮೨ | ೨೯.೯೯ | ೩೨.೪೭ |
| ಇತರೆ | ೫೪.೦೨ | ೧೦೪೪.೦೨ | ೧೬.೮೧ | ೩೧.೫೬ | ೫೧.೭ | ೧೦೦೪.೭೪ | ೧೬.೧೫ | ೩೪.೪೬ |
| ಒಟ್ಟು | ೧೦೦ | ೯೧೦.೭೮ | ೨೫.೮೭ | ೩೨.೭೫ | ೧೦೦ | ೮೫೪.೭ | ೨೪.೫೮ | ೩೪.೬೮ |

ಮೂಲ: ಕರ್ನಾಟಕ ಮಾನವ ಅಭಿವೃದ್ಧಿ -೨೦೦೪, ಯೋಜನಾ ಮತ್ತು ಸಾಂಖ್ಯಿಕ ಇಲಾಖೆ, ಕರ್ನಾಟಕ ಸರ್ಕಾರ, ೨೦೦೬.

**ಟಿಪ್ಪಣಿ:**

೧. ಭಾರತ ಸರ್ಕಾರದ(೨೦೦೧) ಸಾಮಾಜಿಕ ಆರ್ಥಿಕ ಗುಂಪುಗಳ ಪೈಕಿ ಅನುಭೋಗ ಮಟ್ಟದ ವ್ಯತ್ಯಾಸಗಳು, ಎನ್.ಎಸ್.ಎಸ್. ನವದೆಹಲಿ ಇದರ ಆಧಾರದ ಮೇಲೆ ವಿವಿಧ ಅಂದಾಜುಗಳನ್ನು ನೀಡಲಾಗಿದೆ.

೨. ೧೯೯೯-೨೦೦೦ರ ಗ್ರಾಮೀಣ ಮತ್ತು ನಗರದ ಬಡತನದ ಕುರಿತು ಭಾರತ ಸರ್ಕಾರದ ಬಡತನ ತಜ್ಞರ ಗುಂಪು ನೀಡಿದ(ಪುಸ್ತಕ, ಬೆಲೆಗಳಲ್ಲಿ) ಅಂದಾಜುಗಳು ಹೀಗಿವೆ. ರೂ. ೩೦೯.೫೯(ಗ್ರಾಮೀಣ ಕರ್ನಾಟಕ), ರೂ. ೩೨೭.೫೬(ಗ್ರಾಮೀಣ ಭಾರತ) ಭಾರತ ಸರ್ಕಾರದ ಪ್ರಕಟಣೆ(೨೦೦೧ ಡಿ), ಅಂದಾಜುಗಳು ೧೯೯೯-೨೦೦೦, ಪ್ರೆಸ್ ಇನ್‌ಫಾರ್ಮೇಷನ್ ಬ್ಯೂರೋ ನವದೆಹಲಿ.

೩. ಈ ಅಂದಾಜುಗಳನ್ನು ಸರಾಸರಿ ಅನುಭೋಗ ಬಡತನ ರೇಖೆ ಮತ್ತು ಲಾರೆನ್ಜ್ ಕರ್ವ್ ಇದರ ಪ್ಯಾರೋಮೀಟರ್‌ಗಳನ್ನು ಆಧರಿಸಿ ಮಾಡಲಾಗಿದೆ.

೪. ವಿಧಾನಗಳಲ್ಲಿನ ವ್ಯತ್ಯಾಸಗಳಿಂದಾಗಿ (ಎಲ್ಲ ಕುಟುಂಬಗಳು) ಗ್ರಾಮೀಣ/ನಗರ ಕರ್ನಾಟಕಕ್ಕೆ ಸಂಬಂಧಿಸಿದ ಒಟ್ಟು ಬಡತನ ಈ ಅಂದಾಜುಗಳು.

ಕೋಷ್ಟಕ ೩.೮ರಲ್ಲಿ ಅತಿಸಣ್ಣ ಹಿಡುವಳಿಗಳ ಪೈಕಿ ಶೇಕಡ ೫೨ರಷ್ಟು (ಒಂದು ಹೆಕ್ಟೇರಿಗಿಂತ ಕಡಿಮೆ) ಸಣ್ಣ ಸಾಗುವಳಿ ಹಿಡುವಳಿಗಳಲ್ಲಿ ಶೇಕಡ ೩೦.ರಷ್ಟು (೧-೨ ಹೆಕ್ಟೇರುಗಳು) ಭೂಮಿಯನ್ನು ಪರಿಶಿಷ್ಟ ಜಾತಿಯವರು ಹೊಂದಿದ್ದಾರೆ. ಪರಿಶಿಷ್ಟ ಜಾತಿಗಳಲ್ಲದವರು ಕ್ರಮವಾಗಿ ಶೇಕಡ ೪೫ರಷ್ಟು ಹಾಗೂ ಶೇಕಡ ೨೬ರಷ್ಟು ಅತಿಸಣ್ಣ ಮತ್ತು ಸಣ್ಣ ಹಿಡುವಳಿಗಳನ್ನು ಹೊಂದಿದ್ದಾರೆ. ಪರಿಶಿಷ್ಟ ಜಾತಿಗಳಲ್ಲಿ ಬಹುತೇಕ ಕೃಷಿಕರು, ಸಣ್ಣ ಮತ್ತು ಅತಿಸಣ್ಣ ಹಿಡುವಳಿಗಳನ್ನು ಹೊಂದಿದ್ದು ಆರ್ಥಿಕವಾಗಿ ಲಾಭದಾಯಕವಾಗಿಲ್ಲ ಮತ್ತು ಅವರನ್ನು ಸಾಲಗಾರರನ್ನಾಗಿ ಬಡತನದ ಕೂಪಕ್ಕೆ ತಳ್ಳಿವೆ. ಕೃಷಿ ಭೂಮಿಯನ್ನು ಹೊಂದಿರುವ ಬಹುತೇಕ ಪರಿಶಿಷ್ಟ ಜಾತಿಯ ವ್ಯವಸಾಯಗಾರರಿಗೆ ಎಸ್.ಇ.ಪಿ/ಟಿ.ಎಸ್.ಪಿ ವ್ಯಾಪ್ತಿಯಲ್ಲಿ ನೀರಾವರಿಗಾಗಿ ಭೂಮಿ ಮಿತಿ ಇರುವುದರಿಂದ ದಲಿತರು ಆ ಪ್ರಮಾಣದ ಭೂಮಿ ಹೊಂದಿರುವುದಿಲ್ಲ.

## ಆದಾಯ ಮತ್ತು ವೆಚ್ಚ

ಕುಟುಂಬದ ವೈಯಕ್ತಿಕ ತಲಾ ಆದಾಯಗಳು ಜೀವನ ಮಟ್ಟವನ್ನು ನಿರ್ಧರಿಸುತ್ತವೆ. ಪರಿಶಿಷ್ಟ ಜಾತಿಯ ವಿವಿಧ ಕುಟುಂಬಗಳಲ್ಲಿ ಇತರೆ ಮಾದರಿಗೆ ಹೋಲಿಸಿದರೆ ಅಸಮಾನತೆಗಳು ಸ್ಪಷ್ಟವಾಗಿ ಕಾಣುತ್ತವೆ. ಪರಿಶಿಷ್ಟ ಜಾತಿ/ಪಂಗಡಗಳ ಆದಾಯ ಕುಟುಂಬದ ಮಿತಿಯಲ್ಲಿ ರೂ. ೨೦,೦೦೦ದಿಂದ ರೂ. ೪೦,೦೦೦ ಆಗಿದೆ. ಹಿಂದುಳಿದ ಕುಟುಂಬಗಳ ವಾರ್ಷಿಕ ಆದಾಯ ರೂ. ೮೫,೦೦೦ ರೂ.ಗಳಿಗಿಂತ ಹೆಚ್ಚು. ಕನಿಷ್ಠ ಎರಡು ಪಟ್ಟು ಗರಿಷ್ಠ ನಾಲ್ಕು ಪಟ್ಟುಗಿಂತ ಹೆಚ್ಚು ಆದಾಯ ಹೊಂದಿದ್ದು, ಮುಂದುವರೆದ ಭೂಮಾಲೀಕ ಸಮುದಾಯಗಳ ವರಮಾನ ದುಪ್ಪಟ್ಟಾಗಿರುವುದರಿಂದ, ಪರಿಶಿಷ್ಟ ಜಾತಿ/ಪಂಗಡದವರು ತಲಾ ಆದಾಯ ಮುಂದುವರೆದವರ ಆದಾಯ ಬಗ್ಗೆ ವೈಡನ್ ಗ್ಯಾಪ್(ಅಪಾರವಾದ ತಲಾ ಆದಾಯ ಅಂತರ) ಕಂಡುಬರುತ್ತದೆ. ಜೀವನ ಮಟ್ಟ ಮತ್ತು ಮೂಲಸೌಕರ್ಯಗಳಲ್ಲಿ ಅಜಗಜಾಂತರ ಅಂತರದ ಅಸಮಾನತೆಯು ಗೋಚರಿಸುತ್ತದೆ.

೧೯೯೯-೨೦೦೦ರ ಎನ್.ಎಸ್.ಎಸ್. ೫೫ನೇ ಸುತ್ತಿನ ವರದಿಯ ಪ್ರಕಾರ ಗ್ರಾಮೀಣ ಕರ್ನಾಟಕದ ಪರಿಶಿಷ್ಟ ಜಾತಿಗಳ ತಲಾವಾರು ಮಾಸಿಕ ವೆಚ್ಚವು ರೂ. ೪೧೯.೦೦ ಆಗಿದ್ದು, ಇತರ ಹಿಂದುಳಿದ ವರ್ಗಗಳು (ರೂ. ೫೭೦.೦೦) ಮತ್ತು ಇತರರಿಗಿಂತ (ರೂ. ೫೬೦.೦೦) ಕಡಿಮೆ ಮತ್ತು "ಪರಿಶಿಷ್ಟ ಪಂಗಡ (ರೂ. ೫೭೦.೦೦) ಮತ್ತು ಇತರರಿಗಿಂತ (ರೂ. ೫೬೦.೦೦) ಕಡಿಮೆ ಹಾಗೂ ಪರಿಶಿಷ್ಟ ಪಂಗಡ(ರೂ. ೪೦೪.೦೦)ಗಿಳಿಗಿಂತ ಸ್ವಲ್ಪ ಹೆಚ್ಚಾಗಿದೆ. ಗ್ರಾಮೀಣ ಕರ್ನಾಟಕದ ಎಲ್ಲಾ ಗುಂಪುಗಳ ಸರಾಸರಿ ತಲಾವಾರು ಮಾಸಿಕ ವೆಚ್ಚ ರೂ.೫೦೦.೦೦ ಇದೆ. ಒಟ್ಟಾರೆಯಾಗಿ ಎಲ್ಲಾ ಮಗ್ಗಲುಗಳನ್ನು ಗಮನಿಸಿದರೆ ಆದಾಯ ಮತ್ತು ವೆಚ್ಚವು ಬೇರೆಯವರಿಗಿಂತ ದಲಿತ ಆರ್ಥಿಕ ಸಂಗತಿಯು ದುರ್ಬಲವಾಗಿರುವುದು ಮನವರಿಕೆಯಾಗುತ್ತದೆ.

**ಕೋಷ್ಟಕ-೩.೯. ಕರ್ನಾಟಕದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆಯ ಪ್ರಾದೇಶಿಕ ಹಂಚಿಕೆಯ ಪ್ರಮಾಣ**

| ಪ್ರದೇಶ | ಪರಿಶಿಷ್ಟ ಜಾತಿ | | ಪರಿಶಿಷ್ಟ ಪಂಗಡ | | ಇತರರು | | ಒಟ್ಟು | | |
|---|---|---|---|---|---|---|---|---|---|
| ವರ್ಷ-> | ೧೯೯೧ | ೨೦೦೧ | ೧೯೯೧ | ೨೦೦೧ | ೧೯೯೧ | ೨೦೦೧ | ೧೯೯೧ | ೨೦೦೧ | ೨೦೧೧ |
| ಗ್ರಾಮೀಣ | ೭೬.೬ | ೬೪.೯ | ೮೫.೧ | ೮೪.೬ | ೬೬.೭ | ೬೨.೬ | ೬೯.೧ | ೬೬ | ೬೧.೩ |
| ನಗರ | ೨೩.೪ | ೨೫.೧ | ೧೪.೯ | ೧೫.೩ | ೩೩.೩ | ೩೭.೪ | ೩೦.೯ | ೩೪ | ೩೮.೭ |
| ರಾಜ್ಯ | ೧೦೦ | ೧೦೦ | ೧೦೦ | ೧೦೦ | ೧೦೦ | ೧೦೦ | ೧೦೦ | ೧೦೦ | ೧೦೦ |

**ಮೂಲ: ರಿಜಿಸ್ಟ್ರಾರ್ ಜನರಲ್ ಆಫ್ ಇಂಡಿಯಾ, ಜನಗಣತಿ ೧೯೯೧,೨೦೦೧ ಮತ್ತು ೨೦೧೧**

ಪರಿಶಿಷ್ಟ ಜಾತಿ ಗ್ರಾಮೀಣ ಮತ್ತು ನಗರ ಪ್ರದೇಶಗಳ ಹಂಚಿಕೆ ೧೯೯೧ರಲ್ಲಿ ಗ್ರಾಮೀಣ ೭೬.೬೦% ಇದ್ದು, ನಗರದಲ್ಲಿ ೨೩.೪೦ರಷ್ಟು ಮಾತ್ರವಿದೆ. ೨೦೦೧ರಲ್ಲಿ ೬೪.೯೩%ರಷ್ಟು ಮತ್ತು ಶೇ. ೨೫.೦೭ ನಗರದಲ್ಲಿ ವಾಸಿಸುತ್ತಿದ್ದಾರೆ. ಆದರೆ ಪರಿಶಿಷ್ಟ ಪಂಗಡದವರು ೧೯೯೧ರಲ್ಲಿ ೮೫.೦೬% ೨೦೦೧ರಲ್ಲಿ ೮೪.೬೨% ೧೯೯೧ರಲ್ಲಿ ನಗರ ಪ್ರದೇಶದ ಪ್ರಮಾಣ ೧೪.೯೪% ರಿಂದ ೧೫.೨೮% ಏರಿಕೆ ಅನ್ನುವುದು ಕೋಷ್ಟಕದಲ್ಲಿ ಕಾಣಬಹುದು. ಅದೇ ರೀತಿ ಹಿಂದುಳಿದವರಲ್ಲೂ ಗ್ರಾಮೀಣ ಮತ್ತು ನಗರದಲ್ಲಿ ಜನಸಂಖ್ಯೆ ಹಂಚಿಕೆಯಾಗಿರುವುದನ್ನು ಗಮನಿಸಬಹುದು.

### ೩.೪.೨. ರಾಜ್ಯ ಸರ್ಕಾರದ ನೀತಿಗಳು

ರಾಜ್ಯ ಸರಕಾರದ ಬಹುದೊಡ್ಡ ಇಲಾಖೆಯೆಂದರೆ ಸಮಾಜ ಕಲ್ಯಾಣ ಮತ್ತು ಹಿಂದುಳಿದ ಅಲ್ಪಸಂಖ್ಯಾತರ ಇಲಾಖೆ. ಸಾಮಾಜಿಕ ಮತ್ತು ಆರ್ಥಿಕ ಸಬಲೀಕರಣಕ್ಕಾಗಿ ಸುಮಾರು ಇಪ್ಪತ್ತೆರಡು ಇಲಾಖೆಗಳ ಸಂಬಂಧದೊಂದಿಗೆ ಹಲವೊಂದು ವಿಶಿಷ್ಟ ಕ್ರಿಯಾಯೋಜನೆಗಳನ್ನು ಜಾರಿಗೆ ತರುವುದರ ಮೂಲಕ, ದುರ್ಬಲರನ್ನು ಸಾಮಾಜಿಕ ಮುಖ್ಯವಾಹಿನಿಗೆ ತರುವ ಕೆಲಸವನ್ನು ಮಾಡುತ್ತದೆ. ಅದರಲ್ಲಿ "ಉದ್ಯೋಗ ಸೃಜನ ಯೋಜನೆಗಳು" ಮತ್ತು "ಕನಿಷ್ಠ ಅವಶ್ಯಕತೆಗಳ ಯೋಜನೆ"ಗಳೆಂದು ವರ್ಗೀಕರಿಸಲಾಗಿದೆ. ವಿವಿಧ ಪ್ರಕಾರದ ಯೋಜನೆಗಳಿದ್ದರೂ ಅವುಗಳಲ್ಲಿ ಬಹುತೇಕ ಯೋಜನೆಗಳು ಸಣ್ಣ ಪ್ರಮಾಣದ ಅನುದಾನ ವೆಚ್ಚಗಳನ್ನು ಹೊಂದಿವೆ.

ಜೊತೆಗೆ ವಿದ್ಯಾರ್ಥಿ ವೇತನವನ್ನು ಪಾವತಿಸುವುದಕ್ಕಾಗಿ, ವಸತಿ ನಿಲಯಗಳ ನಿರ್ಮಾಣಕ್ಕೆ ಮತ್ತು ವಸತಿ ಶಾಲೆಗಳ ನಿರ್ಮಾಣ ಮತ್ತು ನಿರ್ವಹಣೆ ಹಾಗೂ ಉದ್ಯೋಗ ತರಬೇತಿ ಕಾರ್ಯಕ್ರಮಗಳಿಗೆ ವ್ಯಯವಾಗುತ್ತಿದೆ. ಇಲಾಖೆಯ ಆಯವ್ಯಯವು ೮ನೇ ಪಂಚವಾರ್ಷಿಕ ಯೋಜನೆಯಲ್ಲಿ ರೂ. ೧೯,೧೦೦,೦೦ ಲಕ್ಷವಾಗಿತ್ತು. ಅದು ೯ನೇ ಯೋಜನೆಯ ಅವಧಿಯಲ್ಲಿ ರೂ. ೪೨,೮೪೦,೦೦ ಲಕ್ಷ. ಶೇಕಡ ೬೬ರಷ್ಟು ಅಧಿಕಗೊಂಡಿತು ಹಾಗೂ ೧೦ನೇ ಯೋಜಯಲ್ಲಿ ಶೇ. ೧೧೧ರಷ್ಟು ರೂ. ೬೦,೨೧೮,೨೭ ಲಕ್ಷ ಅಧಿಕಗೊಂಡಿದೆ. ಸಮುದಾಯಗಳ ಆದಾಯ ತರುವ ಉತ್ಪಾದನೆ ಸಲುವಾಗಿ ಗಮನಿಸಿದರೆ ಅದು ಅನುತ್ಪಾದಕ ಅಂಶವಾಗುತ್ತದೆ. ಆದರೆ ದುರ್ಬಲರ ಆರ್ಥಿಕ ಸಬಲೀಕರಣಕ್ಕೆ ನೆರವಾಗುತ್ತದೆ. ಇತ್ತೀಚಿಗೆ ಈ ಸಂಬಂಧವಾಗಿ ಈ ಉದ್ದೇಶಕ್ಕಾಗಿ ವಿಪರೀತ ಹಣವನ್ನು ಮೀಸಲಿಟ್ಟಿದಾರೆ. ಅದಲ್ಲೂ ವಿಶೇಷ ಘಟಕ ಯೋಜನೆ ಮೂಲಕವಾಗಿರುತ್ತದೆ.

**ವಿಶೇಷ ಘಟಕ ಯೋಜನೆ:**

ಇತ್ತೀಚೆಗೆ ಘನ ಸರ್ಕಾರಗಳು ಸಾಮಾಜಿಕ ನ್ಯಾಯವನ್ನು ವಿಧಿಬದ್ಧವಾಗಿ ಅಭಿವೃದ್ಧಿ ಪಡಿಸಲು ಸರ್ಕಾರ ತೆಗೆದುಕೊಂಡು ಪ್ರಮುಖ ತೀರ್ಮಾನವೆಂದು ಭಾವಿಸಬೇಕಾಗುತ್ತದೆ. ಕಳೆದ ಎಪ್ಪತ್ತು ವರುಷಗಳಿಗಿಂತಲೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಎಸ್.ಸಿ.ಪಿ ಮತ್ತು ಟಿಎಸ್‌ಪಿ ಯೋಜನೆಗಳನ್ನು ಜಾರಿಗೆ ತಂದಿವೆ. ಜನಸಂಖ್ಯೆಯ ಆಧಾರದ ಮೇಲೆ ಆಯ ವ್ಯಯದಲ್ಲಿ ಜನಸಂಖ್ಯೆ ಮತ್ತು ಹದಿನೈದು ಮತ್ತು ಮೂರು, ಅಂದರೆ ಹದಿನೆಂಟು ರಷ್ಟ ಹಣವನ್ನು ನಿಗದಿಗೊಳಿಸಲಾಗಿರುತ್ತದೆ. ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಜನ ಸಮುದಾಯ ಕಲ್ಯಾಣಕ್ಕೆ ಹಣವನ್ನು ಮೀಸಲಿಡಲಾಗಿದೆ. ಅದು ಅವರ ಕಲ್ಯಾಣಕ್ಕೆ ನಿಗದಿತ ಅವಧಿಯಲ್ಲಿ ವ್ಯಯ ಮಾಡಬೇಕಾಗುತ್ತದೆ. ವ್ಯಯ ಮಾಡದಿದ್ದಲ್ಲಿ ಅಂತಹ ಪ್ರಾಧಿಕಾರ ಶಿಸ್ತು ಕ್ರಮಕ್ಕೆ ಒಳಗಾಗುತ್ತದೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಲ್ಲಿ ಭೂಮಿಯಿಲ್ಲದವರಿಗೆ ದುಡಿಯಲು ಭೂಮಿ, ಶಾಶ್ವತ ನೀರಾವರಿಯನ್ನು ಕಲ್ಪಿಸುವುದು, ಅವರಿಗೆ ಜಾನುವಾರು, ಕೃಷಿ ಸಲಕರಣೆ, ಉಚಿತವಾಗಿ ಗೊಬ್ಬರ, ಬೀಜ ಮತ್ತು ಔಷಧಿಯನ್ನು ಪೂರೈಸುವ ಸಲುವಾಗಿ ಸಾಕಷ್ಟು ಹಣವನ್ನು ಖರ್ಚು ಮಾಡಲು ಅವಕಾಶವಿದೆ. ಈ ಹಣವನ್ನು ಯಾವ ಕಾರಣಕ್ಕೆ ಖರ್ಚು ಮಾಡಬೇಕೋ? ಅದಕ್ಕೆ ಮೀಸಲಾಗಿರುತ್ತದೆ. ಸರ್ಕಾರಕ್ಕೆ ಇದು ಒಂದು ರೀತಿಯ ಬದ್ಧತೆಯಾಗಿರುತ್ತದೆ. ಆ ಮೂಲಕ ಎಸ್.ಸಿ.ಪಿ/ಟಿ.ಎಸ್.ಪಿ ಯೋಜನೆ ಯಶಸ್ಸು ಕಾಣಬೇಕಾಗಿದೆ.

**೩.೪.೩. ದೇಶದ ಸಂಪತ್ತು ವಸ್ತು ಅಲ್ಲ ಮಾನವ**

ದೇಶದ ಸಂಪತ್ತು ವಸ್ತು ಅಲ್ಲ ಮಾನವ ಎಂದು ಹೇಳಿದೆ. ಈ ಹೇಳಿಕೆಯನ್ನೇ ಪ್ರಧಾನವಾಗಿಟ್ಟುಕೊಂಡು ಅವಲೋಕಿಸುವುದಾದರೆ, ವಸ್ತುಗಳೇ ದೇಶದ ಸಂಪತ್ತಾಗಿ ಕಂಡು ಬರುತ್ತಿವೆ. ದೇಶ ನಿವಾಸಿಗಳಾದ ಪರಿಶಿಷ್ಟ ಜಾತಿಯವರನ್ನು ಮನುಷ್ಯರೆಂದು ಮೇಲ್ಜಾತಿಯವರು ಪರಿಗಣಿಸಿಲ್ಲ. ಮನುಷ್ಯ ಸಂಬಂಧಗಳ ವರ್ತನೆಯಲ್ಲಿ ಆರ್ಥಿಕ-ಸಾಮಾಜಿಕ ರಾಜಕೀಯ ಮತ್ತು ಸಾಂಸ್ಕೃತಿಕ ದಾಳಿ ನಡೆಯುತ್ತಿವೆ.

ಸಕಲ ವಿಧವಾದ ಸಂಪತ್ತು, ಮಾನವ ನಿರ್ಮಿತ ಸಮಾಜದ ಪಾಲಾಗಿ ಶೇ. ೯೦ರಷ್ಟ ಜನರು ಬದುಕುಗಳು ಸಂಪತ್ತಿನ ಅಸಮಾನ ಆತಂಕದ ದಳ್ಳುರಿಗೆ ಸಿಲುಕಿ ಜೀವಂತ ಶವಗಳಾಗಿದ್ದಾರೆ. ಅಂಕಿ-ಅಂಶಗಳನ್ನು ಗಮನಿಸಿದರೆ, ದಲಿತರ ಪರ ಮುಂಗಡ ಪತ್ರದಲ್ಲಿ ಹೂಡಿದ ಹಣ-ಮಾಡಿದ ಖರ್ಚು ಮತ್ತು ಅಭಿವೃದ್ಧಿಯದರಕ್ಕೆ ಸರಿಯಾಗುವಂತೆ ಗೋಚರವಾಗುತ್ತಿಲ್ಲ, ಒಟ್ಟಾರೆಯಾಗಿ ತಾಳೆ ಯಾಗುತ್ತಿಲ್ಲ. ಅದು ಏಕೆ ಹೀಗಾಗುತ್ತದೆ ಎಂಬ ಯಕ್ಷ ಪ್ರಶ್ನೆ ಎಂಥವರಿಗೂ ಕಾಡುತ್ತದೆ. ಏನು ಕೊಟ್ಟರೂ ಅಷ್ಟೇ ಎಂಬ ಉದಾಸೀನಾ ಮನೋಭಾವ ಬೆಳೆಯುತ್ತದೆ. ಕಾನೂನು ಗಟ್ಟಿಯಾಗಿದ್ದರೂ ಅದರ ಕ್ರಿಯಾ ಯೋಜನೆಗಳಲ್ಲಿ ತೊಡಕುಗಳಿವೆ. ಜಾತಿ ಕಾರಣಕ್ಕಾಗಿ ಕೊಲೆ, ದೌರ್ಜನ್ಯ, ಅತ್ಯಾಚಾರ, ಹಿಂಸೆ ಮಾಡಲಾಗುವ ರಾಷ್ಟ್ರಗಳಲ್ಲಿ ಮಾನವ ಅಭಿವೃದ್ಧಿಯು ನಿಧಾನಗತಿಗೊಳ್ಳುತ್ತದೆ. ಇದು ಮುಂದೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಇತರರ ನಡುವಿನ ಅಭಿವೃದ್ಧಿ ತಾರತಮ್ಯಗಳ ಅಂತರಕ್ಕೆ ಆಸ್ಪದ ಮಾಡಿ ಕೊಡುವ ಬಹುಮುಖ್ಯವಾದ ಸಂಗತಿಯಾಗಿದೆ(ಲೇಖನ: ಮೂರ್ತಿ ಟಿ.ಎಚ್. ಮಾನವ ಸಂಪನ್ಮೂಲ ಅಭಿವೃದ್ಧಿ: ಕರ್ನಾಟಕದ ಒಂದು ತೌಲನಿಕ ವಿಶ್ಲೇಷಣೆ ಸಂಪುಟ-೬ ಸಂಚಿಕೆ ಜುಲೈ-ಡಿಸೆಂಬರ್ ೨೦೦೭ ಅಭಿವೃದ್ಧಿ ಅಧ್ಯಯನ ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ).

**ಸಾಮಾಜಿಕ ಅಭಿವೃದ್ಧಿ ಮತ್ತು ಆರ್ಥಿಕ ಅಭಿವೃದ್ಧಿ**

ನಮ್ಮ ಸಮಾಜದಲ್ಲಿ ಆರ್ಥಿಕ ದುಸ್ಥಿತಿಗೆ ಸಿಲುಕಿ ದಲಿತರು ನರಳುತ್ತಲೇ ಬಂದಿದ್ದಾರೆ. ಅದರ ಬಿಡುಗಡೆ ಬಂಡವಾಳ ಹೂಡಿದರೂ ಸಿಂಹ-ಪಾಲು ಆದಾಯ ಮತ್ತೆ ಉನ್ನತ ವರ್ಗದವರ ಪಾಲಾಗುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಸಾಮಾಜಿಕ ಪರಿವರ್ತನೆಯ ಅಗತ್ಯವಿದೆ. ದಲಿತರು ಜಾತಿ ಸಂಬಂಧಿ ತಾರತಮ್ಯ ಹಾಗೂ ಶೋಷಣೆಯನ್ನು ಎದುರಿಸುತ್ತಿದ್ದಾರೆ. ಇಂದಿಗೂ ಆರ್ಥಿಕವಾಗಿ ದಲಿತರ ಜೀವನದ ದುಸ್ಥಿತಿ ಹೇಳತೀರದು ಎಂಬ ಇಂಗಿತವನ್ನು ಸ್ವಯಂಯಾಗಿ ಅನುಭವೇದ್ಯವಾದ ಚಿಂತನೆಯನ್ನು ಡಾ. ಬಿ.ಆರ್. ಅಂಬೇಡ್ಕರ್ ಮನಗಂಡಿದ್ದರು.

**ವೃತ್ತಿ ರಚನೆ**

ಶ್ರೇಣೀಕರಣ ಮತ್ತು ಶ್ರಮವಿಭಜನೆಯ ಪರಿಕಲ್ಪನೆಯಲ್ಲಿ ವೃತ್ತಿ ರಚನೆಯ ಸಂಗತಿ ಅತಿ ಪ್ರಾಮುಖ್ಯತೆಯನ್ನು ಅರಿಯತಕ್ಕದ್ದು. ಪ್ರತಿಯೊಂದು ಜಾತಿ ಸಮುದಾಯಗಳಿಗಿಂತ ಆರ್ಥಿಕವಾಗಿ ದುಸ್ಥಿತಿಯಲ್ಲಿದ್ದಾರೆ ಎಂಬುದನ್ನು ಅವರ ವೃತ್ತಿರಚನೆ ಪರಿಶೀಲನೆಯಿಂದ ಸ್ಪಷ್ಟಗೊಳಿಸಿಕೊಳ್ಳಬಹುದು. ಒಂದು ದೇಶದ ಆರ್ಥಿಕತೆಯ ವೃತ್ತಿ ರಚನೆಯನ್ನು ಮೂರು ವಲಯಗಳಾಗಿ ವರ್ಗೀಕರಿಸುವುದು ರೂಢಿಯಲ್ಲಿದೆ.

೧. ಪ್ರಾಥಮಿಕ ವಲಯ

೨. ಕೈಗಾರಿಕಾ ವಲಯ

೩. ತೃತೀಯ ವಲಯ

ಸಾಮಾನ್ಯವಾಗಿ ಕೃಷಿಯನ್ನು ಅವಲಂಬಿಸಿದ ದೇಶದಲ್ಲಿ ಅದು ಪ್ರಾಥಮಿಕ ಸಂಗತಿಯಾಗಿದೆ. ಕೃಷಿಯು ಆಹಾರ ಧಾನ್ಯಗಳನ್ನು ಬೇಳೆ ಕಾಳುಗಳನ್ನು ಹಣ್ಣು-ಹಂಪಲು, ಕೈಗಾರಿಕೆಗೆ ಬೇಕಾಗುವ ಕಚ್ಚಾ ಸರಕನ್ನು ಪೂರೈಸುತ್ತದೆ. ಆದರೆ ದಲಿತರು ತಮ್ಮ ತುಂಡು ಭೂಮಿಯಲ್ಲಿ ಜೀವನ ಸುಧಾರಣೆ ಉತ್ಪನ್ನಗಳನ್ನು ಉತ್ಪಾದಿಸುತ್ತಾರೆ. ಆದರೆ ಆರ್ಥಿಕವಾಗಿ ಲಾಭವಿಲ್ಲದ ಜೀವನ. ಕೈಗಾರಿಕೆಯಲ್ಲಿ ಮಾಲೀಕರು ದಲಿತರಿಂದ ಸಾಧ್ಯವಿಲ್ಲ. ಅವರು ಆರ್ಥಿಕ ಸಂಕಟದಿಂದ ನರಳುತ್ತಿರುವುದರಿಂದ ಜೀವನ ನಡೆಸಲು ಕಾರ್ಮಿಕರ ಬದುಕಾಗುತ್ತಾರೆ. ಬ್ಯಾಂಕಿಂಗ್ ಮಾರುಕಟ್ಟೆ, ವಾಣಿಜ್ಯ, ಸಾರಿಗೆ-ಸಂಪರ್ಕಗಳಲ್ಲಿ ದಲಿತ ವರ್ಗದವರು ಪಾಲುಗೊಳ್ಳುವುದು ತುಂಬಾ ಕಷ್ಟ ಇವರದು ಆರ್ಥಿಕ ಸಂಕಟದ ಬದುಕಾಗಿರುತ್ತದೆ. ಇಂಥದೊಂದು ಪ್ರಸ್ತಾವನೆಯ ಆಧಾರದ ಮೇಲೆ, ವರಮಾನದ ಹೆಚ್ಚು ಭಾಗ ಪ್ರಾಥಮಿಕ ವಲಯದಿಂದ ಮತ್ತು ಅಪಾರ ಸಂಖ್ಯೆ ಒತ್ತಡದ ದುಡಿಮೆಗಾರರಿರುತ್ತಾರೆ. ತಲಾ ಉತ್ಪನ್ನಕ್ಕಿಂತ ಕಡಿಮೆಯಿರುತ್ತದೆ. ಈ ಕೆಳಗಿನ ಕೋಷ್ಟಕದಲ್ಲಿ ಕರ್ನಾಟಕದಲ್ಲಿ ೧೯೯೧ರಲ್ಲಿ ದಲಿತರ ಮತ್ತು ದಲಿತೇತರ ವೃತ್ತಿ ಚಿತ್ರಣವನ್ನು ವಿವರಿಸಲಾಗಿದೆ.

**ಕೋಷ್ಟಕ-೩.೧೦. ದಲಿತರು ಮತ್ತು ದಲಿತೇತರರ ವೃತ್ತಿ ರಚನೆ: ಕರ್ನಾಟಕ:೧೯೯೧**

| ವಲಯಗಳು | ದಲಿತೇತರರು | | ದಲಿತರು | |
|---|---|---|---|---|
| | ಸಂಖ್ಯೆ (ಲಕ್ಷಗಳಲ್ಲಿ) | ಶೇಕಡ ಪ್ರಮಾಣ | ಸಂಖ್ಯೆ (ಲಕ್ಷಗಳಲ್ಲಿ) | ಶೇಕಡ ಪ್ರಮಾಣ |
| ಪ್ರಾಥಮಿಕ ವಲಯ | ೮೫.೬೪ | ೬೩.೬೪ | ೩೧.೧೫ | ೮೦.೨೨ |
| ದ್ವಿತೀಯ ವಲಯ | ೧೯.೦೭ | ೧೪.೨೨ | ೩.೭೨ | ೯.೫೮ |
| ತೃತೀಯ ವಲಯ | ೨೯.೬೮ | ೨೨.೧೪ | ೩.೯೬ | ೧೦.೨೦ |
| ಒಟ್ಟು | ೧೩೪.೦೯ | ೧೦೦.೦೦ | ೩೮.೮೩ | ೧೦೦.೦೦ |

ಮೂಲ: ಜನಗಣತಿ ವರದಿ-೧೯೯೧, ಕರ್ನಾಟಕ ಮಾನವ ಅಭಿವೃದ್ಧಿ ವರದಿ-೧೯೯೧

ಈ ಕೋಷ್ಟಕದ ಪ್ರಕಾರ ಕರ್ನಾಟಕದಲ್ಲಿ ಒಟ್ಟು ದಲಿತ ದುಡಿಮೆಗಾರರಲ್ಲಿ ಶೇ. ೮೧ರಷ್ಟು ಜನರು ಪ್ರಾಥಮಿಕ ವಲಯವನ್ನು ಅವಲಂಬಿಸಿದ್ದಾರೆ. ಈ ವಲಯದ ಬಹುಮುಖ್ಯ ವೃತ್ತಿಯೆಂದರೆ ಒಕ್ಕಲುತನ, ದಲಿತ ವರ್ಗದಲ್ಲಿರುವ ಒಟ್ಟು ದುಡಿಮೆಗಾರರ ಸಂಖ್ಯೆ ೩೮.೮೩ ಲಕ್ಷ. ಇವರಲ್ಲಿ ಭೂರಹಿತ ಕೃಷಿ ಕೂಲಿಕಾರರ ಸಂಖ್ಯೆ ೧೮.೭೬ ಲಕ್ಷ. ಅಂದರೆ ದಲಿತ ವರ್ಗದಲ್ಲಿನ ಒಟ್ಟು ದುಡಿಮೆಗಾರರಲ್ಲಿ ಕೂಲಿಕಾರರ ಪ್ರಮಾಣ ಶೇ. ೪೮.೩೯. ಆದರೆ ದಲಿತೇತರ ವರ್ಗಗಳಲ್ಲಿ ವೃತ್ತಿ ರಚನೆ ತುಂಬಾ ಭಿನ್ನವಾಗಿದೆ. ಇವರಲ್ಲಿ ಪ್ರಾಥಮಿಕ ವಲಯವನ್ನು ಅವಲಂಬಿಸಿಕೊಂಡಿರುವವರ ಪ್ರಮಾಣ ಕೇವಲ ಶೇ. ೬೨.೬೪. ದಲಿತೇತರಲ್ಲಿರುವ ದುಡಿಮೆಗಾರರಲ್ಲಿ ಕೂಲಿಕಾರರ ಪ್ರಮಾಣವು

ಕೇವಲ ಶೇ. ೨೩.೨೭. ದಲಿತ ವರ್ಗದಲ್ಲಿ ದ್ವಿತೀಯ ಹಾಗೂ ತೃತೀಯ ವಲಯಗಳನ್ನು ಅವಲಂಬಿಸಿಕೊಂಡಿರುವವರ ಪ್ರಮಾಣ ಕೇವಲ ಶೇ. ೧೯.೭೮. ಆದರೆ ದಲಿತೇತರರಲ್ಲಿ ಇದು ಶೇ. ೩೬.೩೬ರಷ್ಟಿದೆ. ಈ ಬಗೆಯ ವೃತ್ತಿ ರಚನೆಯಿರುವುದರಿಂದ ದಲಿತರು ದಲಿತೇತರರಿಗಿಂತ ತೀವ್ರತರದ ಬಡತನ-ಹಸಿವು-ನಿರುದ್ಯೋಗ ಸಮಸ್ಯೆಗಳಿಂದ ನರಳುತ್ತಿದ್ದಾರೆ ಎಂಬುದು ತಿಳಿಯುತ್ತದೆ.

**ಸಾಕ್ಷರತೆ**

ಇದೇ ರೀತಿ ದಲಿತರ ದುಸ್ಥಿತಿಯನ್ನು ಅವರು ಸಾಧಿಸಿಕೊಂಡಿರುವ ಸಾಕ್ಷರತೆ ಪ್ರಮಾಣದ ಸೂಚಿಯಿಂದ ತಿಳಿದುಕೊಳ್ಳಬಹುದು. ಮುಂದಿನ ಕೋಷ್ಟಕದಲ್ಲಿ ೧೯೯೧ರಲ್ಲಿ ಕರ್ನಾಟಕದಲ್ಲಿ ದಲಿತರು ಮತ್ತು ದಲಿತೇತರರಲ್ಲಿ ಅಕ್ಷರಸ್ಥರ ಸಂಖ್ಯೆಯನ್ನು ತೋರಿಸಲಾಗಿದೆ.

**ಕೋಷ್ಟಕ-೩.೧೧. ಸಾಕ್ಷರತೆ: ೧೯೯೧ ಕರ್ನಾಟಕ**

| ವರ್ಗಗಳು | ಮಹಿಳೆ (೧೯೯೧) | ಪುರುಷ (೧೯೯೧) | ಒಟ್ಟು(ಲಕ್ಷಗಳಲ್ಲಿ) (೧೯೯೧) |
|---|---|---|---|
| ದಲಿತರು | ೯.೩೫ | ೧೮.೮೭ | ೨೮.೨೨ |
| ದಲಿತೇರರು | ೭೨.೦೬ | ೧೦೯.೯೫ | ೧೮೨.೦೧ |
| ಒಟ್ಟು | ೮೧.೧೪ | ೧೨೮.೮೨ | ೧೨೦.೨೩ |

ಮೂಲ: ಜನಗಣತಿ ವರದಿ-೧೯೯೧ ಮತ್ತು ೨೦೧೧

ಕರ್ನಾಟಕದ ಜನಸಂಖ್ಯೆಯಲ್ಲಿ ದಲಿತರ ಪ್ರಮಾಣ ೧೯೯೧ರಲ್ಲಿ ಶೇ. ೨೧ರಷ್ಟಿತ್ತು. ಆದರೆ ರಾಜ್ಯದಲ್ಲಿನ ಒಟ್ಟು ಅಕ್ಷರಸ್ಥರಲ್ಲಿ ದಲಿತರ ಪ್ರಮಾಣ ಕೇವಲ ಶೇ. ೧೩.೪೩, ಕರ್ನಾಟಕದಲ್ಲಿ ದಲಿತೇತರರ ಜನಸಂಖ್ಯೆ ೩೫೬.೯೨ ಲಕ್ಷ ಇವರಲ್ಲಿ ಅಕ್ಷರಸ್ಥರ ಸಂಖ್ಯೆ ೧೮೨.೧ ಲಕ್ಷ (ಶೇ.೫೧) ಕರ್ನಾಟಕದಲ್ಲಿ ದಲಿತರ ಜನಸಂಖ್ಯೆ ೯೨.೮೫ ಲಕ್ಷ. ಇವರಲ್ಲಿ ಅಕ್ಷರಸ್ಥರ ಸಂಖ್ಯೆ ೨೮.೨೨ ಲಕ್ಷ (ಶೇ.೩೧) ಅಕ್ಷರ ಸಂಸ್ಕೃತಿಗೆ ಸಂಬಂಧಿಸಿದಂತೆ ದಲಿತರು ಕರ್ನಾಟಕದಲ್ಲಿ ಎಷ್ಟು ಹಿಂದುಳಿದಿದ್ದಾರೆ. ಎಂತಹ ದುಸ್ಥಿತಿಯಲ್ಲಿದ್ದಾರೆ ಎಂಬುದು ಮೇಲಿನ ಅಂಕಿ-ಅಂಶಗಳಿಂದ ಸ್ಪಷ್ಟವಾಗುತ್ತದೆ.

**ನಾಲ್ಕು ಸೂಚಿಗಳು:**

ನಾಲ್ಕು ಸೂಚಿಗಳನ್ನು ಬಳಸಿಕೊಂಡು ಕರ್ನಾಟಕದಲ್ಲಿ ದಲಿತರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಹಾಗೂ ಸ್ಥಾನಮಾನ ದಲಿತೇತರರಿಗಿಂತ ತೀವ್ರ ಕೆಳಮಟ್ಟದಲ್ಲಿದೆ ಎಂಬುದನ್ನು ಹೇಳಬಹುದು

೧. ಪ್ರಾಥಮಿಕ ವಲಯವನ್ನು ಅವಲಂಬಿಸಿಕೊಂಡಿರುವ ದಲಿತ ದುಡಿಮೆಗಾರರ ಪ್ರಮಾಣವು (ಶೇ ೮೦.೩೨) ದಲಿತೇತರರು(ಶೇ. ೬೩.೬೪) ಅಧಿಕವಾಗಿದೆ.

೨. ಒಟ್ಟು ದಲಿತ ದುಡಿಮೆಗಾರರಲ್ಲಿ ಕೃಷಿ ಕೂಲಿಕಾರರ ಪ್ರಮಾಣ ಶೇ. ೪೮.೫೯ರಷ್ಟಿದ್ದರೆ, ದಲಿತೇತರ ದುಡಿಮೆಗಾರರಲ್ಲಿ ಅವರ ಪ್ರಮಾಣ ಕೇವಲ ಶೇ. ೧೮.೭೯

೩. ದಲಿತರ ಜನಸಂಖ್ಯೆಯಲ್ಲಿ ಅಕ್ಷರಸ್ಥ ಪ್ರಮಾಣ ಶೇ. ೩೧ರಷ್ಟಿದ್ದರೆ ದಲಿತೇರರ ಜನಸಂಖ್ಯೆಯಲ್ಲಿ ಅಕ್ಷರಸ್ಥರ ಪ್ರಮಾಣ ಶೇ. ೫೧

೪. ಕರ್ನಾಟಕದ ಜನಸಂಖ್ಯೆಯಲ್ಲಿ ದಲಿತರ ಪ್ರಮಾಣ ಶೇ. ೨೧. ಆದರೆ ರಾಜ್ಯದ ಒಟ್ಟು ಅಕ್ಷರಸ್ಥರಲ್ಲಿ ದಲಿತ ಅಕ್ಷರಸ್ಥರ ಪ್ರಮಾಣ ಶೇ. ೧೩.೪೩ (ಚಂದ್ರಶೇಖರ್.ಟಿ.ಆರ್ (೨೦೧೩), "ಕಷ್ಟಕುಲದ ಕಥೆ-ದಲಿತ ಸಬಲೀಕರಣದ ಅಧ್ಯಯನಗಳು", ಲಡಾಯಿ ಪ್ರಕಾಶನ, ಗದಗ. ಪು. ೫೧-೫೨)

## ಕೋಷ್ಟಕ-೩.೧೨. ದಲಿತ ವರ್ಗಗಳ ಮಾನವ ಅಭಿವೃದ್ಧಿ ಸೂಚಿ-೨೦೦೪

| ರಾಜ್ಯ ಜನಸಂಖ್ಯೆ ಪ್ರವರ್ಗ | ಜನನ ಕಾಲದ ನಿರೀಕ್ಷಿತ ಆಯುಷ್ಯ ಪ್ರಮಾಣ | ಸಾಕ್ಷರತ ದರ | ಸಂಯುಕ್ತ ದಾಖಲಾತಿ (1–12ನೇ ತರಗತಿ) | ತಲಾವಾರು ಚಾಲ್ತಿ ಆದಾಯ | ತಲಾವಾರು ಒಟ್ಟು ಆಂತರಿಕ ಉತ್ಪನ್ನ (ರೂ.ಗಳಲ್ಲಿ) | ತಲಾವಾರು ನೈಜ ಒಟ್ಟು ಆಂತರಿಕ ಉತ್ಪನ್ನ (ರೂ.ಗಳಲ್ಲಿ) | ಆರೋಗ್ಯ ಸೂಚ್ಯಂಕ | ಶಿಕ್ಷಣ ಸೂಚ್ಯ | ಆದಾಯ ಸೂಚ್ಯ | ಮಾನವ ಅಭಿವೃದ್ಧಿ ಸೂಚಿ |
|---|---|---|---|---|---|---|---|---|---|---|
| ದಲಿತ ಪ್ರ.ಜಾ–2004 | ೬೨ | ೫೨.೮೭ | ೮೪.೦೮ | ೬೯೫೧ | ೭೮೬೪ | ೧೭೧೯ | ೦.೬೧೭ | ೦.೬೩೩ | ೦.೪೭೫ | ೦.೫೭೫ |
| ದಲಿತ ಪ್ರ.ಪಂ–2004 | ೬೧.೮ | ೪೮.೨೭ | ೭೨.೩೧ | ೫೭೧೯ | ೬೪೭೦ | ೧೪೧೪ | ೦.೬೧೩ | ೦.೫೬೩ | ೦.೪೪೨ | ೦.೫೩೯ |
| ಕರ್ನಾಟಕದ ಎಲ್ಲ ವರ್ಗ2001 | ೬೫.೮ | ೬೬.೬೪ | ೮೦.೨೮ | ೧೯೪೪ | ೧೩೦೫೭ | ೨೮೫೪ | ೦.೬೮ | ೦.೭೧೨ | ೦.೫೫೯ | ೦.೬೫ |

ಮೂಲ: ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫

ಈ ಕೋಷ್ಟಕದ ಅಂಕಿಅಂಶಗಳ ಪ್ರಕಾರ ಸಾಮಾನ್ಯ ಮತ್ತು ದಲಿತರ ಸ್ಥಿತಿಗತಿಗಳನ್ನು ಅವಲೋಕಿಸಿದರೆ ಈ ಅಂಕಿಅಂಶಗಳು ಸ್ಪಷ್ಟವಾಗಿ ಗೋಚರಿಸುವುದೇನೆಂದರೆ ನಾಗರಿಕರ ಉತ್ತಮ ಬದುಕು ಸಾಗಿಸಬೇಕೆಂದರೆ ಮಾನವರೊಳಗೊಂಡ ಅಭಿವೃದ್ಧಿ ಅಗತ್ಯತೆಗಳು ಕನಿಷ್ಟ ಮಟ್ಟದಲ್ಲಾದರೂ ಪೂರೈಕೆಯಾಗಬೇಕು. ಆದರೆ ಸಾಮಾನ್ಯ ಮತ್ತು ದಲಿತರಿಗೆ ಇರುವಂಥ ಅತಿದೊಡ್ಡ ಅಂತರ ಇರುವುದು ವ್ಯಕ್ತವಾಗುತ್ತದೆ. ಜೀವನ ನಿರೀಕ್ಷೆ ಸಾಮಾನ್ಯರಲ್ಲಿ ೬೫.೮ ಇದ್ದರೆ ದಲಿತರಲ್ಲಿ ೭೨.೦ಯಿಂದ ೬೧.೮ಕ್ಕೆ ಇಳಿಮುಖವಾಗಿದೆ. ನಾಗರಿಕ ಬದುಕು ಸಾಗಿಸುವ ಸಾಮಾನ್ಯ ಅಕ್ಷರಜ್ಞಾನ ಕೂಡ ಅಗತ್ಯ. ಆದರೆ ಸಾಮಾನ್ಯರಲ್ಲಿ ೬೬.೬೪ ಮತ್ತು ದಲಿತರಲ್ಲಿ ೫೨.೮೭ರಿಂದ ೪೮.೨೭ಕ್ಕೆ ಕಡಿಮೆ ಇದೆ. ಅದೇ ಸಂಯುಕ್ತ ದಾಖಲಾತಿ ಎಲ್ಲರಲ್ಲಿ ೮೦.೨೮ ಮತ್ತು ದಲಿತರಲ್ಲಿ ೮೪.೦೮–೭೨.೩೧ಕ್ಕೆ ಹೆಚ್ಚಾಗಿರುವುದು ಇವರ ಸಂಖ್ಯಾಬಲ ಮತ್ತು ಹಸಿವಿನ ಬವಣೆ ತೀರಿಸಿಕೊಳ್ಳಲು 'ಬಿಸಿಯೂಟ'ದ ಪ್ರಯೋಜನ ಪಡೆಯಲು ದಾಖಲಾತಿ ಹೆಚ್ಚಾಗಿದೆ. ನಂತರ ಶಾಲೆ ಬಿಟ್ಟ ಮಕ್ಕಳ ಸಂಖ್ಯೆ ಹೆಚ್ಚಾಗಿದೆ ತಲಾವಾರು ಚಾಲ್ತಿ ಆದಾಯ ಸಾಮಾನ್ಯ ೧೯೯೪೪. ಆದರೆ ದಲಿತರಲ್ಲಿ ೬೯೫೧–೫೭೧೯ ಇಳಿಕೆಯಾಗಿದೆ. ಅದೇ ಕ್ರಮೇಣ ತಲಾ ಒಟ್ಟು ಆಂತರಿಕ ಉತ್ಪನ್ನ ಮತ್ತು ತಲಾವಾರು(ರೂ. ಗಳಲ್ಲಿ) ನೈಜ ಒಟ್ಟು ಆಂತರಿಕ ಉತ್ಪನ್ನ  ಸಾಮಾನ್ಯರಲ್ಲಿ ೧೩೦೫೭ ಮತ್ತು ೨೮೫೪ ಹಾಗೂ ದಲಿತರಲ್ಲಿ ೭೮೬೪ರಿಂದ ೬೪೭೦, ೧೭೧೯ರಿಂದ ೧೪೧೪ರಷ್ಟು ಕಡಿಮೆಯಿದೆ. ಆರೋಗ್ಯ, ಶಿಕ್ಷಣ, ಆದಾಯ ಸೂಚ್ಯಂಕಗಳಲ್ಲಿ ಕೋಷ್ಟಕಗಳಲ್ಲಿ ವ್ಯಕ್ತವಾಗುವಂತೆ ಸಾಮಾನ್ಯರಲ್ಲಿ ೦.೬೮೦, ೦.೭೧೨ ಮತ್ತು ೦.೫೯೯ ಮತ್ತು ದಲಿತರಲ್ಲಿ ೦.೬೧೭, ೦.೬೩೩, ೦.೪೭೫ರಷ್ಟು ವ್ಯತ್ಯಾಸದಿಂದ ಕೂಡಿದೆ. ಅದೇ ಮಾನವ ಅಭಿವೃದ್ಧಿ ಸೂಚಿ ಸಾಮಾನ್ಯ (೦.೬೫೦) ಮತ್ತು ದಲಿತ(೦.೫೭೫ ಮತ್ತು ೦.೫೩೯)ರಲ್ಲಿ ಒಟ್ಟಾರೆ ಸ್ಥಿತಿಗತಿಯು ಉತ್ತಮವಾಗಿಲ್ಲ ಎಂಬ ತೀರ್ಮಾನಕ್ಕೆ ಬರಬಹುದಾಗಿದೆ.

ಸರ್ವಾಂಗೀಣ ಪ್ರಗತಿಗೆ ಮಾನವ ಕಂಡುಕೊಂಡ ಇತ್ತೀಚಿನ ಸತ್ಯಾಂಶಗಳಲ್ಲಿ ಮಾನವ ಅಭಿವೃದ್ಧಿ ಆರ್ಥಿಕ ಅತ್ಯಾವಶ್ಯಕವಾಗಿ ಬೇಕಿರುವ ಸಾಮಾಜಿಕ ಹಾಗೂ ಸಾಂಸ್ಕೃತಿಕ ತಂತ್ರಗಳು. ಅವುಗಳಲ್ಲಿ ಪ್ರಧಾನವಾಗಿ ದೀರ್ಘಾಯುಷ್ಯ, ಸಾಕ್ಷರತೆ–ಶಿಕ್ಷಣ ಮತ್ತು ತಲಾ ಆದಾಯಗಳೇ ಆಗಿವೆ. ಭಾರತದಂತಹ ಸನ್ನಿವೇಶದಲ್ಲಿಯೂ ಎಲ್ಲಾ ಕ್ಷೇತ್ರಗಳ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ಯು.ಎನ್.ಡಿ.ಪಿ.ಯ ಮಾರ್ಗಸೂಚಿಗಳು ಅನುಪಾತಗಳು ಅನುಷ್ಠಾನಕ್ಕೆ ಅಣಿಯಾಗದಂತೆ ಇಲ್ಲಿನ ಆರ್ಥಿಕ ಮತ್ತು ಸಾಮಾಜಿಕ ಅಂತರಗಳ ಪ್ರಧಾನ ಪಾತ್ರವಹಿಸುತ್ತದೆ. ಸಾಮಾಜಿಕ ಅಂಶಗಳ ಪರಿಗಣನೆಯಲ್ಲಿ ಅವಕಾಶ ವಂಚಿತ ಹಾಗೂ ಶೋಷಿತ ಜಾತಿ ಸಮುದಾಯಗಳದೇ ಸಿಂಹಪಾಲು. ಮಾನವ ಅಭಿವೃದ್ಧಿ ಸೂಚಿಯಲ್ಲಿನ ಲಭ್ಯ ಅಂಕಿ–ಅಂಶಗಳೇ ಈ ಅಂತರಗಳನ್ನು ಸ್ಪಷ್ಟಪಡಿಸುತ್ತವೆ. ನಿಖರವಾಗಿ ಲಿಂಗ ಸಾಕ್ಷರತೆಯ ಉದ್ಯೋಗ ತಲಾದಾಯ, ಗ್ರಾಮ, ನಗರಗಳ ಜೀವನ ಶೈಲಿ ಇವೇ ಮೊದಲಾದ ಸೂಚಿಗಳು ಪ್ರಧಾನವಾದವು. ರಾಷ್ಟ್ರೀಯ ಸಾಮರ್ಥ್ಯವನ್ನು ಹೊಂದಿರುವ ಉದ್ಯೋಗಗಳು ಆದಾಯ ಮತ್ತು ಆಸ್ತಿಯಂತಹವುಗಳ ಅವಕಾಶಗಳನ್ನು ಕೆಳಜಾತಿ ಗುಂಪುಗಳಿಗೆ ಹೋಲಿಸಿದರೆ ಮೇಲ್‌ಸ್ತರದವರು ಅಧಿಕವಾಗಿ ಹೊಂದಿದ್ದಾರೆ. ಸಣ್ಣ ಭೂ ಹಿಡುವಳಿಗಳು, ದ್ವಿತೀಯ ಸೇವಾಕ್ಷೇತ್ರದಲ್ಲಿ ತೊಡಗಲು ಅವಕಾಶವಿಲ್ಲದೆ ವಂಚಿತರಾಗಿರುವುದನ್ನು ನಿರ್ಧರಿಸಬಹುದಾಗಿದೆ.

ಸಾಮಾಜಿಕ ಆಧಾರಿತ ಅಸಮಾನತೆಗಳನ್ನು ಹೋಗಲಾಡಿಸಿ ಮಾನವ ಅಭಿವೃದ್ಧಿಗೆ ಪೂರಕವಾಗೂ ಅಗತ್ಯ ನೀತಿಗಳು ಮತ್ತು ಯೋಜನೆಗಳು ರೂಪುಗೊಂಡಾಗಿವೆ. ಅಂತಹವುಗಳಲ್ಲಿ ವಿಶೇಷ ಘಟಕ ಯೋಜನೆ ಒಂದು. ಇದರಡಿಯಲ್ಲಿ ಶಿಕ್ಷಣ ವಸತಿ ಮತ್ತು ಕೃಷಿಗೆ ನೀರಾವರಿ ಸೌಲಭ್ಯಗಳಿಗಾಗಿ ನೆರವು ನೀಡುವುದಾಗಿದೆ. ಸೌಲಭ್ಯಗಳೇನೆಯಿದ್ದರೂ ಅಸ್ಪೃಶ್ಯತೆಯ ನೋವಿನಿಂದ ಈ ಸಮುದಾಯ ಮುಕ್ತಿ ಪಡೆದಿಲ್ಲದಿರುವುದು ದಾಖಲಾಗಿರುವ ಅಂಕಿ-ಅಂಶಗಳಿಂದ ಸ್ಪಷ್ಟವಾಗುತ್ತವೆ. ಇವು ಬಹುಸಂಖ್ಯಾತ ಜಾತಿ ಗುಂಪುಗಳು ಒಂದು ರಾಷ್ಟ್ರದ ಅಭಿವೃದ್ಧಿಯ ಮುಖ್ಯವಾಹಿನಿಯಲ್ಲಿ ಹೊಂದಲು ಇರುವ ತೊಡಕಾಗಿ ಪರಿಣಮಿಸಿವೆ. ಅದಕ್ಕಾಗಿ ಭಾರತದ ಆಂತರಿಕ ಸಾಮಾಜಿಕ ಅಡೆತಡೆಗಳಿಂದಾಗಿ ಪ್ರಪಂಚದ ಇತರೆ ರಾಷ್ಟ್ರಗಳಿಗೆ ಅನ್ವಯವಾಗುವ ಮಾನವಾಭಿವೃದ್ಧಿ ಮಾರ್ಗ ಸೂಚಿಗಳು ನೇರ ಅನ್ವಯಸಲಾರವು. ಮಾನವಾಭಿವೃದ್ಧಿಯನ್ನು ಭಾರತಕ್ಕೆ ಅನ್ವಯಿಸುವಾಗ ಅಗತ್ಯವಾಗಿ ಈಗಾಗಲೇ ಸೂಚಿಸಿರುವ ಸಾಮಾನ್ಯ ಮಾರ್ಗ ಸೂಚಿಯ ಜೊತೆಗೆ ಸಮಾನತೆ, ನಿರ್ಭೀತಿ, ಅಸ್ಪೃಶ್ಯತೆರಹಿತಗಳಂಥ ಮಾನದಂಡಗಳು ಪರಿಗಣನೆಗೆ ಪ್ರಧಾನವಾಗಬೇಕಾದವು. ಒಂದು ದೇಶದ ಸಂಪತ್ತು ರಾಷ್ಟ್ರದ ನೈಜ ಅಭಿವೃದ್ಧಿ ಸಾಧ್ಯವಾಗಬಲ್ಲದು ಎಂಬ ಅರಿವು ಕೂಡ ಮುಖ್ಯವಾಗಿರುತ್ತದೆ.

**೩.೫. ಉಪಸಂಹಾರ**

ಈ ಅಧ್ಯಯನದ ತಾತ್ಪರ್ಯದಲ್ಲಿ ಹೇಳುವುದಾದರೆ ಕರ್ನಾಟಕವು ತನ್ನ ರಾಜ್ಯಮಟ್ಟದಲ್ಲಿ ಮಾನವ ಅಭಿವೃದ್ಧಿ ವರದಿಯನ್ನು ಪ್ರಕಟಿಸುವುದರಲ್ಲಿ ಮಹತ್ವದ ಸ್ಥಾನವನ್ನು ಪಡೆದಿರುವುದನ್ನು ಕಾಣಬಹುದು. ದೇಶದಲ್ಲಿ ರಾಜ್ಯ ಮಾನವ ಅಭಿವೃದ್ಧಿ ವರದಿಯನ್ನು ೧೯೯೯ರಲ್ಲಿ ಪ್ರಕಟಿಸಿದ ಎರಡನೆಯ ರಾಜ್ಯ ಕರ್ನಾಟಕ. ಅದು ಇಂದು ರಾಜ್ಯ, ಜಿಲ್ಲಾ ಮತ್ತು ಗ್ರಾಮಮಟ್ಟದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರೂಪಿಸುವ ವಿಧಾನವನ್ನು ಅದು ಅಭಿವೃದ್ಧಿಪಡಿಸಿದೆ. ದೇಶದಲ್ಲಿ ಪ್ರಥಮ ಭಾರಿಗೆ ಪ.ಜಾ. ಮತ್ತು ಪ.ಪಂ.ಗಳಿಗೆ ಪ್ರತ್ಯೇಕವಾಗಿ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ರೂಪಿಸಿ ಕೀರ್ತಿ ಕರ್ನಾಟಕಕ್ಕೆ ಸಲ್ಲಬೇಕು. ಅದು ಪ್ರಕಟಿಸಿದ ತನ್ನ ಎರಡನೆಯ ಕರ್ನಾಟಕ ಮಾನವ ಅಭಿವೃದ್ಧಿ ವರದಿ(೨೦೦೫)ಯಲ್ಲಿ ಸ್ಯಾಂಪಲ್ ವಿಧಾನವನ್ನು ಅಳವಡಿಸಿಕೊಂಡು ಪ.ಜಾ. ಮತ್ತು ಪ.ಪಂಗಳಿಗೆ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರೂಪಿಸಲಾಯಿತು. ಇದರ ನಂತರ ೨೦೧೪ರಲ್ಲಿ ಜಿಲ್ಲಾ ಮಾನವ ಅಭಿವೃದ್ಧಿ ವರದಿಗಳನ್ನು ರೂಪಿಸುವ ಸಂದರ್ಭದಲ್ಲಿ ಡಾ. ಚಂದ್ರ ಪೂಜಾರಿ ಅವರು ರೂಪಿಸಿದ್ದ ದಲಿತ ಅಭಿವೃದ್ಧಿ ಸೂಚ್ಯಂಕವನ್ನು ಆದರಿಸಿ ಪ್ರತಿ ಜಿಲ್ಲೆಯಲ್ಲಿ ಸ್ಯಾಂಪಲ್ ಮಾಹಿತಿಯನ್ನು ಆಧರಿಸಿ ಎಲ್ಲ ೩೦ ಜಿಲ್ಲೆಗಳಿಗೂ ದಲಿತ ಅಭಿವೃದ್ಧಿ ಸೂಚ್ಯಂಕಗಳನ್ನು ರೂಪಿಸಲಾಯಿತು. ಒಟ್ಟಾರೆಯಾಗಿ ಕರ್ನಾಟಕದಲ್ಲಿ ಮಾನವ ದಲಿತ ಅಭಿವೃದ್ಧಿಯ ಸಂಗತಿಗಳನ್ನು ಪರಾಮರ್ಶಿಸಿದ್ದು ವಾಸ್ತವ ಚಿತ್ರಣವನ್ನು ಹಲವು ಅಂಶಗಳ ಮೂಲಕ ಸ್ಪಷ್ಟವಾಗಿ ದಾಖಲಿಸಿದೆ. ಅದರ ಒಟ್ಟಾರೆಯ ಫಲಿತಗಳು ದಲಿತರ ಮಾರ್ಗೋಪಾಯದ ಸಂಗತಿಗಳನ್ನು ತಿಳಿಸುವಲ್ಲಿ ಪರಿಣಾಮಕಾರಿಯಾಗಿ ವಿವರಿಸಲಾಗಿದೆ.

ಅಧ್ಯಾಯ ನಾಲ್ಕು

# ದಲಿತರು ಮತ್ತು ದಲಿತೇತರರ ನಡುವೆ ಅಭಿವೃದ್ಧಿಗೆ ಸಂಬಂಧಿಸಿದಂತೆ ವ್ಯತ್ಯಾಸಕ್ಕೆ ಕಾರಣಗಳು

ಅಧ್ಯಾಯ ನಾಲ್ಕು

# ದಲಿತರು ಮತ್ತು ದಲಿತೇತರರ ನಡುವೆ ಅಭಿವೃದ್ಧಿಗೆ ಸಂಬಂಧಿಸಿದಂತೆ ವ್ಯತ್ಯಾಸಕ್ಕೆ ಕಾರಣಗಳು

## ೪.೧. ಪ್ರಸ್ತಾವನೆ

ಈ ಹಿಂದಿನ ಅಧ್ಯಾಯಗಳಲ್ಲಿ ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಅಧ್ಯಯನದ ಜೊತೆಗೆ ದಲಿತ ಮಾನವ ಅಭಿವೃದ್ಧಿ ಅಧ್ಯಯಗಳ ಆಯಾಮಗಳನ್ನು ಚರ್ಚಿಸಲಾಗಿದೆ. ಕರ್ನಾಟಕದಲ್ಲಿ ದಲಿತರ ಮಾನವ ಅಭಿವೃದ್ಧಿ ಸ್ಥಿತಿಗತಿಗಳನ್ನು ತಿಳಿಯಲಾಗಿದೆ. ಈಗ ದಲಿತ ಮತ್ತು ದಲಿತೇತರರ ಮಾನವ ಅಭಿವೃದ್ಧಿಯಲ್ಲಿ ವ್ಯತ್ಯಾಸಗಳಿರಲು ಕಾರಣಗಳು ಏನು ಅನ್ನುವುದನ್ನು ಪಟ್ಟಿ ಮಾಡಬೇಕಾಗಿದೆ. ಅಂದರೆ ಸಾಕ್ಷರತೆ, ಶಿಕ್ಷಣ, ಆರೋಗ್ಯ, ಜೀವನಮಟ್ಟ, ಅಸ್ಪೃಶ್ಯತೆ, ದುಡಿಮೆಯ ಸ್ವರೂಪ, ಭೂ ಹಿಡುವಳಿ ರಚನೆ, ಲಿಂಗ ಸಂಬಂಧಿ ಆಯಾಮ, ಬಡತನ ಕುರಿತು ತಿಳಿಯಬೇಕಿದೆ. ದಲಿತರ ಕುಟುಂಬವಾರು ತಲಾ ಮಾಸಿಕ ಅನುಭೋಗ ವೆಚ್ಚ ಹೀಗೆ "ಹಕ್ಕು ಮತ್ತು ಹಂಗಿನ" ಪ್ರಶ್ನೆಗಳ ಮೂಲಕ ತಿಳಿದುಕೊಳ್ಳುವುದು ಅತ್ಯಗತ್ಯವಾಗಿದೆ.

ಒಂದು ರಾಷ್ಟ್ರ, ರಾಜ್ಯ, ಜಿಲ್ಲೆಗಳ ಅಭಿವೃದ್ಧಿಯ ಆಲೋಚನೆಯ ಜೊತೆಯಲ್ಲಿ ಜನರನ್ನು ಒಳಗೊಂಡ ಅಭಿವೃದ್ಧಿ ಮುಖ್ಯವಾಗಿರುತ್ತದೆ. ಆದರೆ ದಲಿತರು ಸಮಾಜದಲ್ಲಿ ಇದ್ದು ಇಲ್ಲದೇ ಇರುವಂಥ ಸನ್ನಿವೇಶಗಳು ಅಧ್ಯಯನಗಳಿಂದ ಗೋಚರವಾಗುತ್ತದೆ. ವರಮಾನದ ಹೆಚ್ಚಳವೇ ಅಭಿವೃದ್ಧಿ ಎಂಬ ಪರಿಕಲ್ಪನೆ ಇತ್ತು. ಆದರೆ ೧೯೯೧ರ ತರುವಾಯ ವರದಿಗಳ ಪ್ರಕಾರ ಮಾನವ ಅಭಿವೃದ್ಧಿ, ಲಿಂಗ ತಾರತಮ್ಯ, ಅಸಮಾನತೆ ಇತ್ಯಾದಿಗಳನ್ನು ಗುರುತಿಸಲಾಯಿತು. ಬಹುತೇಕ ರಾಷ್ಟ್ರಗಳಲ್ಲಿ ಅಭಿವೃದ್ಧಿಯಲ್ಲಿ ಭಾಗಿಯಾಗುವ ಮಹಿಳೆಯರ ಜನಸಂಖ್ಯೆಯನ್ನು ಅವರ ಕೊಡುಗೆಗಳನ್ನು ಕಡೆಗಣಿಸಲಾಗಿತ್ತು. ಅಂತೆಯೇ ನಮ್ಮ ರಾಷ್ಟ್ರ ಹಾಗೂ ರಾಜ್ಯಗಳಲ್ಲಿ ದಲಿತರನ್ನು ತಾತ್ಸಾರ ಮನೋಭಾವದಿಂದ ನೋಡುತ್ತಿರುವುದು ಕೂಡ ಮಾನವ ಸಂಪತ್ತಿನ ದೊಡ್ಡ ನಷ್ಟ ಮತ್ತು ಅವಮಾನವಾಗಿದೆ. ಅಭಿವೃದ್ಧಿಯ ಕೊಡುಗೆಯಲ್ಲಿ ದಲಿತರ ಪಾತ್ರವೂ ಇದೆ. ಆದರೆ ಅವರನ್ನು

ಕಡೆಗಣಿಸಲಾಗುತ್ತದೆ. ಅಭಿವೃದ್ಧಿಯಲ್ಲಿ ಪ್ರಾಪ್ತವಾಗುವ ಅಂಶಗಳಲ್ಲಿ ದಲಿತರು ಮತ್ತು ದಲಿತೇತರರ ಧಾರಣ ಸಾಮರ್ಥ್ಯ ಸಂಗತಿಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಕರ್ನಾಟಕ ದಲಿತ ಜನಸಂಖ್ಯೆಯ ಪ್ರಾದೇಶಿಕ ಆಯಾಮ, ದಲಿತರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ ಹಾಗೂ ವರ್ತಮಾನದಲ್ಲಿ ದಲಿತರ ಸ್ಥಿತಿಗತಿ–ಜೀವನಮಟ್ಟವು ಎಷ್ಟರಮಟ್ಟಿಗೆ ಉಳಿದವರ ಜೀವನ ಮಟ್ಟಕ್ಕೆ ಸರಿಸಮವಾಗಿದೆ ಅಥವಾ ಅಸಮಾನತೆಯಿಂದ ಕೂಡಿದೆ ಎಂಬುದನ್ನು ಮೊದಲನೆಯ ಭಾಗದಲ್ಲಿ ಚರ್ಚಿಸಲಾಗಿದೆ. ವಿವಿಧ ಅಭಿವೃದ್ಧಿ ಸೂಚಿಗಳನ್ನು ಬಳಸಿ ಇಲ್ಲಿ ದಲಿತರ ವರ್ತಮಾನದ ಸ್ಥಿತಿಗತಿಯನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಎರಡನೆಯ ಭಾಗದಲ್ಲಿ ದಲಿತರ ದೌರ್ಜನ್ಯ ಪ್ರಕರಣಗಳ ಕುರಿತು ದೇಶ, ರಾಜ್ಯ ಮತ್ತು ಜಿಲ್ಲಾ ಮಟ್ಟಗಳಲ್ಲಿನ ಅಧ್ಯಯನ ನಡೆಸಲಾಗಿದೆ. ಮೂರನೆಯ ಭಾಗದಲ್ಲಿ ಅವರ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಭವಿಷ್ಯ ಎಷ್ಟರಮಟ್ಟಿಗೆ ಉತ್ತೇಜನಕಾರಿಯಾಗಿದೆ–ಉತ್ಸಾಹದಾಯಕವಾಗಿದೆ ಎಂಬುದನ್ನು ಚರ್ಚಿಸಲಾಗಿದೆ. 'ಅಧ್ಯಯನದಲ್ಲಿ ಕಂಡಬಂದ ಸ್ವರೂಪ ಮತ್ತು ತಾತ್ಪರ್ಯ' ಅನ್ನುವ ಕೊನೆಯ ತಾತ್ಪಾರ್ಯ ಭಾಗದಲ್ಲಿ ಪರಿಶಿಷ್ಟರ ಬದುಕು ಸಮಾನತೆ ಮತ್ತು ಸಾಮಾಜಿಕ ನ್ಯಾಯದ ಆಧಾರದಲ್ಲಿ ಸಮೃದ್ಧವಾಗಬೇಕೆಂದರೆ ಸಮಾಜ ಮತ್ತು ಸರ್ಕಾರ ಏನು ಮಾಡಬೇಕು ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ದಲಿತರು ಅನ್ನುವುದನ್ನು ಇಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳನ್ನು ಕೂಡಿಸಿ ಸಂಯುಕ್ತವಾಗಿ ಪರಿಭಾವಿಸಿಕೊಳ್ಳಲಾಗಿದೆ. ಈ ಅಧ್ಯಾಯದ ಚರ್ಚೆಯ ಸಂದರ್ಭದಲ್ಲಿ ದಲಿತ ಮತ್ತು ದಲಿತೇತರರು ಎಂಬ ನುಡಿಗಳನ್ನು ಸಮಾನ ಅರ್ಥದಲ್ಲಿ ಬಳಸಲಾಗಿದೆ. ಈ ಎರಡು ವರ್ಗಗಳ ನಡುವಿನ ಭಿನ್ನತೆಗಳನ್ನು ಗಮನಿಸಿಯೂ ಇಲ್ಲಿ ಇವೆರಡನ್ನು ಸಂಯುಕ್ತವಾಗಿ ಪರಿಭಾವಿಸಿಕೊಂಡು ಚರ್ಚೆಯನ್ನು ರೂಪಿಸಲಾಗಿದೆ. ಕಳೆದ ಏಳು ದಶಕಗಳಲ್ಲಿ ದಲಿತರ ಆರ್ಥಿಕ, ಸಾಮಾಜಿಕ, ರಾಜಕೀಯ ಸ್ಥಿತಿಗತಿಯು ಸಾಕಷ್ಟು ಉತ್ತಮಗೊಂಡಿದೆ. ಅದು ಸಮಾನತೆ ನೆಲೆಯಲ್ಲಿ ನಡೆದಿಲ್ಲ ಎಂಬುದನ್ನು ಇಲ್ಲಿ ಗಮನಿಸಬೇಕು. ಅವರ ಸ್ಥಿತಿಗತಿಯು ಸಮಾಜದಲ್ಲಿ ಉಳಿದವರ(ಶಿಷ್ಟ) ಮಟ್ಟಕ್ಕೆ ಸರಿಸಮನಾಗಿ ಉತ್ತಮಗೊಂಡಿದೆ ಎಂದು ಹೇಳಲು ಸಾಧ್ಯವಿಲ್ಲ. ಪರಿಶಿಷ್ಟರು ಮತ್ತು ಶಿಷ್ಟರ ನಡುವೆ ಅನೇಕ ಅಭಿವೃದ್ಧಿ ಸೂಚಿಗಳಿಗೆ ಸಂಬಂಧಿಸಿದಂತೆ ಅಂತರ–ಅಸಮಾನತೆಗಳು ಮುಂದುವರಿದಿವೆ.

ದಲಿತರ ಅಭಿವೃದ್ಧಿ ಅನ್ನುವುದು ಕೇವಲ ವರಮಾನಕ್ಕೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ. ವರಮಾನ ಏರಿಕೆಯು ಮುಖ್ಯ. ಆದರೆ ಪರಿಶಿಷ್ಟರ ಸಂದರ್ಭದಲ್ಲಿ ವರಮಾನದ ಏರಿಕೆಯ ಜೊತೆಗೆ ಅಭಿವೃದ್ಧಿ ಅನ್ನುವುದು ಘನತೆಯಿಂದ, ಗೌರವದಿಂದ ಬದುಕುವ ಸಂಗತಿಗೆ ಸಂಬಂಧಿಸಿದೆ. ಇಲ್ಲಿನ ಅಸಮಾನತೆಯು ಸಾಮಾನ್ಯ ಅಸಮಾನತೆಗಿಂತ ಭಿನ್ನವಾದುದು. ಈ ಅಸಮಾನತೆಯು ಬಹುಮುಖಿಯಾದುದು. ಇಲ್ಲಿ ಅನೂಚಾನವಾಗಿ ಮುಂದುವರಿದುಕೊಂಡು ಬಂದಿರುವ ಅಸ್ಪೃಶ್ಯತೆಗೆ ಸಂಬಂಧಿಸಿದ ಅಸಮಾನತೆಯಿದೆ. ಅದಕ್ಕೆ ಸಂಬಂಧಿಸಿದಂತೆ ಭೂಮಾಲೀಕತ್ವದಲ್ಲಿ ಅಸಮಾನತೆಯಿದೆ. ಊರು ಕೇರಿಗಳಿಗೆ ಸಂಬಂಧಿಸಿದ ಅಸಮಾನತೆಯಿದೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ ಅಸಮಾನತೆಯಿದೆ.

ಪರಿಶಿಷ್ಟರೊಳಗಡೆಯೇ ಪುರುಷರು ಮತ್ತು ಮಹಿಳೆಯರ ನಡುವೆ ಅಸಮಾನತೆಯಿದೆ. ಪರಿಶಿಷ್ಟ ಮಹಿಳೆಯರು ಮತ್ತು ಶಿಷ್ಟ ಮಹಿಳೆಯರ ನಡುವೆ ಅಸಮಾನತೆಯಿದೆ. ಪರಿಶಿಷ್ಟರ ವಸತಿಗೆ ಸಂಬಂಧಿಸಿದಂತೆ ಅಸಮಾನತೆಯಿದೆ. ಉದ್ಯೋಗಕ್ಕೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ೧೯೨೦ರಿಂದಲೇ ಸಾಮಾಜಿಕ ನ್ಯಾಯವನ್ನು ಆಧರಿಸಿದ ನೀತಿಯನ್ನು ಅನುಸರಿಸಿಕೊಂಡು ಬಂದಿದ್ದರೂ ಇಂದು ಪರಿಶಿಷ್ಟರ ಉದ್ಯೋಗದ ಪ್ರಮಾಣವು ಅವರ ಜನಸಂಖ್ಯೆಯ ಪ್ರಮಾಣಕ್ಕೆ ಸರಿಸಮನಾಗಿಲ್ಲ. ಈ ಕಾರಣದಿಂದ ಅವರ ಭವಿಷ್ಯವು ದಲಿತೇತರರಿಗಿಂತ ಉತ್ತೇಜನಕಾರಿಯಾಗಿದೆ ಎಂದು ಹೇಳಲು ಬರುವುದಿಲ್ಲ. ಅದು ತೀವ್ರ ನಿರುತ್ತೇಜನಕಾರಿಯಾಗಿದೆ ಎಂದು ಹೇಳಲು ಬರುವುದಿಲ್ಲ.

ದಲಿತರು ಸಮಾಜದ ಅವಿಭಾಜ್ಯ ಭಾಗವಾಗಿದ್ದಾರೆ. ಆದರೆ ಅವರು ಅದೇ ಸಮಯದಲ್ಲಿ ಸಾಮಾಜಿಕ ಪ್ರತ್ಯೇಕೀಕರಣವನ್ನು ಅನುಭವಿಸುತ್ತಿದ್ದಾರೆ. ಇದು ವಿಚಿತ್ರವಾದ ಸನ್ನಿವೇಶವಾಗಿದೆ. ಭಾರತೀಯ ಆರ್ಥಿಕ ಅಭಿವೃದ್ಧಿಯ ವಿಶೇಷತೆಯೇನೆಂದರೆ ಅದರ ಫಲಗಳಿಂದ ದಲಿತರು ವಂಚಿತರಾಗಿರುವುದು. ದಲಿತರು ಆಸ್ತಿ ಮಾಲೀಕತ್ವದಿಂದ ಪ್ರತ್ಯೇಕೀಕರಣಗೊಂಡಿದ್ದಾರೆ. ಆರ್ಥಿಕ ಅಭಿವೃದ್ಧಿಯ ಫಲಗಳಿಂದ ವಂಚಿತರಾಗಿದ್ದಾರೆ. ಭೌತಿಕ ಮೂಲಸೌಲಭ್ಯಗಳ ವಿಸ್ತರಣೆಯಿಂದ ಉಂಟಾಗಿರುವ ಅನುಕೂಲಗಳಿಂದ ಅವರು ಪ್ರತ್ಯೇಕೀಕರಣಗೊಂಡಿದ್ದಾರೆ. ಶಿಕ್ಷಣದಿಂದ ವಂಚಿತ ರಾಗಿದ್ದಾರೆ. ವರಮಾನವನ್ನು ಉತ್ಪಾದಿಸುವ ಚಟುವಟಿಕೆಗಳಿಂದ ಅವರು ವಂಚಿತರಾಗಿದ್ದಾರೆ. ಆದರೂ ಅವರು ಸಮಾಜದ ಅವಿಭಾಜ್ಯ ಅಂಗವಾಗಿದ್ದಾರೆ.

ಈ ಹಿನ್ನೆಲೆಯಲ್ಲಿ ದಲಿತರ ಬದುಕು ವರ್ತಮಾನದಲ್ಲಿ ಎಷ್ಟು ದುಸ್ಥಿತಿಯಿಂದ ಕೂಡಿದೆ; ಅಲ್ಲಿ ಅಸಮಾನತೆಯ ತೀವ್ರತೆ ಎಷ್ಟಿದೆ ಮತ್ತು ಅವರ ಭವಿಷ್ಯವು ಅಭಿವೃದ್ಧಿಯ ದೃಷ್ಟಿಯಿಂದ ಎಷ್ಟು ಉಜ್ವಲವಾಗಿದೆ. ಅವರ ಬದುಕು ಸಮಾನತೆಯ ಕಡೆಗೆ ಚಲಿಸುತ್ತಿದೆಯೇ ಎಂಬುದನ್ನು ಚರ್ಚಿಸುವುದು ಪ್ರಸ್ತುತ ಅಧ್ಯಾಯದ ಉದ್ದೇಶವಾಗಿದೆ. ವಿಶ್ವದ ಎಲ್ಲ ದೇಶಗಳಲ್ಲೂ ನಮ್ಮಲ್ಲಿರುವ ಅಸಮಾನತೆಗೆ ಸಂವಾದಿಯಾದ ಅಸಮಾನತೆಯ ಸಂಗತಿಗಳಿವೆ. ಆದರೆ ಅವು ನಮ್ಮ ಸಮಾಜದ ಸಂದರ್ಭದಲ್ಲಿರುವಷ್ಟು ಬಹುಮುಖಿಯಾಗಿಲ್ಲ. ಅಸಮಾನತೆಗೆ ಸಂಬಂಧಿಸಿದ ಸಾಮಾಜಿಕ ನೆಲೆಗಳನ್ನು ಹೋಗಲಾಡಿಸಿ ಕೊಳ್ಳುವುದರಲ್ಲಿ ಆ ದೇಶಗಳು ಯಶಸ್ವಿಯಾಗಿವೆ. ಅಲ್ಲಿ ಏನಿದ್ದರೂ ಆರ್ಥಿಕ ಅಸಮಾನತೆಯಿದೆ ಮತ್ತು ಲಿಂಗ ಅಸಮಾನತೆಯಿದೆ. ನಮ್ಮ ಸಮಾಜದ ಸಂದರ್ಭದಲ್ಲಿ ಜಾತಿಗಳು, ಅವುಗಳಿಗೆ ಸಂಬಂಧಿಸಿದ ತಾರತಮ್ಯ, ಅಸಮಾನತೆ, ಪ್ರತ್ಯೇಕತನ ಮುಂತಾದವು ಶತಶತಮಾನಗಳಿಂದ–ಅನೂಚಾನವಾಗಿ ಮುಂದುವರಿದುಕೊಂಡು ಬರುತ್ತಿವೆ. ದಲಿತೇತರರು ಸಾಪೇಕ್ಷವಾಗಿ ಭೂಮಾಲೀಕ ರಾಗಿದ್ದರೆ ದಲಿತರು ಸಾಪೇಕ್ಷವಾಗಿ ಭೂರಹಿತರಾಗಿದ್ದಾರೆ. ಉದಾಹರಣೆಗೆ ಕರ್ನಾಟಕದ ಒಟ್ಟು ದುಡಿಮೆಗಾರರಲ್ಲಿ ಭೂಮಾಲೀಕರ/ಸಾಗುವಳಿಗಾರರ ಪ್ರಮಾಣ ಶೇ. ೨೩.೬೦ರಷ್ಟಿದೆ. ಆದರೆ ದಲಿತೇತರಲ್ಲಿ ಒಟ್ಟು ದುಡಿಮೆಗಾರರಲ್ಲಿ ಭೂಮಾಲೀಕರ/ಸಾಗುವಳಿಗಾರರ ಪ್ರಮಾಣ ಶೇ. ೨೫.೨೯ರಷ್ಟಿದ್ದರೆ ದಲಿತರ ಪ್ರಮಾಣ ಕೇವಲ ಶೇ. ೧೮.೪೯ರಷ್ಟಿದೆ (೨೦೧೧ ಜನಗಣತಿ).

ಉಳ್ಳವರಲ್ಲಿ ಬಹುಪಾಲು ಜನರು ಅಕ್ಷರಸ್ಥರಾಗಿದ್ದರೆ, ಉಳಿದವರಲ್ಲಿ ಬಹುಪಾಲು ಜನರು ಅನಕ್ಷರಸ್ಥರಾಗಿದ್ದಾರೆ. ಉಳ್ಳವರಿಗೆ ಅವಕಾಶಗಳು ವಿಸ್ತೃತವಾಗಿದ್ದರೆ ಉಳಿದವರಿಗೆ ಅವು ಸೀಮಿತವಾಗಿವೆ. ಉಳ್ಳವರ ಬದುಕು ಸಮೃದ್ಧವಾಗಿದ್ದರೆ ಉಳಿದವರ ಬದುಕು ದುಃಖ ದುಮ್ಮಾನದಿಂದ ಕೂಡಿದೆ. ಉಳ್ಳವರಿಗೆ ಅಧಿಕಾರಸ್ಥರ ಮತ್ತು ಪ್ರತಿಷ್ಠಿತರ ಜೊತೆ ಸಂಬಂಧ ಅನುಕೂಲಕರವಾಗಿದ್ದರೆ ಉಳಿದವರಿಗೆ ಅದು ಪ್ರತಿಕೂಲವಾಗಿದೆ. ಅಸಮಾನತೆ ಅನ್ನುವುದು ಉಳ್ಳವರಲ್ಲಿಯೂ ಇದೆ. ಉಳ್ಳವರಲ್ಲಿ ಶ್ರೀಮಂತರು, ಅತಿ ಶ್ರೀಮಂತರು, ಆಗರ್ಭ ಶ್ರೀಮಂತರು ಮುಂತಾದ ಶ್ರೇಣಿಗಳಿವೆ. ಉಳ್ಳವರಿಗೆ ಸಂಬಂಧಿಸಿದಂತೆ ಅಸಮಾನತೆಯು ವರಮಾನಕ್ಕೆ ಹೆಚ್ಚು ಸಂಬಂಧಿಸಿದ್ದರೆ ಉಳಿದವರಲ್ಲಿ ಅದು ವರಮಾನ, ವರ್ಗ, ಜಾತಿ, ಲಿಂಗ ಮತ್ತು ಪ್ರಾದೇಶಿಕ ಆಯಾಮಗಳನ್ನು ಹೊಂದಿದೆ. ಆದ್ದರಿಂದ ದಲಿತ ಮತ್ತು ದಲಿತೇತರರ ನಡುವಿನ ಭಿನ್ನತೆಗಳು ಕೇವಲ ಅಸಮಾನತೆಯ ಸಂಗತಿ ಮಾತ್ರವಲ್ಲ. ಅದು ಅನೇಕ ಅಸಮಾನತೆ ಸಂಗತಿಗಳ ಒಂದು ಕೂಪ; ಒಂದು ಜಾಲ. ಅಭಿವೃದ್ಧಿ ಅನ್ನುವುದು ನಮ್ಮ ಸಮಾಜ ದಲ್ಲಿ ಅಖಂಡವಾದ ಪ್ರಕ್ರಿಯೆಯೇನಲ್ಲ. ನಮ್ಮದು ಮೂಲತಃ ಶ್ರೇಣೀಕೃತ, ಅಸಮಾನತೆಯಿರುವ ಪುರುಷ ಪ್ರಧಾನ ಸಮಾಜ. ಇಲ್ಲಿ ತನ್ನಷ್ಟಕ್ಕೆ ಅಭಿವೃದ್ಧಿಯ ಫಲಗಳು ಎಲ್ಲ ವರ್ಗಗಳಿಗೂ, ಎಲ್ಲ ಜಾತಿಗಳಿಗೂ, ಎಲ್ಲ ಲಿಂಗಗಳಿಗೂ, ಸಮಾನವಾಗಿ ದೊರೆಯುವುದಿಲ್ಲ. ಇದರ ಮೇಲೆ ಬೆಳಕು ಚೆಲ್ಲುವ ಕರ್ನಾಟಕದ ವಿವಿಧ ಸಾಮಾಜಿಕ ಗುಂಪುಗಳ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಕೆಳಗೆ ಕೋಷ್ಟಕ ೪.೧ರಲ್ಲಿ ನೀಡಲಾಗಿದೆ.

**ಕೋಷ್ಟಕ ೪.೧. ಸಾಮಾಜಿಕ ಗುಂಪುವಾರು ಮಾನವ ಅಭಿವೃದ್ಧಿ ಸೂಚ್ಯಂಕ: ಕರ್ನಾಟಕ ೨೦೧೦**

| ಕ್ರಸಂ. | ಸಾಮಾಜಿಕ ಗುಂಪುಗಳು | ಮಾನವ ಅಭಿವೃದ್ಧಿ ಸೂಚ್ಯಂಕ | ಸಾಮಾಜಿಕ ಗುಂಪುಗಳ ನಡುವೆ ಅಂತರ(ಸಾಮಾನ್ಯ ಜನಸಂಖ್ಯೆ ಮತ್ತು ಸಾಮಾಜಿಕ ಗುಂಪುಗಳು) |
|---|---|---|---|
| ೧ | ಪರಿಶಿಷ್ಟ ಜಾತಿ | ೦.೨೨೮ | ೦.೨೬೦ |
| ೨ | ಪರಿಶಿಷ್ಟ ಪಂಗಡ | ೦.೩೭೮ | ೦.೧೧೦ |
| ೩ | ಒಬಿಸಿ | ೦.೩೩೧ | ೦.೧೧೭ |
| ೪ | ಅಲ್ಪಸಂಖ್ಯಾತರು(ಮುಸ್ಲಿಮರು) | ೦.೪೩೮ | ೦.೦೩೮ |
| ೫ | ಒಟ್ಟು ಸಾಮಾನ್ಯ ಜನಸಂಖ್ಯೆ | ೦.೪೮೮ | – |

**ಮೂಲ:** ಸೆನ್ಸಸ್ ಆಫ್ ಇಂಡಿಯಾ ೨೦೧೧. ಕರ್ನಾಟಕ. ಡೈರೆಕ್ಟೊರೇಟ್ ಆಫ್ ಸೆನ್ಸಸ್ ಆಪರೇಶನ್, ಬೆಂಗಳೂರು.

ಕರ್ನಾಟಕದ ವಿವಿಧ ಸಾಮಾಜಿಕ ಗುಂಪುಗಳ ನಡುವೆ ಅಭಿವೃದ್ಧಿಯ ಫಲಗಳು ಸಮಾನವಾಗಿ ಹಂಚಿಕೆಯಾಗಿಲ್ಲ ಎಂಬುದು ಮೇಲಿನ ಕೋಷ್ಟಕದ ಅಂಕಿ-ಅಂಶಗಳಿಂದ ತಿಳಿದುಬರುತ್ತದೆ. ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಪ.ಜಾ. ಕೊನೆಯ ಸ್ಥಾನದಲ್ಲಿದೆ. ಅದರ ನಂತರ ಕ್ರಮವಾಗಿ ಒಬಿಸಿಗಳು, ಪ.ಪಂ. ಮತ್ತು ಅಲ್ಪಸಂಖ್ಯಾತರು ಬರುತ್ತಾರೆ. ಸಾಮಾನ್ಯ ಜನಸಂಖ್ಯೆಯ ಮಾನವ ಅಭಿವೃದ್ಧಿ ಸೂಚ್ಯಂಕದ ಮೌಲ್ಯ ಸಾಪೇಕ್ಷವಾಗಿ ಅತ್ಯಧಿಕವಾಗಿದೆ. ಅಭಿವೃದ್ಧಿಯ ಫಲಗಳು ಸಾಮಾಜಿಕ ರಚನೆಯನ್ನು ಮೀರಿ ವಿವಿಧ ಜನವರ್ಗ-ಗುಂಪುಗಳ ನಡುವೆ ಸಮಾನವಾಗಿ ವಿತರಣೆಯಾಗುತ್ತಿಲ್ಲ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅಂದರೆ ದಲಿತರಿಗೆ ಸಂಬಂಧಿಸಿದಂತೆ ಅವಕಾಶಗಳಲ್ಲಿನ ಆಯ್ಕೆಯ ಸ್ವಾತಂತ್ರ್ಯದ ವ್ಯಾಪ್ತಿ ಸೀಮಿತವಾದುದಾಗಿದೆ. ಅಸಮಾನತೆ ಅನ್ನುವುದು ನಮ್ಮ ಸಮಾಜದ ಸಂದರ್ಭದಲ್ಲಿ ಅನೂಚಾನವಾಗಿ ಶತಶತಮಾನಗಳಿಂದ ಮುಂದುವರಿದುಕೊಂಡು ಬರುತ್ತಿರುವ ಒಂದು ಕಳಂಕ.

ಡಾ. ಬಿ.ಆರ್. ಅಂಬೇಡ್ಕರ್ ಅವರು ಇದನ್ನು **'ಶ್ರೇಣೀಕೃತ ಜಾತಿಯ ಅಸಮಾನತೆ'** ಎಂದು ಕರೆಯುತ್ತಾರೆ. ನಮ್ಮಲ್ಲಿರುವ ಅಸಮಾನತೆಗೆ ವರ್ಗ ಆಯಾಮವಿದೆ; ವರ್ಣ ಆಯಾಮವಿದೆ, ಜಾತಿ ಆಯಾಮವಿದೆ ಮತ್ತು ಲಿಂಗ ಆಯಾಮವಿದೆ. ಒಂದು ಆವರಣದಲ್ಲಿನ ಅಸಮಾನತೆಯು ಮತ್ತೊಂದು ಆವರಣದಲ್ಲಿ ಅಸಮಾನತೆಯನ್ನು ಗಟ್ಟಿಗೊಳಿಸುತ್ತಿರುತ್ತದೆ. ಅಸ್ಪೃಶ್ಯತೆಯು ಅನಕ್ಷರತೆಗೆ ಕಾರಣವಾಗಿದ್ದರೆ, ಅನಕ್ಷರತೆಯು ಉದ್ಯೋಗದ ಪರಿಮಿತ ವ್ಯಾಪ್ತಿಗೆ ಕಾರಣವಾಗಿದೆ. ಇವೆರಡೂ ಸೇರಿ ದುಸ್ಥಿತಿಗೆ ಕಾರಣವಾಗಿವೆ. ಅಸ್ಪೃಶ್ಯತೆ, ಜಾತಿ, ಭೂಮಿ ಇಲ್ಲದಿರುವುದು, ಅನಕ್ಷರತೆ ಮುಂತಾದ ಕಾರಣಗಳಿಂದಾಗಿ ಪರಿಶಿಷ್ಟರಿಗೆ ಸಾಮಾಜಿಕ ನ್ಯಾಯವನ್ನು ಪಡೆಯಲು ಸಂಘಟಿತರಾಗುವುದು ಕಷ್ಟವಾಗುತ್ತಿದೆ. ಈ ದೃಷ್ಟಿಯಿಂದ ನಮ್ಮ ದೇಶದಲ್ಲಿರುವ ಜಾತಿ ವ್ಯವಸ್ಥೆಯ ಬಗ್ಗೆ ಡಾ.ಬಿ.ಆರ್.ಅಂಬೇಡ್ಕರ್ ಹೇಳಿರುವ ಮಾತುಗಳನ್ನು ನಾವು ಗಮನಿಸಬಹುದಾಗಿದೆ. ಅವರ ಪ್ರಕಾರ ಜಾತಿ ವ್ಯವಸ್ಥೆಯು 'ಕೇವಲ ಶ್ರಮ ವಿಭಜನೆಗೆ ಸಂಬಂಧಿಸಿದ ಸಂಗತಿಯಲ್ಲ. ಅದು ಶ್ರಮಿಕರ ವಿಭಜನೆಯೂ ಆಗಿದೆ'(ವಿವರಗಳಿಗೆ ನೋಡಿ: ಜೀನ್ ಡ್ರೀಜ್ ಮತ್ತು ಅಮರ್ತ್ಯ ಸೇನ್ ೨೦೧೪. **ಆನ್ ಅನ್‌ಸರ್ಟನ್ ಗ್ಲೋರಿ: ಇಂಡಿಯಾ ಅಂಡ್ ಇಟ್ಸ್ ಕಾಂಟ್ರಡಿಕ್ಷನ್ಸ್''**. ಪು. ೨೧೪-೨೧೫).

ಡಾ. ಬಿ.ಆರ್. ಅಂಬೇಡ್ಕರ್ ಅವರು ತಮ್ಮ **'ಅನಿಹಿಲೇಶನ್ ಆಫ್ ಕಾಸ್ಟ್'** ಕೃತಿಯಲ್ಲಿ ನೀಡಿರುವ ವಿವರಣೆ ಹೀಗಿದೆ: 'ವಿಷಾದನೀಯ ಸಂಗತಿಯೆಂದರೆ ಈಗಲೂ ಜಾತಿಯ ಬಗ್ಗೆ ಸಮರ್ಥನೆಯನ್ನು ನೀಡುವವರಿದ್ದಾರೆ. ಅದರ ಬಗ್ಗೆ ಅನೇಕ ಸಮರ್ಥನೆಗಳಿವೆ. ಜಾತಿ ವ್ಯವಸ್ಥೆ ಅನ್ನುವುದು ಶ್ರಮ ವಿಭಜನೆಯ ಮತ್ತೊಂದು ಹೆಸರು ಎಂದು ಅದನ್ನು ಸಮರ್ಥಿಸಲಾಗುತ್ತಿದೆ. ಶ್ರಮ ವಿಭಜನೆಯು ನಾಗರಿಕ ಸಮಾಜದ ಅತ್ಯಗತ್ಯ ಲಕ್ಷಣ ಅನ್ನುವುದಾದರೆ ಜಾತಿ ವ್ಯವಸ್ಥೆಯು ತಪ್ಪೇನಲ್ಲ ಎಂದು ಇವರು ವಿವರಣೆ ನೀಡುತ್ತಾರೆ. ಈ ವಾದಕ್ಕೆ ಪ್ರತಿಯಾದ ವಿಚಾರವೆಂದರೆ ಜಾತಿ ವ್ಯವಸ್ಥೆಯು ಶ್ರಮ ವಿಭಜನೆ ಮಾತ್ರವಲ್ಲ. ಅದು ಶ್ರಮಿಕರ ವಿಭಜನೆಯೂ ಹೌದು. ನಾಗರಿಕ

ಸಮಾಜಕ್ಕೆ ಶ್ರಮ ವಿಭಜನೆ ಅಗತ್ಯ. ಆದರೆ ಯಾವುದೇ ನಾಗರಿಕ ಸಮಾಜದಲ್ಲಿ ಶ್ರಮ ವಿಭಜನೆ ಅನ್ನುವುದು– ಅಸಹಜ ರೀತಿಯಲ್ಲಿ ಪರಸ್ಪರ ಪ್ರತ್ಯೇಕ ಕೊಠಡಿಗಳಂತೆ ವರ್ಗೀಕರಿಸಿರುವ–ಶ್ರಮಿಕರ ವಿಭಜನೆಯ ಜೊತೆಯಲ್ಲಿ ಇರುವುದು ಸಾಧ್ಯವಿಲ್ಲ. ಜಾತಿ ವ್ಯವಸ್ಥೆ ಅನ್ನುವುದು ಶ್ರಮ ವಿಭಜನೆಗಿಂತ ಭಿನ್ನವಾದ ಶ್ರಮಿಕರ ವಿಭಜನೆ ಮಾತ್ರವಲ್ಲ. ಅದು ಶ್ರೇಣೀಕೃತ ವ್ಯವಸ್ಥೆಯಾಗಿದೆ. ಇಲ್ಲಿ ಶ್ರಮಿಕರನ್ನು ವಿವಿಧ ಶ್ರೇಣಿಗಳಲ್ಲಿ, ಅಂದರೆ ಒಂದರ ಅಡಿಯಲ್ಲಿ ಒಂದರಂತೆ ಜೋಡಿಸಲಾಗುತ್ತದೆ. ಯಾವುದೇ ದೇಶದಲ್ಲೂ ಶ್ರಮ ವಿಭಜನೆ ಅನ್ನುವುದು ಶ್ರಮಿಕರ ಶ್ರೇಣೀಕೃತ ವ್ಯವಸ್ಥೆಗೆ ಕಾರಣವಾಗಿಲ್ಲ'(ಡಾ. ಬಿ. ಆರ್. ಅಂಬೇಡ್ಕರ್. **ಅನಹಿಲೇಶನ್ ಆಫ್ ಕಾಸ್ಟ್.** ಇಲ್ಲಿ: **'ಅನಿಹಿಲೇಶನ್ ಆಫ್ ಕಾಸ್ಟ್: ಅನ್ ಆನೊಟೇಟೆಡ್ ಕ್ರಿಟಿಕಲ್ ಎಡಿಶನ್'. ಎಡಿಟರ್. ಎಸ್. ಆನಂದ್** ೨೦೧೪. **ಇನ್ಟ್ರೋಡ್ಯೂಸಡ್ ವಿತ್ ದಿ ಎಸ್ಸೆ 'ದಿ ಡಾಕ್ಟರ್ ಆಂಡ್ ದಿ ಸೈಂಟ್'.** ಅರುಂಧತಿ ರಾಯ್. ನವಯಾನ. ನವದೆಹಲಿ).

ಈ ಚರ್ಚೆಯು ತುಂಬಾ ಪ್ರಸ್ತುತ. ಏಕೆಂದರೆ ಬಡತನದ ನಿವಾರಣೆ, ಹಸಿವನ್ನು ಹೋಗಲಾಡಿಸುವುದು, ಸಾಮಾಜಿಕ ನ್ಯಾಯ ಮುಂತಾದವು ಇಂದು ಅಧಿಕಾರಸ್ಥರಿಗೆ ಮತ್ತು ಉಳ್ಳವರಿಗೆ ಸಹ್ಯವಾದ–ಒಪ್ಪಿಗೆಯಾದ ಸಂಗತಿಗಳಾಗಿ ಉಳಿದಿಲ್ಲ. ಈ ಬಗ್ಗೆ ಸಾಮಾಜಿಕ ಹೋರಾಟಗಾರ ಹರ್ಷ ಮಂದರ್ ಹೇಳುವಂತೆ 'ನಮ್ಮ ಪ್ರತಿಷ್ಠಿತ ವರ್ಗದ ಪ್ರಜ್ಞೆಯಿಂದಲೇ, ಆತ್ಮಸಾಕ್ಷಿಯಿಂದಲೇ ಬಡವರು, ದುಸ್ಥಿತಿಯನ್ನು ಅನುಭವಿಸುವವರು ಮಾಯವಾಗಿದ್ದಾರೆ'(ಉಲ್ಲೇಖ: ಜೀನ್ ಡ್ರೀಜ್ ಮತ್ತು ಅಮರ್ತ್ಯ ಸೇನ್ ೨೦೧೩: ಪು. ೨೬೫). ಅದೇ ಕೃತಿಯಲ್ಲಿ ಡ್ರೀಜ್ ಮತ್ತು ಸೇನ್ ಅವರು ತಜ್ಞರೊಬ್ಬರ ಮಾತುಗಳನ್ನು ಉಲ್ಲೇಖಿಸುತ್ತಾ 'ಇಂದಿನ ಪ್ರತಿಷ್ಠಿತರು ಹೆಚ್ಚು ತಮ್ಮ ಬಗ್ಗೆ ಮಾತ್ರ ಯೋಚಿಸುತ್ತಾರೆ'(೨೦೧೩;೨೮೩). ಒಟ್ಟಾರೆ ಉಳಿದವರ ಬಗ್ಗೆ ಉಳ್ಳವರಿಗೆ ತಿರಸ್ಕಾರದ ಭಾವನೆಯಿದೆ.

### ೪.೨. ಕರ್ನಾಟಕದಲ್ಲಿ ದಲಿತ ಜನಸಂಖ್ಯೆಯ ಪ್ರಾದೇಶಿಕ ಆಯಾಮ

೨೦೧೧ರ ಜನಗಣತಿ ಪ್ರಕಾರ ರಾಜ್ಯದಲ್ಲಿ ಒಟ್ಟು ದಲಿತರ (ಪ.ಜಾ. ೧೦೪.೭೪ ಲಕ್ಷ + ಪ.ಪಂ. ೪೨.೪೭ ಲಕ್ಷ) ಜನಸಂಖ್ಯೆ ೧೪೭. ೨೧ ಲಕ್ಷ. ಒಟ್ಟು ಜನಸಂಖ್ಯೆಯ ಮತ್ತು ಪರಿಶಿಷ್ಟರ ಜನಸಂಖ್ಯೆಯ ಪ್ರಾದೇಶಿಕ ವಿವರಗಳನ್ನು ಕೋಷ್ಟಕ ೪.೨ರಲ್ಲಿ ನೀಡಲಾಗಿದೆ. ದಕ್ಷಿಣ ಕರ್ನಾಟಕ ಮತ್ತು ಉತ್ತರ ಕರ್ನಾಟಕ ಪ್ರದೇಶಗಳ ನಡುವೆ ಒಟ್ಟು ಜನಸಂಖ್ಯೆಯ ಹಂಚಿಕೆಗೆ ಅನುಗುಣವಾಗಿ ದಲಿತರ ಜನಸಂಖ್ಯೆಯ ಹಂಚಿಕೆಗೆ ಪ್ರಾದೇಶಿಕವಾಗಿ ನಡೆದಿಲ್ಲ. ಒಟ್ಟು ಜನಸಂಖ್ಯೆಯಲ್ಲಿ ದಕ್ಷಿಣ ಕರ್ನಾಟಕ ಪ್ರದೇಶದ(ದ.ಕ.ಪ್ರ) ಪಾಲು ಶೇ. ೫೭.೪೩ರಷ್ಟಿದ್ದರೆ, ಉತ್ತರ ಕರ್ನಾಟಕ ಪ್ರದೇಶದ(ಉ.ಕ.ಪ್ರ) ಪಾಲು ಶೇ. ೪೨.೫೭. ಆದರೆ ದಲಿತರ ಜನಸಂಖ್ಯೆಯಲ್ಲಿ ದ.ಕ.ಪ್ರದ ಪಾಲು ಶೇ. ೫೪.೪೦ರಷ್ಟಿದ್ದರೆ ಉ.ಕ.ಪ್ರದ ಪಾಲು ಶೇ. ೪೫.೬೦ರಷ್ಟಿದೆ. ದಲಿತರ ಪ್ರಮಾಣ ಉ.ಕ.ಪ್ರ.ದಲ್ಲಿ ಸಾಪೇಕ್ಷವಾಗಿ ಅವರು ಒಟ್ಟು ಜನಸಂಖ್ಯೆಯಲ್ಲಿ ಪಡೆದಿರುವ ಪಾಲಿಗಿಂತ ಅಧಿಕವಾಗಿದೆ. ಕಲಬುರಗಿ ವಿಭಾಗದಲ್ಲಿನ ಒಟ್ಟು ಜನಸಂಖ್ಯೆಯಲ್ಲಿ(೧೧೨,೧೫ ಲಕ್ಷ) ಪರಿಶಿಷ್ಟರ ಪ್ರಮಾಣ ಶೇ. ೩೫.೦೩ರಷ್ಟಿದೆ. ಬೆಂಗಳೂರು ವಿಭಾಗದಲ್ಲಿ ಅದು ಶೇ. ೨೩.೫೫ರಷ್ಟಿದ್ದರೆ ಮೈಸೂರು ವಿಭಾಗದಲ್ಲಿ ಅವರ ಪ್ರಮಾಣ ಶೇ.

೨೧.೫೨. ಬೆಳಗಾವಿ ವಿಭಾಗದಲ್ಲಿ ಅವರ ಪ್ರಮಾಣ ಶೇ. ೧೮.೧೮. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ ಶೇ. ೨೪.೧೦. ಅಂದರೆ ಕಲಬುರಗಿ ವಿಭಾಗದಲ್ಲಿ ಪರಿಶಿಷ್ಟರ ಜನಸಂಖ್ಯೆಯ ಹೆಚ್ಚಿರುವುದು ಇಲ್ಲಿ ಸ್ಪಷ್ಟವಾಗಿದೆ.

ಕಲಬುರ್ಗಿ ವಿಭಾಗವು ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. ೧೮.೩೬ ಪಾಲು ಪಡೆದಿದ್ದರೆ ದಲಿತರಿಗೆ ಸಂಬಂಧಿಸಿದಂತೆ ಅದರ ಪಾಲು ಶೇ. ೨೬.೬೯ರಷ್ಟಿದೆ. ಬೆಂಗಳೂರು, ಮೈಸೂರು ಮತ್ತು ಬೆಳಗಾವಿ ಮೂರು ವಿಭಾಗಗಳು ರಾಜ್ಯದ ಜನಸಂಖ್ಯೆಯಲ್ಲಿ ಎಷ್ಟು ಪಾಲು ಪಡೆದಿದ್ದಾವೋ (ಶೇ. ೮೧.೬೪) ಅದಕ್ಕಿಂತ ಕಡಿಮೆ ಪಾಲನ್ನು ರಾಜ್ಯದ ಪರಿಶಿಷ್ಟರ ಜನಸಂಖ್ಯೆಯಲ್ಲಿ ಪಡೆದಿವೆ(ಶೇ. ೭೩.೩೧). ಕಲಬುರಗಿ ವಿಭಾಗದಲ್ಲಿ ಮಾತ್ರ ಅದು ರಾಜ್ಯದ ಜನಸಂಖ್ಯೆಯಲ್ಲಿ ಎಷ್ಟು ಪಾಲು ಪಡೆದಿದೆಯೋ (ಶೇ. ೧೮.೩೬) ಅದಕ್ಕಿಂತ ಅಧಿಕ ಪಾಲನ್ನು ರಾಜ್ಯದ ಪರಿಶಿಷ್ಟರ ಜನಸಂಖ್ಯೆಯಲ್ಲಿ (ಶೇ. ೨೬.೬೯) ಪಡೆದಿದೆ. ಇದರ ಅನುಷ್ಠಾನ ಏನು?

**ಕೋಷ್ಟಕ ೪.೨. ಒಟ್ಟು ಜನಸಂಖ್ಯೆಯ ಮತ್ತು ದಲಿತ ಜನಸಂಖ್ಯೆಯ ವಿಭಾಗವಾರು ವಿತರಣೆ ಮತ್ತು ವಿಭಾಗವಾರು ಪ್ರಮಾಣ ೨೦೧೧**

| ಕ್ರ ಸಂ. | ವಿಭಾಗಗಳು | ದಲಿತರ ಜನಸಂಖ್ಯೆ (ಲಕ್ಷಗಳಲ್ಲಿ)2011 | | | | ಒಟ್ಟು ಜನಸಂಖ್ಯೆ | |
|---|---|---|---|---|---|---|---|
| | | ಪ.ಜಾ. | ಪ.ಪಂ. | ಒಟ್ಟು ದಲಿತರು | ಶೇಕಡ ಪ್ರಮಾಣ | ಒಟ್ಟು ಜನಸಂಖ್ಯೆ (ಲಕ್ಷಗಳಲ್ಲಿ) | ಶೇಕಡ ಪ್ರಮಾಣ |
| ೧ | ಬೆಂಗಳೂರು ವಿಭಾಗ | ೩೯.೯೨ | ೧೩.೧ | ೫೩.೦೪ | ೩೬ | ೨೨೫.೨೨ | ೩೮.೯ |
| ೨ | ಮೈಸೂರು ವಿಭಾಗ | ೧೯.೫೭ | ೭.೪೭ | ೨೭.೦೪ | ೧೮.೪ | ೧೨೫.೬೪ | ೨೦.೬ |
| ೩ | ದಕ್ಷಿಣ ಕರ್ನಾಟಕ ಪ್ರದೇಶ(ದ.ಕ.ಪ್ರ) | ೫೯.೪೯ | ೨೦.೬ | ೮೦.೦೮ | ೫೪.೪ | ೩೫೦.೮೬ | ೫೭.೪ |
| ೪ | ಬೆಳಗಾವಿ ವಿಭಾಗ | ೨೦.೨೬ | ೭.೫೮ | ೨೭.೮೪ | ೧೮.೯ | ೧೪೭.೯೪ | ೨೪.೨ |
| ೫ | ಕಲಬುರಗಿ ವಿಭಾಗ | ೨೪.೯೯ | ೧೪.೩ | ೩೯.೨೯ | ೨೬.೭ | ೧೧೨.೧೫ | ೧೮.೪ |
| ೬ | ಉತ್ತರ ಕರ್ನಾಟಕ ಪ್ರದೇಶ(ಉ.ಕ.ಪ್ರ) | ೪೫.೨೫ | ೨೧.೯ | ೬೭.೧೩ | ೪೫.೬ | ೨೬೦.೦೯ | ೪೨.೬ |
| ೭ | ಕರ್ನಾಟಕ ರಾಜ್ಯ | ೧೦೪.೭ | ೪೨.೫ | ೧೪೭.೨ | ೧೦೦ | ೬೧೦.೯೫ | ೧೦೦ |

**ಮೂಲ:** ಸೆನ್ಸಸ್ ಆಫ್ ಇಂಡಿಯಾ ೨೦೧೧. ಪ್ರೈಮರಿ ಸೆನ್ಸಸ್ ಆಬ್‌ಸ್ಟ್ರಾಕ್ಟ್, ಸಿರೀಸ್ ೩೦. ಕರ್ನಾಟಕ. ಡೈರೆಕ್ಟೊರೇಟ್ ಆಫ್ ಸೆನ್ಸಸ್ ಆಪರೇಶನ್, ಬೆಂಗಳೂರು.

## ಕೋಷ್ಟಕ ೪.೩. ಜಿಲ್ಲಾವಾರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಾಕ್ಷರತಾ ಪ್ರಮಾಣ: ಕರ್ನಾಟಕ ೨೦೧೧

| ಜಿಲ್ಲೆಗಳು | ಪರಿಶಿಷ್ಟ ಜಾತಿ ಸಾಕ್ಷರತಾ ಪ್ರಮಾಣ | | | ಪರಿಶಿಷ್ಟ ಪಂಗಡ ಸಾಕ್ಷರತಾ ಪ್ರಮಾಣ | | | ಒಟ್ಟು ಕರ್ನಾಟಕದ ಸಾಕ್ಷರತಾ ಪ್ರಮಾಣ | | |
|---|---|---|---|---|---|---|---|---|---|
| | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು |
| ಬೆಳಗಾವಿ | ೬೭.೮ | ೭೮.೩೫ | ೫೭.೨೫ | ೫೯.೫ | ೭೦.೮೨ | ೪೮.೨೮ | ೭೩.೫ | ೮೨.೨ | ೬೪.೫೮ |
| ಬಾಗಲಕೋಟೆ | ೫೮.೯ | ೭೦.೭೬ | ೪೭.೪೪ | ೫೮.೪ | ೬೯.೮೫ | ೪೭.೧೯ | ೬೮.೮ | ೭೯.೨೩ | ೫೮.೪ |
| ವಿಜಯಪುರ | ೫೯.೬ | ೭೧.೮೨ | ೪೬.೯ | ೬೨.೩ | ೭೩.೧೧ | ೫೧.೧೪ | ೬೭.೨ | ೭೭.೨೧ | ೫೬.೭೨ |
| ಬೀದರ್ | ೬೩.೪ | ೭೨.೪೭ | ೫೩.೮೯ | ೬೧.೫ | ೭೦.೮೮ | ೫೧.೯೩ | ೭೦.೫ | ೭೯.೦೯ | ೬೧.೫೫ |
| ರಾಯಚೂರು | ೫೩.೪ | ೬೫.೧೧ | ೪೧.೯೧ | ೪೪.೪ | ೫೫.೭೯ | ೩೩.೩೨ | ೫೯.೬ | ೭೦.೪೭ | ೪೮.೭೩ |
| ಕೊಪ್ಪಳ | ೫೯.೮ | ೭೦.೬೪ | ೪೮.೯೫ | ೬೧ | ೭೨.೦೮ | ೪೯.೬೮ | ೬೮.೧ | ೭೮.೫೪ | ೫೭.೫೫ |
| ಗದಗ | ೬೨.೯ | ೭೩.೮೮ | ೫೧.೮೨ | ೬೯.೪ | ೭೯.೯೫ | ೫೮.೬೭ | ೭೫.೧ | ೮೪.೬೬ | ೬೫.೪೪ |
| ಧಾರವಾಡ | ೭೩.೫ | ೮೧.೭೩ | ೬೫.೧೮ | ೬೮.೩ | ೭೬.೯೧ | ೫೯.೫೪ | ೮೦ | ೮೬.೩೭ | ೭೩.೪೬ |
| ಉತ್ತರ ಕನ್ನಡ | ೭೭.೧ | ೮೪.೧ | ೭೦.೧೮ | ೭೧.೯ | ೭೮.೯೩ | ೬೪.೮೨ | ೮೪.೧ | ೮೯.೬೩ | ೭೮.೩೯ |
| ಹಾವೇರಿ | ೬೫.೬ | ೭೪.೪ | ೫೬.೩೬ | ೭೧.೨ | ೭೯.೮೬ | ೬೨.೨೧ | ೭೭.೪ | ೮೪ | ೭೦.೪೬ |
| ಬಳ್ಳಾರಿ | ೫೮.೬ | ೬೯.೩೬ | ೪೭.೮೮ | ೫೫.೯ | ೬೬.೨೯ | ೪೫.೫ | ೬೭.೪ | ೭೬.೬೪ | ೫೮.೦೯ |
| ಚಿತ್ರದುರ್ಗ | ೬೬.೨ | ೭೪.೭೬ | ೫೭.೩೯ | ೬೬.೮ | ೭೬.೦೪ | ೫೭.೩೪ | ೭೩.೭ | ೮೧.೩೭ | ೬೫.೮೮ |
| ದಾವಣಗೆರೆ | ೬೩.೭ | ೭೨.೫೫ | ೫೪.೬೩ | ೬೭.೨ | ೭೫.೩೬ | ೫೮.೮೬ | ೭೫.೭ | ೮೨.೪ | ೬೮.೯೧ |
| ಶಿವಮೊಗ್ಗ | ೬೮.೪ | ೭೬.೧೮ | ೬೦.೬೩ | ೭೧.೬ | ೭೮.೨೨ | ೬೬.೯೮ | ೮೦.೫ | ೮೬.೦೭ | ೭೪.೮೪ |
| ಉಡುಪಿ | ೭೮.೬ | ೮೪.೧೮ | ೭೩.೨೧ | ೭೮.೧ | ೮೩.೯೭ | ೭೨.೩೪ | ೮೬.೨ | ೯೧.೪೧ | ೮೧.೫೮ |
| ಚಿಕ್ಕಮಗಳೂರು | ೬೭.೬ | ೭೫.೨೮ | ೬೦.೨ | ೬೯.೭ | ೭೬.೮೬ | ೬೨.೮೯ | ೭೯.೩ | ೮೫.೪೧ | ೭೩.೧೬ |

| ಜಿಲ್ಲೆಗಳು | ಪರಿಶಿಷ್ಟ ಜಾತಿ ಸಾಕ್ಷರತಾ ಪ್ರಮಾಣ | | | ಪರಿಶಿಷ್ಟ ಪಂಗಡ ಸಾಕ್ಷರತಾ ಪ್ರಮಾಣ | | | ಒಟ್ಟು ಕರ್ನಾಟಕದ ಸಾಕ್ಷರತಾ ಪ್ರಮಾಣ | | |
|---|---|---|---|---|---|---|---|---|---|
| | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು |
| ತುಮಕೂರು | ೬೬.೨ | ೭೪.೭೫ | ೫೭.೬೫ | ೭೦ | ೭೮.೨೮ | ೬೧.೬೮ | ೭೫.೧ | ೮೨.೮೧ | ೬೩.೩೮ |
| ಬೆಂಗಳೂರು | ೭೮.೬ | ೮೪.೧೯ | ೭೨.೭೭ | ೮೧.೧ | ೮೫.೮೮ | ೭೫.೯೩ | ೮೭.೭ | ೯೧.೦೧ | ೮೪.೦೧ |
| ಮಂಡ್ಯ | ೬೬.೮ | ೭೪.೭೪ | ೫೮.೯೪ | ೬೫ | ೭೧.೮೯ | ೫೭.೯೮ | ೭೦.೪ | ೭೮.೨೭ | ೬೨.೫೪ |
| ಹಾಸನ | ೬೬.೫ | ೭೪.೫೬ | ೫೮.೭೨ | ೬೯.೬ | ೭೭.೫೭ | ೬೧.೭೪ | ೭೬.೧ | ೮೩.೬೪ | ೬೦.೬ |
| ದಕ್ಷಿಣ ಕನ್ನಡ | ೭೫.೯ | ೮೨.೩೪ | ೭೯.೬೨ | ೮೧.೫ | ೮೭.೪೧ | ೭೫.೬೪ | ೮೮.೬ | ೯೩.೧೩ | ೮೪.೧೩ |
| ಕೊಡಗು | ೭೨.೯ | ೭೯.೮ | ೬೬.೦೨ | ೫೫.೫ | ೬೦.೦೧ | ೫೧.೧ | ೮೨.೬ | ೮೭.೧೯ | ೭೮.೧೪ |
| ಮೈಸೂರು | ೬೬.೬ | ೭೨.೮೪ | ೬೦.೩೨ | ೬೦.೯ | ೬೭.೯೯ | ೫೩.೯೨ | ೭೪.೮ | ೭೮.೪೬ | ೬೭.೦೬ |
| ಚಾಮರಾಜನಗರ | ೬೧.೬ | ೬೭.೩೪ | ೫೫.೮೪ | ೫೫ | ೬೨.೧ | ೪೮.೧೧ | ೬೧.೪ | ೬೭.೯೩ | ೫೪.೯೨ |
| ಕಲಬುರ್ಗಿ | ೫೫ | ೬೫.೫೨ | ೪೪.೧೪ | ೫೬.೪ | ೬೬.೮೨ | ೪೬.೦೧ | ೬೪.೯ | ೭೪.೩೮ | ೫೫.೦೯ |
| ಯಾದಗಿರಿ | ೪೩.೩ | ೫೪.೫೨ | ೩೨.೦೫ | ೪೩.೬ | ೫೪.೫೧ | ೩೨.೬೫ | ೫೧.೮ | ೬೨.೨೫ | ೪೧.೩೮ |
| ಕೋಲಾರ | ೭೦.೬ | ೭೮.೪೬ | ೬೨.೮೬ | ೬೩.೬ | ೭೨.೨೪ | ೫೪.೭೬ | ೭೪.೪ | ೮೧.೮೧ | ೬೬.೮೪ |
| ಚಿಕ್ಕಬಳ್ಳಾಪುರ | ೫೯೭೦ | ೬೮.೧೨ | ೫೧.೧೮ | ೬೧.೪ | ೬೯.೮೭ | ೫೨.೭೧ | ೬೯.೮ | ೭೭.೭೫ | ೬೧.೫೮ |
| ಬೆಂಗಳೂರು (ಗ್ರಾ) | ೬೮.೬ | ೭೬.೭೩ | ೬೦.೪೭ | ೭೧.೮ | ೭೯.೬೭ | ೬೩.೪೮ | ೭೭.೯ | ೮೪.೮೨ | ೭೦.೬೩ |
| ರಾಮನಗರ | ೬೪.೪ | ೭೨.೮೯ | ೫೫.೭೭ | ೫೭.೯ | ೬೪.೫೭ | ೫೦.೯೧ | ೬೯.೨ | ೭೬.೭೬ | ೬೧.೫ |
| ಕರ್ನಾಟಕ | ೬೫.೩ | ೭೪.೦೨ | ೫೬.೫೭ | ೬೨.೧ | ೭೧.೧೪ | ೫೨.೯೮ | ೭೫.೪ | ೮೨.೪೭ | ೬೮.೦೮ |

**ಮೂಲ:** ಸೆನ್ಸಸ್ ಆಫ್ ಇಂಡಿಯಾ ೨೦೧೧. ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್, ಸಿರೀಸ್ ೩೦ ಕರ್ನಾಟಕ. ಡೈರೆಕ್ಟೊರೇಟ್ ಆಫ್ ಸೆನ್ಸಸ್ ಆಪರೇಶನ್ಸ್, ಬೆಂಗಳೂರು.

**ಟಿಪ್ಪಣಿ:** ಪ.ಜಾ ಮತ್ತು ಪ.ಪಂ. ಸಾಕ್ಷರತಾ ಪ್ರಮಾಣವನ್ನು ಪ್ರಸ್ತುತ ಅಧ್ಯಯನಕ್ಕಾಗಿ ಗಣನೆ ಮಾಡಲಾಗಿದೆ.

**ಕೋಷ್ಟಕ ೪.೪. ವಿಭಾಗವಾರು ದಲಿತ ಮತ್ತು ದಲಿತೇತರರು**

**ಒಟ್ಟು ಸಾಕ್ಷರತೆಯ ಆಯಾಮಗಳು ೨೦೧೧**

| ಕ್ರ.ಸಂ. | ರಾಜ್ಯ, ಪ್ರದೇಶ ಮತ್ತು ವಿಭಾಗಗಳು | ಒಟ್ಟು ಸಾಕ್ಷರತಾ ಪ್ರಮಾಣ ೨೦೧೧ (ಶೇಕಡ) | | |
|---|---|---|---|---|
| | | ಒಟ್ಟು ಜನಸಂಖ್ಯೆ | ದಲಿತರ ಜನಸಂಖ್ಯೆ | ದಲಿತೇತರರ ಜನಸಂಖ್ಯೆ |
| ೧ | ಬೆಂಗಳೂರು ವಿಭಾಗ | ೮೦.೩೨ | ೬೯.೫೭ | ೮೩.೬೦ |
| ೨ | ಮೈಸೂರು ವಿಭಾಗ | ೭೬.೮೬ | ೬೬.೬೦ | ೭೯.೬೫ |
| ೩ | ದಕ್ಷಿಣ ಕರ್ನಾಟಕ ಪ್ರದೇಶ | ೭೯.೦೮ | ೬೮.೫೬ | ೮೨.೧೫ |
| ೪ | ಬೆಳಗಾವಿ ವಿಭಾಗ | ೭೪.೩೯ | ೬೪.೭೨ | ೭೬.೫೯ |
| ೫ | ಕಲಬುರ್ಗಿ ವಿಭಾಗ | ೬೪.೪೫ | ೫೬.೯೬ | ೬೮.೧೮ |
| ೬ | ಉತ್ತರ ಕರ್ನಾಟಕ ಪ್ರದೇಶ | ೭೦.೧೫ | ೬೦.೨೮ | ೭೩.೪೦ |
| ೭ | ಕರ್ನಾಟಕ ರಾಜ್ಯ | ೭೫.೩೫ | ೬೪.೪೧ | ೭೮.೫೬ |

**ಮೂಲ:** ಸೆನ್ಸಸ್ ಆಫ್ ಇಂಡಿಯಾ ೨೦೧೧. ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್, ಡೆಟಾ ಹೈಲೈಟ್, ಕರ್ನಾಟಕ. ಸಿರೀಸ್ ೩೦, ಡೈರೆಕ್ಟೊರೇಟ್ ಆಫ್ ಸೆನ್ಸಸ್ ಆಪರೇಶನ್ಸ್, ಕರ್ನಾಟಕ,

**ಟಿಪ್ಪಣಿ:** (೧). ಪ್ರಸ್ತುತ ಅಧ್ಯಯನಕ್ಕಾಗಿ ವಿಶೇಷವಾಗಿ ಪರಿಶಿಷ್ಟರ ವಿಭಾಗವಾರು ಸಾಕ್ಷರತಾ ಪ್ರಮಾಣವನ್ನು ಗಣನೆ ಮಾಡಲಾಗಿದೆ. (೨). ಕೋಷ್ಟಕ ೪.೩ ಮತ್ತು ೪.೪ರಲ್ಲಿ ಜಿಲ್ಲಾವಾರು ಒಟ್ಟು ಜನಸಂಖ್ಯೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಒಟ್ಟು ಸಾಕ್ಷರತಾ ಪ್ರಮಾಣವನ್ನು ನೀಡಲಾಗಿದೆ.

## ೪.೩. ಪ್ರಸ್ತುತ ಪರಿಶಿಷ್ಟರ (ದಲಿತರ) ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ

ಮೊದಲನೆಯದಾಗಿ ಕಲಬುರಗಿ ವಿಭಾಗ ರಾಜ್ಯದಲ್ಲಿ ಅತ್ಯಂತ ಹಿಂದುಳಿದ ಪ್ರದೇಶ. ಡಾ. ಡಿ.ಎಂ. ನಂಜುಂಡಪ್ಪ ಸಮಿತಿ ವರದಿಯಲ್ಲಿ ಪ್ರದೇಶವೊಂದರ ದುಸ್ಥಿತಿಯನ್ನು ಮಾಪನ ಮಾಡಲು ಸಂಯುಕ್ತ ದುಸ್ಥಿತಿ ಸೂಚ್ಯಂಕ ಎಂಬ ಮಾಪನವೊಂದನ್ನು ಬಳಸಿದ್ದಾರೆ. ಅದರ ಪ್ರಕಾರ ರಾಜ್ಯದ ಒಟ್ಟು ದುಸ್ಥಿತಿ ಸೂಚ್ಯಂಕ ೨೦೦೦ದಲ್ಲಿ ೨೦.೨೮. ಕಲಬುರ್ಗಿ ವಿಭಾಗದ ಸಂಯುಕ್ತ ದುಸ್ಥಿತಿ ಸೂಚ್ಯಂಕ ೮.೦೮. ಅಂದರೆ ರಾಜ್ಯದ ಒಟ್ಟು ದುಸ್ಥಿತಿಯಲ್ಲಿ ಕಲಬುರ್ಗಿ ವಿಭಾಗದ ಪಾಲು ಶೇ. ೪೦. ಎರಡನೆಯದಾಗಿ ಇಲ್ಲಿ ದಲಿತರ ಪ್ರಮಾಣ ಸಾಪೇಕ್ಷವಾಗಿ ಅಧಿಕವಾಗಿದೆ.

ರಾಜ್ಯದ ಜನಸಂಖ್ಯೆಯಲ್ಲಿ ಕಲಬುರಗಿ ವಿಭಾಗದ ಪಾಲು ಶೇ. ೧೮.೩೬ರಷ್ಟಿದ್ದರೆ ರಾಜ್ಯದ ಪರಿಶಿಷ್ಟರ ಪಾಲು ಶೇ. ೨೬.೯ರಷ್ಟಿದೆ(ನೋಡಿ ಕೋಷ್ಟಕ ೪.೨). ಈ ಕಾರಣದಿಂದ ಕಲಬುರ್ಗಿ ಪ್ರದೇಶದ ದಲಿತರು ಉಳಿದ ವಿಭಾಗಳಲ್ಲಿನ ದಲಿತರಿಗಿಂತ (ಪರಿಶಿಷ್ಟರಿಗಿಂತ) ಸಾಪೇಕ್ಷವಾಗಿ ಹೆಚ್ಚಿನ ಸಂಕಷ್ಟ ಎದುರಿಸುತ್ತಿದ್ದಾರೆ. ದಲಿತರ ವರ್ತಮಾನದ ಸ್ಥಿತಿಗತಿಗಳನ್ನು ತಿಳಿದುಕೊಳ್ಳಬೇಕಾದರೆ ಪ್ರದೇಶವಾರು ಜನಸಂಖ್ಯೆ ಮತ್ತು ಅಕ್ಷರಸ್ಥರ ವಿತರಣೆಯಲ್ಲಿನ ಭಿನ್ನತೆಯನ್ನು ಗುರುತಿಸಿಕೊಳ್ಳಬೇಕು.

ಕೋಷ್ಟಕ ೪.೪ರಲ್ಲಿ ವಿಭಾಗವಾರು ಒಟ್ಟು ಜನಸಂಖ್ಯೆ, ಶಿಷ್ಟ ಜನಸಂಖ್ಯೆ ಮತ್ತು ಪರಿಶಿಷ್ಟ-ಮೂರು ಗುಂಪುಗಳ ಸಾಕ್ಷರತಾ ಪ್ರಮಾಣವನ್ನು ನೀಡಲಾಗಿದೆ. ಅಲ್ಲಿ ತೋರಿಸಿರುವಂತೆ ಪರಿಶಿಷ್ಟರ(ಪ.ಜಾ./ಪ.ಪಂ) ಸಾಕ್ಷರತಾ ಪ್ರಮಾಣ ಕಲಬುರ್ಗಿ ವಿಭಾಗದಲ್ಲಿ ಕನಿಷ್ಠಮಟ್ಟದಲ್ಲಿದೆ(ಶೇ. ೫೬.೯೬). ಬೆಂಗಳೂರು, ಮೈಸೂರು ಮತ್ತು ಬೆಳಗಾವಿ ವಿಭಾಗಗಳಲ್ಲಿ ಪರಿಶಿಷ್ಟರ ಸಾಕ್ಷರತಾ ಪ್ರಮಾಣ ಶೇ. ೬೦ಕ್ಕಿಂತ ಅಧಿಕವಾಗಿದ್ದರೆ ಕಲಬುರಗಿ ವಿಭಾಗದಲ್ಲಿ ಅದು ಶೇ. ೬೦ಕ್ಕಿಂತ ಕಡಿಮೆಯಿದೆ. ರಾಜ್ಯದ ಒಟ್ಟು ದುಡಿಮೆಗಾರರಲ್ಲಿ ಭೂರಹಿತ ದಿನಗೂಲಿ ದುಡಿಮೆಗಾರರ ಪ್ರಮಾಣ ದ.ಕ.ಪ್ರದಲ್ಲಿ ಶೇ. ೧೮.೪೬ರಷ್ಟಿದ್ದರೆ ಉ.ಕ.ಪ್ರ. ದಲ್ಲಿ ಇದು ಶೇ. ೩೫.೯೮ರಷ್ಟಿದೆ. ಕಲಬುರಗಿ ವಿಭಾಗದಲ್ಲಿ ಅವರ ಪ್ರಮಾಣ ಶೇ. ೩೯.೭೩ರಷ್ಟಿದೆ.

ಪರಿಶಿಷ್ಟರ ಮತ್ತು ಶಿಷ್ಟರ ನಡುವಿನ ಅಸಮಾನತೆಯನ್ನು ಮಾಪನ ಮಾಡುವ ವಿಧಾನಕ್ಕೆ ಸಂಬಂಧಿಸಿದಂತೆ ಹೊಸ ಪ್ರಯತ್ನವೊಂದನ್ನು ಮಾಡಲಾಗಿದೆ. ಈ ವಿಧಾನವು ದಲಿತರ ಸ್ಥಿತಿಗತಿಯ ಬಗ್ಗೆ ಹೊಸ ಬೆಳಕನ್ನು ನೀಡಬಲ್ಲುದಾಗಿದೆ. ಸಾಂಪ್ರದಾಯಿಕವಾಗಿ ಅಸಮಾನತೆಯನ್ನು ವರಮಾನಕ್ಕೆ, ಆರ್ಥಿಕ ಕ್ಷೇತ್ರಕ್ಕೆ ಮಾತ್ರ ಸೀಮಿತಗೊಳಿಸಿಕೊಂಡು ಬರುತ್ತಿರುವುದು ಕಂಡುಬರುತ್ತದೆ. ಇದಕ್ಕೆ ಪ್ರತಿಯಾಗಿ ಇಲ್ಲಿ ಅದರ ಎಲ್ಲ ಆಯಾಮಗಳನ್ನು ಹಿಡಿದಿಡಲು ಪ್ರಯತ್ನಿಸಲಾಗಿದೆ. ಅಸಮಾನತೆಯ ಲಿಂಗ ಸಂಬಂಧಿ ಆಯಾಮ, ಸಾಮಾಜಿಕ ಆಯಾಮ, ಪ್ರಾದೇಶಿಕ ನೆಲೆಗಳು, ಆರ್ಥಿಕ ಸಂಗತಿಗಳು ಮುಂತಾದವುಗಳನ್ನು ಇಲ್ಲಿ ಗುರುತಿಸಲಾಗಿದೆ. ಈ ಅಧ್ಯಾಯದಲ್ಲಿ ವಿಶೇಷವಾಗಿ ಸಮಸ್ಯೆಯನ್ನು ದಲಿತೇತರ(ಶಿಷ್ಟ) ಮತ್ತು ದಲಿತ(ಪರಿಶಿಷ್ಟ) ಎಂಬ ವರ್ಗೀಕರಣದ ಮೂಲಕ ಚರ್ಚಿಸಲಾಗಿದೆ. ಕರ್ನಾಟಕಕ್ಕೆ ಸಂಬಂಧಿಸಿದಂತೆ ಇದೊಂದು ವಿಶಿಷ್ಟವಾದ ಪ್ರಯತ್ನವಾಗಿದೆ.

ಪರಿಶಿಷ್ಟರ ಬದುಕಿನ ಸ್ಥಿತಿಗತಿಯನ್ನು ಇಲ್ಲಿ ಅನೇಕ ಆಯಾಮಗಳಲ್ಲಿ ವಿಶ್ಲೇಷಿಸಲಾಗಿದೆ. ಅವುಗಳು ಹೀಗಿವೆ: ೧. ಅಸ್ಪೃಶ್ಯತೆ-ತಾರತಮ್ಯ ೨. ಸಾಮಾಜಿಕ ಗುಂಪುವಾರು ಸಾಕ್ಷರತೆ ಅಂತರಗಳು ೩. ಸಾಮಾಜಿಕ ಗುಂಪುವಾರು ಶಿಕ್ಷಣ. ೪. ಆರೋಗ್ಯ ಭಾಗ್ಯ: ಸಾಮಾಜಿಕ ಗುಂಪುಗಳ ಸ್ಥಿತಿಗತಿ. ೫. ದುಡಿಮೆಗಾರರ ಸ್ವರೂಪ: ಶಿಷ್ಟ-ಪರಿಶಿಷ್ಟ ಆಯಾಮಗಳು ೬. ಭೂಹಿಡುವಳಿಗಳ ರಚನೆ ಮತ್ತು ವಿತರಣೆ ೭. ಲಿಂಗ ಸಂಬಂಧಿ ಆಯಾಮ. ೮. ಬಡತನ ರೇಖೆ: ಸಾಮಾಜಿಕ ಗುಂಪುಗಳು ಮತ್ತು ೯. ಕುಟುಂಬ ಘಟಕವಾರು ತಲಾ ಮಾಸಿಕ ಅನುಭೋಗ ವೆಚ್ಚ: ಸಾಮಾಜಿಕ ಗುಂಪುಗಳು. ಹೀಗೆ ಪ್ರತಿಯೊಂದು ವಿಷಯವನ್ನು ಇಲ್ಲಿ ಅಧಿಕೃತ ಮೂಲಗಳಿಂದ ಅಂಕಿಅಂಶಗಳನ್ನು ಸಂಗ್ರಹಿಸಿಕೊಂಡು ವಿವರವಾಗಿ ಚರ್ಚಿಸಲಾಗಿದೆ.

**೪.೩.೧. ಅಸ್ಪೃಶ್ಯತೆ-ತಾರತಮ್ಯ**

ಅಸ್ಪೃಶ್ಯತೆ-ತಾರತಮ್ಯ ಭಾರತೀಯ ಸಮಾಜಕ್ಕೆ ಅಂಟಿಕೊಂಡ ಕಳಂಕವಾಗಿದೆ(ಇದನ್ನು ಒಪ್ಪದ ಒಂದು ಚಿಂತನಾ ವರ್ಗ ಕರ್ನಾಟಕದಲ್ಲಿ ಇಂದು ಕ್ರಿಯಾಶೀಲವಾಗಿದೆ). ಸಮಾಜದ ಒಂದು ವರ್ಗವನ್ನು (ಶೇ. ೨೪.೧೦) ಮೈಲಿಗೆ, ಅಪವಿತ್ರ, ಅಶುದ್ಧ ಎಂದು ವರ್ಗೀಕರಿಸಿ ಸಾಮಾಜಿಕ

ಚೌಕಟ್ಟಿನಿಂದ ಹೊರಗಿಟ್ಟಿರುವ ಕ್ರಮವನ್ನು ಅಸ್ಪೃಶ್ಯತೆ ಅಥವಾ ಸಾಮಾಜಿಕ ಪ್ರತ್ಯೇಕತೆ ಎಂದು ಕರೆಯಬಹುದು. ಸಮಾಜದ ಅವಿಭಾಜ್ಯ ಅಂಗವಾಗಿರುವ ಒಂದು ಸಮುದಾಯವನ್ನು ಅದರಿಂದ ಪ್ರತ್ಯೇಕವಾಗಿಡುವ ಕ್ರಮವನ್ನು ಅಸ್ಪೃಶ್ಯತೆ ಎಂದು ಕರೆಯಬಹುದಾಗಿದೆ. ಪ್ರಸಿದ್ಧ ಸಮಾಜಶಾಸ್ತ್ರಜ್ಞ ಡಾ.ಜಿ.ಎಸ್.ಘುರೆ ಪ್ರಕಾರ 'ವೃತ್ತಿ ಸಂಬಂಧಿಯಾಗಿರಲಿ ಅಥವಾ ಆಚರಣೆ ಸಂಬಂಧಿಯಾಗಿರಲಿ, ಪರಿಶುದ್ಧತೆ ಅನ್ನುವುದು ಜಾತಿಯ ಹುಟ್ಟಿಗೆ ಕಾರಣವಾಗಿರುವ ಒಂದು ಸಂಗತಿಯಾಗಿದೆ ಅಥವಾ ಅಸ್ಪೃಶ್ಯತೆಯ ಭಾವನೆ ಮತ್ತು ಆಚರಣೆಯ ಮೂಲವಾಗಿದೆ'. ಅದು ನಮ್ಮಲ್ಲಿರುವ ಜಾತಿ ವ್ಯವಸ್ಥೆಯ ಪದ್ಧತಿಯಾಗಿದೆ.

ಅಸ್ಪೃಶ್ಯತೆ ಅನ್ನುವುದು ಭಾವನಾತ್ಮಕ–ವ್ಯಕ್ತಿನಿಷ್ಠ ಸಂಗತಿ ಮಾತ್ರವಲ್ಲ. ಅದಕ್ಕೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನೆಲೆಗಳಿವೆ. ಅಸ್ಪೃಶ್ಯತೆಯ ಆಚರಣೆಯ ಕಾರಣವಾಗಿ ದೇಶದ ಒಟ್ಟು ಜನಸಂಖ್ಯೆಯ ಸರಿಸುಮಾರು ಶೇ. ೨೫ರಷ್ಟಿರುವ ಪರಿಶಿಷ್ಟರ ಉತ್ಪಾದನಾ ಸಾಮರ್ಥ್ಯ ಅಭಿವೃದ್ಧಿಗೆ ಪೂರ್ಣವಾಗಿ ಸಲ್ಲುತ್ತಿಲ್ಲ. ಪರಿಶಿಷ್ಟರಲ್ಲಿ ಅತಿ ಹೆಚ್ಚಿನ ಅನಕ್ಷರತೆಯಿದೆ, ಶಿಕ್ಷಣ ವಂಚಿತರಾದ ಮಕ್ಕಳಿದ್ದಾರೆ, ಅವರಲ್ಲಿ ರಕ್ತಹೀನತೆ ಅತಿಯಾಗಿದೆ. ಪರಿಶಿಷ್ಟರಲ್ಲಿ ದಿನಗೂಲಿ ದುಡಿಮೆಗಾರರ ಪ್ರಮಾಣ ಅತಿಯಾಗಿದೆ. ಈ ಎಲ್ಲ ದುಸ್ಥಿತಿ ಸೂಚಿಗಳ ಪರಿಣಾಮ ದೇಶದ ಅಭಿವೃದ್ಧಿಯ ಮೇಲಾಗುತ್ತಿದೆ. ಅಸ್ಪೃಶ್ಯತೆಯು ಮಾಯವಾಗುತ್ತಿದೆ ಅನ್ನುವ ಅಧಿಕಾರಸ್ಥರ–ಪ್ರತಿಷ್ಠಿತರ ಹೇಳಿಕೆಯಲ್ಲಿ ಯಾವುದೇ ಹುರುಳಿಲ್ಲ. ಕರ್ನಾಟಕದಲ್ಲಿ ೨೦೧೧ರ ಜನಗಣತಿ ಪ್ರಕಾರ ಅನಕ್ಷರಸ್ಥರ ಸಂಖ್ಯೆ ೧೩೨.೮೭ ಲಕ್ಷವಾದರೆ ಅವರಲ್ಲಿ ಪರಿಶಿಷ್ಟರ ಪ್ರಮಾಣ ಶೇ. ೩೪.೩೦ರಷ್ಟಿದೆ. ನಮ್ಮ ರಾಜ್ಯದಲ್ಲಿ ೨೦೧೧ರ ಜನಗಣತಿ ಪ್ರಕಾರ ಒಟ್ಟು ಭೂರಹಿತ ದಿನಗೂಲಿ ದುಡಿಮೆಗಾರರ ಸಂಖ್ಯೆ ೭೧.೫೫ ಲಕ್ಷ. ಇವರಲ್ಲಿ ಪರಿಶಿಷ್ಟರ ಸಂಖ್ಯೆ ೨೯.೭೦ ಲಕ್ಷ. ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ ಶೇ. ೨೪.೧೦ರಷ್ಟಿದ್ದರೆ ಭೂರಹಿತ ದಿನಗೂಲಿ ದುಡಿಮೆಗಾರರಲ್ಲಿ ಅವರ ಪ್ರಮಾಣ ಶೇ. ೪೧.೫೧ರಷ್ಟಿದೆ. ಈ ಎಲ್ಲ ತಾರತಮ್ಯದ ಮೂಲದಲ್ಲಿ ಅಸ್ಪೃಶ್ಯತೆಯ ಪಾತ್ರವಿದೆ.

ಅಸ್ಪೃಶ್ಯತೆಯ ಕಾರಣದಿಂದಾಗಿ ಪ.ಜಾ.ಯಲ್ಲಿ ಬಡತನದ ಪ್ರಮಾಣ ಸಾಪೇಕ್ಷವಾಗಿ ಅಧಿಕವಾಗಿದೆ (ನೋಡಿ: ಕೋಷ್ಟಕ ೪.೧೪). ಅಸ್ಪೃಶ್ಯತೆಯ ಕಾರಣವಾಗಿ ರಾಜ್ಯದ ಒಟ್ಟು ಭೂರಹಿತ ದಿನಗೂಲಿ ದುಡಿಮೆಗಾರರಲ್ಲಿ ಪರಿಶಿಷ್ಟರ ಪ್ರಮಾಣವು ಸಾಪೇಕ್ಷವಾಗಿ ಅಧಿಕವಾಗಿದೆ. ಅಸ್ಪೃಶ್ಯತೆಯ ಕಾರಣದಿಂದಾಗಿ ಅವರ ವಾಸಸ್ಥಾನಗಳು ಗ್ರಾಮೀಣ ಪ್ರದೇಶದಲ್ಲಿ ಊರಿನ ಅಂಚಿನಲ್ಲಿ ಇರುತ್ತವೆ. ನಾವು ಸ್ವೀಕರಿಸಿರುವ–ನಮಗೆ ನಾವೇ ಕೊಟ್ಟುಕೊಂಡಿರುವ ನಮ್ಮ ಸಂವಿಧಾನದಲ್ಲಿ ಅಸ್ಪೃಶ್ಯತೆಯನ್ನು ನಿಷೇಧಿಸಲಾಗಿದೆ (ಸಂವಿಧಾನದ ಆರ್ಟಿಕಲ್ ೧೭. ಅಸ್ಪೃಶ್ಯತೆಯನ್ನು ನಿಷೇಧಿಸಿರುವ ಆರ್ಟಿಕಲ್‌ನಲ್ಲಿ ಎರಡು ಸಂಗತಿಗಳಿವೆ. ಮೊದಲನೆಯದು ಅಸ್ಪೃಶ್ಯತೆಯನ್ನು ನಿಷೇಧಿಸಿರುವ ಮತ್ತು ಅದನ್ನು ಬೇರೆ ಬೇರೆ ರೂಪದಲ್ಲಿ ಆಚರಿಸುವುದುನ್ನು ಪ್ರತಿಬಂಧಿಸಿರುವ ಘೋಷಣೆ ಮತ್ತು ಎರಡನೆಯದಾಗಿ ಅಸ್ಪೃಶ್ಯತೆಯಿಂದ ಯಾವುದೇ ಬಗೆಯ ವಿಕಲತೆ ಉಂಟಾದರೆ ಅದನ್ನು ಶಿಕ್ಷಾರ್ಹ ಅಪರಾಧ ಎಂಬ ಘೋಷಣೆ).

ಆದರೆ ಇಂದಿಗೂ ಈ ಸಂಕೋಲೆಯಿಂದ ಬಿಡುಗಡೆ ಪಡೆಯಲು ಪರಿಶಿಷ್ಟರಿಗೆ ಸಾಧ್ಯವಾಗಿಲ್ಲ. ಅಸ್ಪೃಶ್ಯತೆಯು ಅನೇಕ ರೂಪಗಳಲ್ಲಿ ಇಂದಿಗೂ ಆಚರಣೆಯಲ್ಲಿದೆ.

ನಮ್ಮ ಸಮಾಜದ ಒಟ್ಟು ಉತ್ಪಾದನಾ ಸಾಮರ್ಥ್ಯದಲ್ಲಿ ಪರಿಶಿಷ್ಟರಿಗೆ ಸಂಬಂಧಿಸಿದ ಶೇ. ೨೪.೧೦ರಷ್ಟು ಸಾಮರ್ಥ್ಯ ಅಭಿವೃದ್ಧಿಗೆ ದೊರೆಯುತ್ತಿಲ್ಲ. ಅಸ್ಪೃಶ್ಯತೆಯಿಂದ ದೇಶದ ಅಭಿವೃದ್ಧಿಗೆ ಉಂಟಾಗಿರುವ ಧಕ್ಕೆಯನ್ನು ಅನೇಕ ರೀತಿಯಲ್ಲಿ ಮಾಪನ ಮಾಡಬಹುದು. ಉದಾಹರಣೆಗೆ ೨೦೧೧ರ ಜನಗಣತಿ ಪ್ರಕಾರ ರಾಜ್ಯದಲ್ಲಿ ಒಟ್ಟು ಅಕ್ಷರಸ್ಥರ ಸಂಖ್ಯೆ ೪೦೬.೪೭ ಲಕ್ಷ. ಇವರಲ್ಲಿ ಶಿಷ್ಟರ ಸಂಖ್ಯೆ ೩೨೪.೦೧ ಲಕ್ಷವಾದರೆ, ಪರಿಶಿಷ್ಟರ ಸಂಖ್ಯೆ ೮೨.೪೬ ಲಕ್ಷ. ಒಟ್ಟು ಅಕ್ಷರಸ್ಥರಲ್ಲಿ ಶಿಷ್ಟರ ಪ್ರಮಾಣ ಶೇ. ೭೯.೭೧ರಷ್ಟಿದ್ದರೆ ಪರಿಶಿಷ್ಟರ ಪ್ರಮಾಣ ಶೇ. ೨೦.೨೯. ಒಂದುವೇಳೆ ಪರಿಶಿಷ್ಟ ಅಕ್ಷರಸ್ಥರ ಸಂಖ್ಯೆಯು ಅವರ ಜನಸಂಖ್ಯೆಯ ಪ್ರಮಾಣಕ್ಕೆ ಅನುಗುಣವಾಗಿದ್ದಿದ್ದರೆ ಆಗ ಪರಿಶಿಷ್ಟ ಅಕ್ಷರಸ್ಥರ ಸಂಖ್ಯೆಯು ಈಗಿನ ೮೨.೪೬ ಲಕ್ಷಕ್ಕೆ ಪ್ರತಿಯಾಗಿ ೯೮.೨೫ ಲಕ್ಷವಾಗುತ್ತಿತ್ತು. ಅಸ್ಪೃಶ್ಯತೆಯ ಕಾರಣವಾಗಿ, ಅದಕ್ಕೆ ಸಂಬಂಧಿಸಿದ ತಾರತಮ್ಯದ ಕಾರಣವಾಗಿ, ಸಾಮಾಜಿಕ ಪ್ರತ್ಯೇಕತನದ ಕಾರಣವಾಗಿ ೧೫.೭೯ ಲಕ್ಷ ದಲಿತರು ಅಕ್ಷರ ಸಂಸ್ಕೃತಿಯಿಂದ ವಂಚಿತರಾಗಿದ್ದಾರೆ. ಅನಕ್ಷರಸ್ಥರಲ್ಲಿ ಪರಿಶಿಷ್ಟರ ಪ್ರಮಾಣ ಶೇ. ೩೪.೩೦. ಆದರೆ ನಮಗೆ ತಿಳಿದಿರುವಂತೆ ಜನಸಂಖ್ಯೆಯಲ್ಲಿ ಶಿಷ್ಟರ ಪ್ರಮಾಣ ಶೇ ೭೫.೯೦ ಮತ್ತು ಪರಿಶಿಷ್ಟರ ಪ್ರಮಾಣ ಶೇ. ೨೪.೧೦. ಅಕ್ಷರಸ್ಥರಲ್ಲಿ ಪರಿಶಿಷ್ಟರ ಪ್ರಮಾಣ ಅವರು ಜನಸಂಖ್ಯೆಯಲ್ಲಿ ಎಷ್ಟು ಪಾಲು ಪಡೆದಿದ್ದಾರೋ ಅದಕ್ಕಿಂತ ಕಡಿಮೆ ಇದೆ. ಇದು ಅನಕ್ಷರಸ್ಥರಿಗೆ ಸಂಬಂಧಿಸಿದಂತೆ ತಿರುವುಮುರುವು ಆಗಿದೆ. ಇದರ ಮೂಲದಲ್ಲಿರುವ ಪ್ರಧಾನ ಸಂಗತಿಯೆಂದರೆ ಅನೂಚಾನವಾಗಿ ಮುಂದುವರಿದುಕೊಂಡು ಬರುತ್ತಿರುವ ಅಸ್ಪೃಶ್ಯತೆ. ಅಸ್ಪೃಶ್ಯತೆಯು ಪರಿಶಿಷ್ಟರ ಸ್ವಾತಂತ್ರ್ಯದ ವ್ಯಾಪ್ತಿಯನ್ನು ಸೀಮಿತಗೊಳಿಸುತ್ತದೆ. ಬದುಕನ್ನು ಉತ್ತಮಪಡಿಸಿ ಕೊಳ್ಳಲು ಲಭ್ಯವಿರುವ ಅವಕಾಶಗಳನ್ನು ಧಾರಣೆ ಮಾಡಿಕೊಳ್ಳಲು ಅಗತ್ಯವಾದ ಸಾಮರ್ಥ್ಯವನ್ನು ಇದು ದುರ್ಬಲಗೊಳಿಸುತ್ತದೆ. ಅದು ಜನರ ಮಾನಸಿಕ ಹಿಂಸೆಗೆ ಕಾರಣವಾಗುತ್ತದೆ. ಈ ದೃಷ್ಟಿಯಿಂದ ಅದು ಮಾನವ ಹಕ್ಕಿನ ಉಲ್ಲಂಘನೆಯ ಸಂಗತಿಯಾಗಿದೆ.

### ೪.೩.೨ ಸಾಮಾಜಿಕ ಸಾಕ್ಷರತಾ ಅಂತರ ಮತ್ತು ಸಾಮಾನ್ಯ ಸಾಕ್ಷರತಾ ಅಂತರ

ಸಾಕ್ಷರತೆಗೆ ಸಂಬಂಧಿಸಿದ ಅಸಮಾನತೆಯನ್ನು ಅಳೆಯಲು ಸಾಮಾನ್ಯವಾಗಿ ಒಟ್ಟು ಜನಸಂಖ್ಯೆಯ ಸಾಕ್ಷರತಾ ಪ್ರಮಾಣವನ್ನು ಪ.ಜಾ ಹಾಗೂ ಪ.ಪಂ.ಗಳ ಸಾಕ್ಷರತಾ ಪ್ರಮಾಣಗಳ ನಡುವಿನ ಅಸಮಾನತೆಯನ್ನು ಲೆಕ್ಕ ಹಾಕುವುದು ವಾಡಿಕೆಯಲ್ಲಿದೆ.

**ಕೋಷ್ಟಕ ೪.೫. ಸಾಕ್ಷರತಾ ಪ್ರಮಾಣ (ಸಾಮಾನ್ಯ ಜನಸಂಖ್ಯೆ, ಶಿಷ್ಟರು, ಪರಿಶಿಷ್ಟರು) ಮತ್ತು ಸಾಮಾಜಿಕ ಅಸಮಾನತೆ**

| ವಿವರಗಳು | ೨೦೦೧ | ೨೦೧೧ |
|---|---|---|
| ಶಿಷ್ಟ ಜನಸಂಖ್ಯೆಯ ಸಾಕ್ಷರತಾ ಪ್ರಮಾಣ (ಸಾಮಾನ್ಯ ಜನಸಂಖ್ಯೆಯಲ್ಲಿ ಪ.ಜಾ ಮತ್ತು ಪ.ಪಂ. ಜನಸಂಖ್ಯೆಯನ್ನು ಹೊರತುಪಡಿಸಿ). ಶೇಕಡ ಪ್ರಮಾಣದಲ್ಲಿ | | |
| ಒಟ್ಟು | ೭೧.೪೫ | ೭೮.೭೮ |
| ಪುರುಷರು | ೮೦.೧೮ | ೮೫.೩೩ |
| ಮಹಿಳೆಯರು | ೬೩.೩೯ | ೭೦.೬೩ |
| ಪರಿಶಿಷ್ಟ ಜನಸಂಖ್ಯೆಯ ಸಾಕ್ಷರತಾ ಪ್ರಮಾಣ (ಪ.ಜಾ ಮತ್ತು ಪ.ಪಂ.) | | |
| ಒಟ್ಟು | ೫೧.೫೫ | ೬೪.೩೮ |
| ಪುರುಷರು | ೬೨.೫೮ | ೭೩.೧೮ |
| ಮಹಿಳೆಯರು | ೪೦.೨೩ | ೫೫.೫೩ |
| ಸಾಮಾನ್ಯ ಜನಸಂಖ್ಯೆಯ ಸಾಕ್ಷರತಾ ಪ್ರಮಾಣ(ಪ.ಜಾ ಮತ್ತು ಪ.ಪಂ. ಸೇರಿಸಿಕೊಂಡು) | | |
| ಒಟ್ಟು | ೬೬.೬೪ | ೭೫.೩೬ |
| ಪುರುಷರು | ೭೬.೧ | ೮೨.೪೭ |
| ಮಹಿಳೆಯರು | ೫೬.೮೭ | ೬೮.೦೮ |
| ಸಾಮಾಜಿಕ ಸಾಕ್ಷರತಾ ಅಸಮಾನತೆ(ಶಿಷ್ಟ – ಪರಿಶಿಷ್ಟ) | | |
| ಒಟ್ಟು | ೧೯.೯ | ೧೪.೪ |
| ಪುರುಷರು | ೧೭.೬ | ೧೨.೧೫ |
| ಮಹಿಳೆಯರು | ೨೩.೧೬ | ೧೫.೧ |
| ಸಾಮಾನ್ಯ ಸಾಕ್ಷರತಾ ಅಸಮಾನತೆ | | |
| (ಒಟ್ಟು ಜನಸಂಖ್ಯೆ, ಪ.ಜಾ ಮತ್ತು ಪ.ಪಂ. ಸೇರಿಸಿಕೊಂಡು ಸಾಕ್ಷರತಾ ಪ್ರಮಾಣ) – | | |
| ಒಟ್ಟು | ೧೫.೦೯ | ೧೦.೯೮ |
| ಪುರುಷರು | ೧೩.೫೨ | ೯.೨೯ |
| ಮಹಿಳೆಯರು | ೧೬.೬೪ | ೧೨.೫೫ |

**ಮೂಲ:** ಸೆನ್ಸಸ್ ಆಫ್ ಇಂಡಿಯಾ ೨೦೦೧ ಮತ್ತು ೨೦೧೧. ಪ್ರೈಮರಿ ಸೆನ್ಸಸ್ ಆಬ್‌ಸ್ಟ್ರಾಕ್ಟ್, ಸಿರೀಸ್ ೩೦. ಕರ್ನಾಟಕ. ಡೈರೆಕ್ಟೊರೇಟ್ ಆಫ್ ಸೆನ್ಸಸ್ ಆಪರೇಶನ್, ಬೆಂಗಳೂರು

**ಟಿಪ್ಪಣಿ:** ಶಿಷ್ಟ ಮತ್ತು ಪರಿಶಿಷ್ಟ ಜನಸಂಖ್ಯೆಯ ಸಾಕ್ಷರತಾ ಪ್ರಮಾಣವನ್ನು ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಇದನ್ನು 'ಸಾಮಾನ್ಯ ಸಾಕ್ಷರತಾ ಅಂತರ' ಎಂದು ಕರೆಯಬಹುದು. ಆದರೆ ಈ ಬಗೆಯಲ್ಲಿ ಮಾಪನ ಮಾಡಿದರೆ ಅಲ್ಲಿ ಅಸಮಾನತೆಯ ಪ್ರಮಾಣ ಕೆಳಮಟ್ಟದಲ್ಲಿರುತ್ತದೆ. ಏಕೆಂದರೆ ಒಟ್ಟು ಜನಸಂಖ್ಯೆಯಲ್ಲಿ ಪ.ಜಾ ಮತ್ತು ಪ.ಪಂ. ಜನಸಂಖ್ಯೆಯೂ ಸೇರಿರುವುದರಿಂದ ಅಲ್ಲಿ ಸಾಕ್ಷರತಾ

ಪ್ರಮಾಣ ಕೆಳಮಟ್ಟದಲ್ಲಿರುತ್ತದೆ. ಪರಿಣಾಮವಾಗಿ ಸಾಕ್ಷರತಾ ಅಸಮಾನತೆಯ ಪ್ರಮಾಣವು ಕೆಳಮಟ್ಟದಲ್ಲಿರುತ್ತದೆ. ಅಸ್ಪೃಶ್ಯತೆ ಮತ್ತು ಅನಕ್ಷರತೆ ಸಂಗತಿಗಳು ಅಭಿವೃದ್ಧಿ-ವಿರೋಧಿ ಸಂಗತಿಗಳಾಗಿವೆ. ಅವು ವ್ಯಕ್ತಿಗಳ ಅಥವಾ ಸಮುದಾಯಗಳ ಹಿಂದುಳಿದಿರುವಿಕೆಗೆ ಮಾತ್ರ ಕಾರಣವಲ್ಲ. ಅವು ಸಮಾಜದ ಹಿಂದುಳಿದಿರುವಿಕೆಗೂ ಕಾರಣವಾಗಿವೆ.

ಅಸ್ಪೃಶ್ಯತೆಯು ಜನರ ಧಾರಣ ಸಾಮರ್ಥ್ಯವನ್ನು ಸೀಮಿತಗೊಳಿಸಿಬಿಡುತ್ತದೆ. ಇದರಿಂದಾಗಿ ಅಭಿವೃದ್ಧಿಯ ಮೇಲೆ ತಮ್ಮ ಅಧಿಕಾರವನ್ನು ಪ್ರತಿಷ್ಠಾಪಿಸಲು ಪರಿಶಿಷ್ಟರಿಗೆ ಸಾಧ್ಯವಾಗುತ್ತಿಲ್ಲ.

ಈ ಕಾರಣಕ್ಕೆ ಅದು ಮಾನವ ಹಕ್ಕಿನ ಉಲ್ಲಂಘನೆಯಾಗಿದೆ. ಅದು ಅಂತಹ ಗಂಭೀರ ಸಂಗತಿಯೇನಲ್ಲ ಎಂದು ಅನೇಕರು(ಪ್ರತಿಷ್ಠಿತರು) ಭಾವಿಸಿದ್ದಾರೆ. ಕರ್ನಾಟಕದ ೧.೪೭ ಕೋಟಿಗೂ ಮೀರಿದ ಪರಿಶಿಷ್ಟರ ಬದುಕನ್ನು ಅದು ಮೂರಾಬಟ್ಟೆ ಮಾಡಿದೆ, ಅದು ಅವರ ಬದುಕನ್ನು ದುಸ್ಥಿತಿಗೆ ತಳ್ಳಿದೆ. ಇದನ್ನು ನಿರ್ಲಕ್ಷಿಸುವುದು ಸಲ್ಲ.

ಕೋಷ್ಟಕ ೪.೬ರಲ್ಲಿ ಕರ್ನಾಟಕದಲ್ಲಿನ ಅಕ್ಷರಸ್ಥರ ಹಾಗೂ ಒಟ್ಟು ಜನಸಂಖ್ಯೆಯ ಶಿಷ್ಟ ಮತ್ತು ಪರಿಶಿಷ್ಟ ಆಯಾಮವನ್ನು ತೋರಿಸಲಾಗಿದೆ. ಪ.ಜಾ. ಮತ್ತು ಪ.ಪಂ. ಜನರು ಸಾಕ್ಷರತೆಗೆ ಸಂಬಂಧಸಿದಂತೆ ಯಾವ ಬಗೆಯ ತಾರತಮ್ಯವನ್ನು ಎದುರಿಸುತ್ತಿದ್ದಾರೆ ಅನ್ನುವುದು ಸದರಿ ಕೋಷ್ಟಕದಲ್ಲಿ ಸ್ಪಷ್ಟವಾಗಿದೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶಿಷ್ಟರ ಪಾಲು ಶೇ. ೭೫.೯೦. ಆದರೆ ಅವರು ರಾಜ್ಯದ ಒಟ್ಟು ಅಕ್ಷರಸ್ಥರಲ್ಲಿ ಪಡೆದಿರುವ ಪಾಲು ಶೇ. ೭೯.೭೧. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. ೨೪.೧೦ ಪಾಲು ಪಡೆದಿರುವ ಪರಿಶಿಷ್ಟರು ರಾಜ್ಯದ ಅಕ್ಷರಸ್ಥರಲ್ಲಿ ಕೇವಲ ಶೇ. ೨೦.೨೯ ಪಾಲು ಪಡೆದಿದ್ದಾರೆ. ಇಲ್ಲಿ ತಾರತಮ್ಯದ ಪ್ರಮಾಣ ಶೇ. ೩.೮೧ ಅಂಶಗಳು. ಇದು ಸ್ಪಷ್ಟವಾಗಿ ಅಸ್ಪೃಶ್ಯತೆಯ ಪರಿಣಾಮವಾಗಿದೆ ಮತ್ತು ಇದು ಸಾಮಾಜಿಕ ಅಸಮಾನತೆಯ ಮೂಲವಾಗಿದೆ. ಇದಕ್ಕೆ ಪ್ರತಿಯಾಗಿ ಒಟ್ಟು ಜನಸಂಖ್ಯೆಯಲ್ಲಿ ಪ.ಜಾ ಮತ್ತು ಪ.ಪಂ. ಜನಸಂಖ್ಯೆಯನ್ನು ಕಳೆದು ಉಳಿದ ಜನಸಂಖ್ಯೆಗೆ ಅಂದರೆ ಶಿಷ್ಟ ಜನಸಂಖ್ಯೆಗೆ ಸಾಕ್ಷರತೆಯನ್ನು ಲೆಕ್ಕ ಹಾಕಿದರೆ ಅಲ್ಲಿ ಸಾಕ್ಷರತಾ ಪ್ರಮಾಣ ಸಾಮಾನ್ಯ ಸಾಕ್ಷರತಾ ಪ್ರಮಾಣಕ್ಕಿಂತ ಅಧಿಕವಾಗಿರುತ್ತದೆ.

ಈ ಬಗೆಯ ಸಾಕ್ಷರತಾ ಪ್ರಮಾಣ ಮತ್ತು ಪ.ಜಾ. ಮತ್ತು ಪ.ಪಂ. ಜನಸಂಖ್ಯೆಯ ಸಾಕ್ಷರತಾ ಪ್ರಮಾಣಗಳ ನಡುವೆ ಅಂತರವನ್ನು ಲೆಕ್ಕ ಹಾಕಿದರೆ ಅಲ್ಲಿ ಅಸಮಾನತೆಯು ಸಾಮಾನ್ಯ ಅಸಮಾನತೆಗಿಂತ ಹೆಚ್ಚಿನ ಮಟ್ಟದಲ್ಲಿರುತ್ತದೆ. ಇದನ್ನು 'ಸಾಮಾಜಿಕ ಸಾಕ್ಷರತಾ ಅಂತರ' ಎಂದು ಕರೆಯಬಹುದು. ಸಾಮಾನ್ಯ ಸಾಕ್ಷರತಾ ಅಂತರ(ಶೇ. ೧೦.೯೮ ಅಂಶಗಳು) ಮತ್ತು ಸಾಮಾಜಿಕ ಸಾಕ್ಷರತಾ ಅಂತರಗಳ(ಶೇ. ೧೪.೪೦ ಅಂಶಗಳು) ವಿವರಗಳನ್ನು ಕೊಷ್ಟಕ ೪.೭ರಲ್ಲಿ ತೋರಿಸಿದೆ.

ಅಸ್ಪೃಶ್ಯತೆ ನಿವಾರಣೆಯು ಆರ್ಥಿಕತೆಯ ದೃಷ್ಟಿಯಿಂದ ಮಹತ್ವದ ಸಂಗತಿಯಾಗಿದೆ. ಅದರ ಆಚರಣೆಯಿಂದ ದಲಿತರಿಗೆ ಮಾತ್ರ ಅನ್ಯಾಯವಾಗಿದೆ ಎಂದು ತಿಳಿದರೆ ತಪ್ಪಾಗುತ್ತದೆ. ಅದರಿಂದ ಆರ್ಥಿಕತೆಗೆ ಉಂಟಾಗಿರುವ ಅನ್ಯಾಯದ ಪ್ರಮಾಣ ಅಧಿಕವಾಗಿದೆ. ದಲಿತರ ಬಗ್ಗೆ ಸಮಾಜ

ಅನುಸರಿಸುತ್ತಿರುವ ಸಾಮಾಜಿಕ ಪ್ರತ್ಯೇಕತನದಿಂದ ಇಡೀ ಸಮಾಜಕ್ಕೆ ಅಘಾತಕಾರಿಯಾಗಿದೆ. ಅಂದ ಮೇಲೆ ಅಸ್ಪೃಶ್ಯತೆಯ ನಿವಾರಣೆಯು ಅಭಿವೃದ್ಧಿಯ ಸಂಗತಿಯಾಗಿದೆ. ಸಾಮಾಜಿಕ ಬದಲಾವಣೆಯ ಬಗ್ಗೆ ಪ್ರತಿಷ್ಠಿತರು ಬಹಳ ಮಾತನಾಡುತ್ತಾರೆ. ಆದರೆ ಅಸ್ಪೃಶ್ಯತೆಯಂತಹ ಸಮಸ್ಯೆಯು ಮುಂದುವರಿಯುತ್ತಿರುವುದರ ಬಗ್ಗೆ ಅವರು ಚರ್ಚೆ ಮಾಡುವುದಿಲ್ಲ. ಸಾಮಾಜಿಕ ಸಮಸ್ಯೆಗಳು ಆರ್ಥಿಕ ಅಭಿವೃದ್ಧಿಯು ಉನ್ನತ ಮಟ್ಟಕ್ಕೆ ಏರಿದಂತೆ ಪರಿಹಾರವಾಗಿ ಬಿಡುತ್ತವೆ ಎಂಬುದು ಸರಿಯಲ್ಲ. ಅದಕ್ಕೆ ಪ್ರಜ್ಞಾಪೂರ್ವಕ ಪ್ರಯತ್ನದ ಅಗತ್ಯವಿದೆ.

**ಕೋಷ್ಟಕ ೪.೬. ಕರ್ನಾಟಕದಲ್ಲಿ ಅಕ್ಷರಸ್ಥರ ಶಿಷ್ಟ ಮತ್ತು ಪರಿಶಿಷ್ಟ ಆಯಾಮ ೨೦೧೧**

| ವಿವರಗಳು | ಜನಸಂಖ್ಯೆ (ಶೇಕಡ ಪ್ರಮಾಣ) | | ಅಕ್ಷರಸ್ಥರು (ಶೇಕಡ ಪ್ರಮಾಣ) | |
|---|---|---|---|---|
| | ಶಿಷ್ಟರು (ಒಟ್ಟು ಜನಸಂಖ್ಯೆ – ಪ.ಜಾ + ಪ.ಪಂ = ಶಿಷ್ಟ ಜನಸಂಖ್ಯೆ) | ಪರಿಶಿಷ್ಟರು (ಪ.ಜಾ+ಪ.ಪಂ = ಪರಿಶಿಷ್ಟರು) | ಶಿಷ್ಟರು | ಪರಿಶಿಷ್ಟರು |
| ಒಟ್ಟು | ೭೫.೯ | ೨೪.೧ | ೭೯.೭೧ | ೨೦.೨೯ |
| ಪುರುಷರು | ೭೬.೧೧ | ೨೩.೮೯ | ೭೯.೧೧ | ೨೦.೮೯ |
| ಮಹಿಳೆಯರು | ೭೫.೬೯ | ೨೪.೩೧ | ೮೦.೪೬ | ೧೯.೫೪ |

ಮೂಲ: ಸೆನ್ಸಸ್ ಆಫ್ ಇಂಡಿಯಾ ೨೦೧೧. ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್, ಸಿರೀಸ್ ೩೦.ಕರ್ನಾಟಕ, ಡೈರೆಕ್ಟೊರೇಟ್ ಆಫ್ ಸೆನ್ಸಸ್ ಆಪರೇಶನ್, ಬೆಂಗಳೂರು. ಟಿಪ್ಪಣಿ: ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಕೋಷ್ಟಕ ೪.೫ರಲ್ಲಿ ತೋರಿಸಿರುವಂತೆ ಅಸ್ಪೃಶ್ಯತೆಯ ಕಾರಣದಿಂದಾಗಿ ಸಾಮಾಜಿಕ ಸಾಕ್ಷರತೆಯ ಅಂತರದ ಪ್ರಮಾಣವು(ಶೇ. ೧೪.೪೦ ಅಂಶಗಳು) ಸಾಮಾನ್ಯ ಸಾಕ್ಷರತಾ ಅಂತರಕ್ಕಿಂತ(ಶೇ. ೧೦.೯೮ ಅಂಶಗಳು) ಅಧಿಕವಾಗಿದೆ. ಅಸ್ಪೃಶ್ಯತೆಯನ್ನು ಒಂದು ವಿಕೃತಿ ಎಂದು ಕಡೆಗಣಿಸುವುದು ಸರಿಯಲ್ಲ. ರೂಢಿಯಲ್ಲಿರುವಂತೆ ಸಾಕ್ಷರತೆಯನ್ನು ಅಖಂಡ ನೆಲೆಯಲ್ಲಿ ವಿಶ್ಲೇಷಿಸುವುದು ಕಂಡು ಬರುತ್ತದೆ. ಆದರೆ ಈ ವಿಧಾನದಿಂದ ದಲಿತರ ಸಮಸ್ಯೆಯ ಆಳ ಮತ್ತು ಹರಹುವಿನ ಮಾಪನ ಸಾಧ್ಯವಿಲ್ಲ. ಅದಕ್ಕಾಗಿ ಇಲ್ಲಿ ಸಾಕ್ಷರತೆಯನ್ನು ಸಾಮಾಜಿಕ ಗುಂಪುವಾರು ಲೆಕ್ಕಹಾಕಿ ಚರ್ಚೆಗೆ ಒಳಪಡಿಸಲಾಗಿದೆ.

ಸಾಕ್ಷರತೆ ಮತ್ತು ಶಿಕ್ಷಣಕ್ಕೆ ಸಂಬಂಧಿಸಿದ ಅಸಮಾನತೆಯು ತುಂಬಾ ಮುಖ್ಯವಾಗಿದೆ. ಜೀನ್ ಡ್ರೀಜ್ ಮತ್ತು ಅಮರ್ತ್ಯ ಸೇನ್ ಪ್ರಕಾರ 'ಶೈಕ್ಷಣಿಕ ಅಸಮಾನತೆಯು ಒಂದು ಬಗೆಯಲ್ಲಿ ವರ್ಗ, ವರ್ಣ, ಜಾತಿ ಮತ್ತು ಲಿಂಗ ಸಂಬಂಧಿ ಅಸಮಾನತೆಗಳನ್ನು ಪ್ರತಿಬಿಂಬಿಸುತ್ತದೆ'(೨೦೧೪:೨೧೫). ಅನಕ್ಷರತೆಯನ್ನು ಅವರು 'ಸಾಮಾಜಿಕ ವೈಫಲ್ಯ' ಎಂದು ಕರೆಯುತ್ತಾರೆ. ದಕ್ಷಿಣ ಏಷ್ಯಾದ

ಹಾಂಕ್‌ಕಾಂಗ್, ದಕ್ಷಿಣ ಕೊರಿಯಾ, ಸಿಂಗಾಪುರ, ಥೈವಾನ್ ಮುಂತಾದ ದೇಶಗಳಿಗೆ ೧೯೬೦-೧೯೯೧ರ ಮೂರು ದಶಕಗಳಲ್ಲಿ ಪವಾಡಸದೃಶ ಅಭಿವೃದ್ಧಿ ಸಾಧಿಸಿಕೊಳ್ಳುವುದು ಸಾಧ್ಯವಾಗಿದ್ದು ಅಲ್ಲಿನ ಉನ್ನತ ಸಾಕ್ಷರತೆ ಮತ್ತು ಶಿಕ್ಷಣದ ಕಾಣಿಕೆಯಿಂದ ಎಂಬುದನ್ನು ಅಧ್ಯಯನಗಳು ದಾಖಲಿಸಿವೆ. ಈ ನಾಲ್ಕು ದೇಶಗಳು ೧೯೬೫ರ ಹೊತ್ತಿಗೆ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣವನ್ನು ಸಾಧಿಸಿಕೊಂಡಿದ್ದವು. ಈ ದೇಶಗಳ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ನಿರ್ವಹಿಸಿದ ಮತ್ತೊಂದು ಸಂಗತಿಯೆಂದರೆ ವರಮಾನದ ಸಮಾನ ವಿತರಣೆ(ವಿಕಿಪೀಡಿಯಾ, ಸಂಪರ್ಕ ೨೨.೦೮.೨೦೧೫). ಇನ್ನೂ ಅದರಿಂದ ಪಾಠ ಕಲಿತಂತೆ ಕಾಣುವುದಿಲ್ಲ. ವರಮಾನದ ಏರಿಕೆಯು ಅದರ ವಿತರಣೆಯ ಸಮಸ್ಯೆಯನ್ನು ನಿರ್ವಹಿಸಿಕೊಳ್ಳುತ್ತದೆ ಎಂಬುದು ಇಂದಿನ ಆಳುವ ವರ್ಗದ ನಂಬಿಕೆಯಾಗಿದೆ. ನಾವು 'ವರಮಾನದ ಬೆಳವಣಿಗೆ ಮೊದಲು: ನಂತರ ವಿತರಣೆ' ಅನ್ನುವ ನೀತಿಯನ್ನು ಅನುಸರಿಸುತ್ತಿದ್ದೇವೆ. ಈ ಬಗೆಯ ನೀತಿಯಲ್ಲಿ ಬಡವರ ಬವಣೆಯನ್ನು ತೊಡೆದು ಹಾಕುವುದು ಸಾಧ್ಯವಾಗುವುದಿಲ್ಲ.

ಶಿಕ್ಷಣವನ್ನು ನಾವು ನಮ್ಮ ಅಭಿವೃದ್ಧಿ ಯೋಜನೆಗಳಲ್ಲಿ ಆದ್ಯತೆಯ ಕ್ಷೇತ್ರವನ್ನಾಗಿ ಪರಿಗಣಿಸಬೇಕು. ದಲಿತರ ದೃಷ್ಟಿಯಿಂದ ಇದು ನಿರ್ಣಾಯಕವಾದುದಾಗಿದೆ. ಆದರೆ ಇದು ಸಾಧ್ಯವಾಗುತ್ತಿಲ್ಲ. ಅಕ್ಷರ ಸಂಸ್ಕೃತಿಯು ಸಾಮಾಜಿಕ ವಿಮೋಚನೆಗೆ ದಾರಿ ಮಾಡಿಕೊಡುವ ಒಂದು ಸಂಗತಿಯಾಗಿದೆ. ಅದರ ಆರ್ಥಿಕ ಆಯಾಮಕ್ಕೆ ನೀಡಿದಷ್ಟು ಮಹತ್ವವನ್ನು ನಾವು ಸಾಮಾಜಿಕ ಆಯಾಮಕ್ಕೆ ನೀಡುತ್ತಿಲ್ಲ. ಈ ಕಾರಣವಾಗಿ ಸಾಕ್ಷರತೆಯಲ್ಲಿನ ಸಾಮಾಜಿಕ ಅಸಮಾನತೆಯು ಇಂದಿಗೂ ಮುಂದುವರಿದಿದೆ. ಸಾಕ್ಷರತೆಯ ಪ್ರಾದೇಶಿಕ ಆಯಾಮವನ್ನು ಮತ್ತು ಅದರ ದಲಿತ ಮತ್ತು ದಲಿತೇತರರ ನೆಲೆಗಳನ್ನು ಪ್ರದೇಶವಾರು ಕೋಷ್ಟಕ ೪.೪ರಲ್ಲಿ ನೀಡಲಾಗಿದೆ. ದಲಿತರ ನೆಲೆಯಿಂದಲೂ ಪ್ರಾದೇಶಿಕ ಅಸಮಾನತೆಯ ಲಕ್ಷಣಗಳನ್ನು ಇಲ್ಲಿ ಗುರುತಿಸಬಹುದಾಗಿದೆ.

**೪.೩.೩. ಶಿಕ್ಷಣದ ಸ್ವರೂಪ**

In my view the imposing tower of misery which today rests on the heart of India has its sole foundation in the absence of education.

Rabindranath Tagore (Quoted in Dreze and Sen, 2013. p.107).

ಲಿಖಿತ ಅಕ್ಷರದ ಮಹತ್ವವವನ್ನು ಅರಿತಿದ್ದ ಡಾ. ಬಿ.ಆರ್. ಅಂಬೇಡ್ಕರ್ ಅವರು ತಮ್ಮ ಜೀವನದುದ್ದಕ್ಕೂ ಪ್ರತಿಯೊಂದನ್ನೂ ಲಿಖಿತ ರೂಪದಲ್ಲಿ ಮಂಡಿಸುತ್ತಿದ್ದರು. ಸರ್ಕಾರಕ್ಕೆ ಮನವಿ ಸಲ್ಲಿಸುವುದಾಗಲಿ, ಬೇಡಿಕೆಗಳನ್ನು ನೀಡುವುದಾಗಲಿ, ವಿಶೇಷ ಉಪನ್ಯಾಸ ಕೊಡುವುದಾಗಲಿ, ಎಲ್ಲಕ್ಕೂ ಲಿಖಿತ ರೂಪ ನೀಡುತ್ತಿದ್ದರು. ಮೌಖಿಕ ಸಂಪ್ರದಾಯಕ್ಕೆ ಹೆಸರಾಗಿದ್ದ ದಲಿತರ ಸಂದರ್ಭದಲ್ಲಿ ಡಾ. ಬಿ.ಆರ್.ಅಂಬೇಡ್ಕರ್ ಅವರು ಲಿಖಿತ ದಾಖಲೆಯ ಮಹತ್ವವನ್ನು ಸಮುದಾಯಕ್ಕೆ ತೋರಿಸಿಕೊಡಬೇಕಾಗಿತ್ತು. ಅಕ್ಷರವು ಪ್ರತಿಷ್ಠಿತರ ಗುತ್ತಿಗೆಯಾಗಿದ್ದ ಹಿನ್ನೆಲೆಯಲ್ಲಿ ಅವರು ಅಕ್ಷರದ ಮಹತ್ವವನ್ನು ತೋರಿಸಿಕೊಟ್ಟರು(ವಲೇರಿಯನ್ ರೋಡ್ರಿಗಸ್, ೨೦೦೧. ದಿ **ಎಸ್ಸೆನ್ಸಿಯಲ್ ರೈಟಿಗ್ಸ್**

**ಆಫ್ ಬಿ.ಆರ್. ಅಂಬೇಡ್ಕರ್**. ಇಂಟ್ರೊಡಕ್ಷನ್. ಪು ೨. ಆಕ್ಸಫರ್ಡ್ ಯೂನಿವರ್ಸಿಟಿ ಪ್ರೆಸ್. ನವದೆಹಲಿ). ದಲಿತರ ಸಮಸ್ಯೆಯನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಚರ್ಚೆಗೆ ಒಳಪಡಿಸುವುದು ಇದರಿಂದ ಅವರಿಗೆ ಸಾಧ್ಯವಾಯಿತು. ಇಂದಿಗೂ ಲಿಖಿತ ಅಕ್ಷರವು ದಲಿತರಿಗೆ ಸವಾಲಾಗಿದೆ.

ಜೀನ್ ಡ್ರೀಜ್ ಮತ್ತು ಅಮರ್ತ್ಯ ಸೇನ್ ತಮ್ಮ ಭಾರತದ ಅಭಿವೃದ್ಧಿಯನ್ನು ಕುರಿತ ಇತ್ತೀಚಿಗಿನ ಪುಸ್ತಕದಲ್ಲಿ(೨೦೧೩. ೧೦೯) ಅಭಿವೃದ್ಧಿಯಲ್ಲಿ ಶಿಕ್ಷಣದ ಪಾತ್ರವನ್ನು ಕುರಿತು ಚರ್ಚಿಸುವಾಗ ಒಂಬತ್ತು ಸಂಗತಿಗಳನ್ನು ಪಟ್ಟಿ ಮಾಡಿದ್ದಾರೆ. ಅದರಲ್ಲಿ ಬಹು ಮುಖ್ಯವಾದುದನ್ನು ಹೀಗೆ ಗುರುತಿಸಬಹುದಾಗಿದೆ.

- ವರ್ಗ ಸಂಬಂಧಿ ಸಮಸ್ಯೆಗಳನ್ನು ನಿವಾರಿಸಲು ಪರಿಣಾಮಕಾರಿ ಅಸ್ತ್ರವೆಂದರೆ ಶಿಕ್ಷಣ
- ವರ್ಗ ಮತ್ತು ಜಾತಿ ಸಂಬಂಧಿ(ಶಿಷ್ಟ-ಪರಿಶಿಷ್ಟ) ಅಸಮಾನತೆಗಳ ನಿವಾರಣೆಯಲ್ಲಿ ಶಿಕ್ಷಣದ ಕೊಡುಗೆ ನಿರ್ಣಾಯಕವಾದುದಾಗಿದೆ.
- ನಮ್ಮ ದೇಶದ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗೆ ಅಡ್ಡಿಯಾಗಿರುವ ದೊಡ್ಡ ಕಂಟಕವೆಂದರೆ ಸಾಮಾಜಿಕ ಪ್ರತ್ಯೇಕತೆ ಮತ್ತು ಶ್ರೇಣೀಕರಣ.
- ಈ ವಿಕಲತೆಯನ್ನು ತೊಡೆಯಲು ಇರುವ ಸಾಧನ ಶಿಕ್ಷಣದ ಪ್ರಸಾರ.

ಪರಿಶಿಷ್ಟರ ದೃಷ್ಟಿಯಿಂದ ಶಿಕ್ಷಣ ಮುಖ್ಯ. ಏಕೆಂದರೆ ಅದು ಪರಿಶಿಷ್ಟರಿಗೆ ಶೋಷಣೆ, ದೌರ್ಜನ್ಯ ಮತ್ತು ತಾರತಮ್ಯಗಳ ವಿರುದ್ಧ ಪ್ರತಿಭಟಿಸುವ ಶಕ್ತಿಯನ್ನು ಮತ್ತು ಅಸ್ತ್ರವನ್ನು ನೀಡುತ್ತದೆ. ರಾಜಕೀಯವಾಗಿ ದಲಿತರು ಸಂಘಟಿತರಾಗುವುದು ಅದರಿಂದ ಸಾಧ್ಯವಾಗುತ್ತದೆ(ಎಜುಕೇಟ್, ಆರ್ಗನೈಸ್, ಏಜಿಟೇಟ್: ಡಾ. ಬಿ.ಆರ್. ಅಂಬೇಡ್ಕರ್). ಸಾಕ್ಷರತೆ ಮತ್ತು ಶಿಕ್ಷಣವು ಅದನ್ನು ಪಡೆದುಕೊಂಡವರಲ್ಲಿ ಮಾತ್ರ ಬದಲಾವಣೆ ತರುವುದಿಲ್ಲ. ಅದು ಸಮಾಜದಲ್ಲಿ ಒಂದು ಬಗೆಯ ಶೈಕ್ಷಣಿಕ ವಾತಾವರಣವನ್ನು ಹುಟ್ಟುಹಾಕುವುದರ ಮೂಲಕ ಸಮಾಜದಲ್ಲಿ ಬದಲಾವಣೆಯನ್ನು ತರಬಲ್ಲದು. ಸಾಮಾಜಿಕ ಪ್ರೇರಕ ಶಕ್ತಿಯಾಗಿ ಅದು ಕೆಲಸ ಮಾಡಬಲ್ಲದು.

ಜನರಿಗೆ ಶಿಕ್ಷಣ ಏಕೆ ಬೇಕು? ಅವರ ಉತ್ಪಾದನಾ ಕ್ಷಮತೆಯನ್ನು ಉತ್ತಮಪಡಿಸುವುದಕ್ಕೆ ಶಿಕ್ಷಣ ಬೇಕೆ? ಮಹಿಳೆಯೊಬ್ಬಳು ಒಳ್ಳೆಯ ತಾಯಿಯಾಗಲು ಅವಳಿಗೆ ಶಿಕ್ಷಣ ಬೇಕೆ? ರೈತನೊಬ್ಬ ಆಧುನಿಕ ಕೃಷಿ ಪದ್ಧತಿಯನ್ನು ಅಳವಡಿಸಿಕೊಳ್ಳುವುದಕ್ಕೆ ಅವನಿಗೆ ಶಿಕ್ಷಣ ಬೇಕೆ? ಇವರೆಲ್ಲರಿಗೂ ಶಿಕ್ಷಣ ಬೇಕು. ಇದು ಶಿಕ್ಷಣದ ಒಂದು ಆಯಾಮವಾಗಿದೆ. ಇದನ್ನು ಅಮರ್ತ್ಯ ಸೇನ್ 'ಇನ್‌ಸ್ಟ್ರುಮೆಂಟಲ್ ಆಯಾಮ' ಎಂದು ಕರೆದಿದ್ದಾರೆ. ಶಿಕ್ಷಣವನ್ನು ಅಭಿವೃದ್ಧಿಯ ಒಂದು ಸಾಧನವಾಗಿ ನೋಡುವ ಕ್ರಮ ಇದಾಗಿದೆ. ಎರಡನೆಯದಾಗಿ ಜನರಿಗೆ ಶಿಕ್ಷಣ ಯಾಕೆ ಬೇಕು ಅಂದರೆ ಅವರು ಮನುಷ್ಯರಾಗಿರುವುದಕ್ಕೆ ಬೇಕು. ಮನುಷ್ಯರಿಗೆ ತಮ್ಮ ಬದುಕನ್ನು ಅರ್ಥ ಮಾಡಿಕೊಳ್ಳಲು, ತಮ್ಮ ಬದುಕನ್ನು ಕಟ್ಟಿಕೊಳ್ಳಲು, ಬಡತನ ಅನ್ನುವುದು ಸಾಮಾಜಿಕ-ಆರ್ಥಿಕ ಅಸಮಾನತೆಯ ಫಲ

ಅನ್ನುವುದನ್ನು ಅರ್ಥ ಮಾಡಿಕೊಳ್ಳಲು ಜನರಿಗೆ ಶಿಕ್ಷಣ ಬೇಕು. ಅವರ ಭವಿಷ್ಯ ಶಿಕ್ಷಣದ ಮೇಲೆ ನಿಂತಿದೆ. ಇದನ್ನು ಸೇನ್ 'ಇನ್‌ಟ್ರಿನ್‌ಸಿಕ್ ಆಯಾಮ' ಎಂದು ಕರೆದಿದ್ದಾರೆ. ಇದು ಆಂತರಿಕವಾಗಿ ಜನರ ಆತ್ಮಸ್ಥೈರ್ಯವನ್ನು ಉದ್ದೀಪನಗೊಳಿಸುವ, ಜನರಿಗೆ ಒಂದು ಬಗೆಯ ಗೌರವವನ್ನು ದೊರಕಿಸಿಕೊಡುವ ಸಂಗತಿಯಾಗಿದೆ. ಹೀಗೆ ಶಿಕ್ಷಣದ ಎರಡೂ ಪಾತ್ರವನ್ನು ಸಮಾನವಾಗಿ ಕಾಣುವ ಅಗತ್ಯವಿದೆ. ದಲಿತರು ಯಾವ ಬಗೆಯ ಶಿಕ್ಷಣ ಪಡೆಯುತ್ತಿದ್ದಾರೆ? ಅವರಲ್ಲಿ ಎಷ್ಟು ಮಕ್ಕಳು ಶಾಲೆಯನ್ನು ಮಧ್ಯದಲ್ಲಿ ಬಿಡುತ್ತಾರೆ? ಅವರು ಪಡೆಯುತ್ತಿರುವ ಶಿಕ್ಷಣದ ಗುಣಮಟ್ಟ ಯಾವ ರೀತಿಯದು? ಈ ಸಂಗತಿಗಳ ಕಡೆಗೆ ನಾವು ಗಮನ ನೀಡುವ ಅಗತ್ಯವಿದೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ ಇಂದು ನಾವು ಎದುರಿಸಬೇಕಾದ ಪ್ರಶ್ನೆಯೆಂದರೆ ಶಿಕ್ಷಣದ ಗುಣಮಟ್ಟ, ದಲಿತರ ದೃಷ್ಟಿಯಿಂದಲೂ ಮುಖ್ಯ. ಶಾಲೆಗಳ ಸಂಖ್ಯೆ, ಶಾಲೆಯಲ್ಲಿ ದಲಿತರ ದಾಖಲಾತಿ, ಅವರಿಗೆ ಉಚಿತ ಪಠ್ಯಪುಸ್ತಕ, ಸಮವಸ್ತ್ರ ಮುಂತಾದವುಗಳ ದೃಷ್ಟಿಯಿಂದ ಸಾಕಷ್ಟು ಬೆಳವಣಿಗೆಯಾಗಿದೆ. ಆದರೆ ಈಗ ನಮಗೆ ಅಗತ್ಯವಾಗಿರುವುದು ಗುಣಮಟ್ಟದ ಶಿಕ್ಷಣ.

**ಕೋಷ್ಟಕ ೪.೭. ಕರ್ನಾಟಕದಲ್ಲಿ ಸಾಮಾಜಿಕ ಗುಂಪುವಾರು ಶಾಲಾ ದಾಖಲಾತಿ ೨೦೧೩**

| ಸಾಮಾಜಿಕ ಗುಂಪುಗಳು | ಮಕ್ಕಳ ಶಾಲಾ ದಾಖಲಾತಿ (ಸಂಖ್ಯೆ) | ದಾಖಲಾದ ಮಕ್ಕಳ ಶೇಕಡ ಪ್ರಮಾಣ |
|---|---|---|
| ಪರಿಶಿಷ್ಟ ಜಾತಿ | ೧೮.೫೭ ಲಕ್ಷ | ೧೮.೫೬ |
| ಪರಿಶಿಷ್ಟ ಪಂಗಡ | ೦೭.೭೪ ಲಕ್ಷ | ೦೭.೭೩ |
| ಇತರೆ ಹಿಂದುಳಿದ ವರ್ಗಗಳು | ೫೬.೫೭ ಲಕ್ಷ | ೫೬.೫೩ |
| ಸಾಮಾನ್ಯ | ೧೭.೧೯ ಲಕ್ಷ | ೧೭.೧೮ |
| ಒಟ್ಟು | ೧೦೦.೦೭ ಲಕ್ಷ | ೧೦೦.೦೦ |

ಮೂಲ: ಕರ್ನಾಟಕ ಸರ್ಕಾರ, ೨೦೧೩. **ಕರ್ನಾಟಕ ರಾಜ್ಯದಲ್ಲಿನ ಶಿಕ್ಷಣ ೨೦೧೩-೨೦೧೪. ಶೈಕ್ಷಣಿಕ ವಿಶ್ಲೇಷಣ ವರದಿ.**

ಕೋಷ್ಟಕ ೪.೭ ರಲ್ಲಿನ ಪ.ಜಾ. ಮತ್ತು ಪ.ಪಂ.ಗಳ ಮಾಹಿತಿ ಬಗ್ಗೆ ಒಂದು ವಿವರಣೆಯ ಅಗತ್ಯವಿದೆ. ಪ.ಜಾ. ಮಕ್ಕಳ ದಾಖಲಾತಿಯು (ಶೇ.೧೮.೫೬) ಅವರು ಜನಸಂಖ್ಯೆಯಲ್ಲಿ ಪಡೆದಿರುವ ಪ್ರಮಾಣಕ್ಕಿಂತ(ಶೇ.೧೭.೧೪) ಅಧಿಕವಾಗಿದೆ. ಇದೇ ಸ್ಥಿತಿ ಪ.ಪಂ.ದಲ್ಲಿಯೂ ಕಂಡು ಬರುತ್ತದೆ. ಇದಕ್ಕೆ ಒಂದು ಮುಖ್ಯ ಕಾರಣವೆಂದರೆ ಪ.ಜಾ ಮತ್ತು ಪ.ಪಂ. ಗಳಲ್ಲಿ ಸಂಬಂಧಿಸಿದ ವಯೋಮಾನ ಮೀರಿದ ಮಕ್ಕಳು ಶಾಲೆಯಲ್ಲಿ ದಾಖಲಾಗಿರುವ ಸಾಧ್ಯತೆಯಿದೆ. ಇದರ ಜೊತೆಗೆ ಶಾಲೆ ಬಿಟ್ಟ ಮೇಲೆ ಒಂದು ಅಥವಾ ಎರಡು ವರ್ಷ ಅಂತರದ ನಂತರ ಶಾಲೆ ಸೇರಿರುವ ಮಕ್ಕಳು ಪ.ಜಾಯಲ್ಲಿ ಹೆಚ್ಚಿಗಿರಬಹುದು.

ಶಿಕ್ಷಣ ಅನ್ನುವುದು ಕೇವಲ ಶಾಲಾ ಕಟ್ಟಡಗಳನ್ನು ಕಟ್ಟಿಸುವುದು, ಮಧ್ಯಾಹ್ನದ ಬಿಸಿಯೂಟ ನೀಡುವುದು, ಶಿಕ್ಷರನ್ನು ನೇಮಿಸುವುದು, ಉಚಿತ ಪಠ್ಯ ಪುಸ್ತಕಗಳನ್ನು ನೀಡುವುದು ಅಷ್ಟೇ ಅಲ್ಲ. ಪರಿಶಿಷ್ಟರ ಬಹುಪಾಲು ಮಕ್ಕಳಿಗೆ ಅವರ ಮನೆಗಳಲ್ಲಿ ಶೈಕ್ಷಣಿಕ ವಾತಾವರಣವಿಲ್ಲ. ಶಾಲೆಯಿಂದ ಮನೆಗೆ ಬಂದಾಗ ಶಾಲೆಯ ಬ್ಯಾಗನ್ನು ಸರಿಯಾಗಿಡಲು ಜಾಗ ಇರುವುದಿಲ್ಲ. ಇನ್ನು ಮನೆಯಲ್ಲಿ ಓದುವುದೆಲ್ಲಿ ಬಂತು! ಶಾಲೆಯಲ್ಲಿ ಶಿಕ್ಷಕರು ನೀಡಿದ ಹೊಣೆಗಳನ್ನು ನಿರ್ವಹಿಸುವುದು ಅವರಿಗೆ ಕಷ್ಟಸಾಧ್ಯ. ದಿನಗೂಲಿ ದುಡಿಮೆಗಾರರ ಮನೆಯಲ್ಲಿ ಮಕ್ಕಳಿಗೆ ಯಾವ ಬಗೆಯ ಶೈಕ್ಷಣಿಕ ಮಾರ್ಗದರ್ಶನ ನೀಡಲುಸಾಧ್ಯ ಮಕ್ಕಳ ಓದು-ಬರಹಗಳ ಮೇಲೆ ನಿಗಾ ಇಡುವುದು ಬಡ ಕುಟುಂಬಗಳ ಪಾಲಕರಿಗೆ ಸಾಧ್ಯವಿಲ್ಲ. ಈ ಎಲ್ಲ ಸಂಗತಿಗಳನ್ನು ಗಮನದಲ್ಲಿಟ್ಟುಕೊಂಡು ನಾವು ಪರಿಶಿಷ್ಟರ ಅಭಿವೃದ್ಧಿ ಕಾರ್ಯತಂತ್ರದ ಬಗ್ಗೆ ಚಿಂತಿಸಬೇಕು.

ಈಗಾಗಲೇ ತೋರಿಸಿರುವಂತೆ ಕರ್ನಾಟಕದಲ್ಲಿ ೨೦೧೧ರಲ್ಲಿ ಒಟ್ಟು ಜನಸಂಖ್ಯೆಯಲ್ಲಿ ಒಟ್ಟು ಪರಿಶಿಷ್ಟರ ಪ್ರಮಾಣ ಶೇ. ೨೪.೧೦. ಆದರೆ ಪ್ರಾಥಮಿಕ ಶಿಕ್ಷಣದಲ್ಲಿನ ದಾಖಲಾತಿಯಲ್ಲಿ ಅವರ ಪ್ರಮಾಣ ಶೇ. ೨೬.೨೯ರಷ್ಟಿದೆ. ಇದು ಸ್ವಾಗತಾರ್ಹ ಸಂಗತಿಯೇನೋ ಹೌದು. ಆದರೆ ಅನೇಕ ಅಧ್ಯಯನಗಳು ತೋರಿಸುತ್ತಿರುವಂತೆ ಪರಿಶಿಷ್ಟ ಮಕ್ಕಳು ಶಾಲೆಯಲ್ಲಿ ಉತ್ತಮವಾಗಿ ಕಲಿಯುವುದಕ್ಕೆ ಸಾಧ್ಯವಾಗುತ್ತಿಲ್ಲ. ಸಾಕ್ಷರತೆ ಮತ್ತು ಪ್ರಾಥಮಿಕ ಶಿಕ್ಷಣಗಳನ್ನು ಬಿಟ್ಟು ಉನ್ನತ ಶಿಕ್ಷಣದ ಬಗ್ಗೆ ಪರಿಶೀಲಿಸಿದರೆ ನಮಗೆ ಆಘಾತ ಕಾದಿದೆ (ನೋಡಿ ಕೋಷ್ಟಕ ೪.೮) ಅಲ್ಲಿ ತೀವ್ರ ಜಾತಿ ಸಂಬಂಧಿ ಮತ್ತು ಲಿಂಗ ಸಂಬಂಧಿ ಅಸಮಾನತೆಯಿರುವುದು ಕಂಡು ಬರುತ್ತದೆ. ಶಿಕ್ಷಣ ಅಂದರೆ ಕೇವಲ ಮಕ್ಕಳನ್ನು ಶಾಲೆಗೆ ಕಳುಹಿಸುವುದು ಮಾತ್ರವಲ್ಲ. ಅದು ಪಾಲಕರಿಂದ ಶ್ರಮ, ಸಂಪನ್ಮೂಲ, ವಾತಾವರಣ ಮತ್ತು ಸಹನೆಯನ್ನು ಬೇಡುತ್ತದೆ. ದಲಿತ ಕುಟುಂಬಗಳಲ್ಲಿ ಮಕ್ಕಳ ಶಿಕ್ಷಣಕ್ಕೆ ಅಗತ್ಯವಾದ ಶೈಕ್ಷಣಿಕ ವಾತಾವರಣ ಇರುವುದಿಲ್ಲ. ಮೇಲಾಗಿ ಖಾಸಗಿ ಶಿಕ್ಷಣ ಸಂಸ್ಥೆಗಳು ಹೆಚ್ಚುತ್ತಿರುವುದರಿಂದ ಅಲ್ಲಿ ಶಿಕ್ಷಣ ಪಡೆಯುವುದು ಪರಿಶಿಷ್ಟರಿಗೆ ಸಾಧ್ಯವಿಲ್ಲ. ಏಕೆಂದರೆ ಅದು ಅತ್ಯಂತ ದುಬಾರಿಯಾಗಿದೆ.

**ಕೋಷ್ಟಕ ೪.೮ ಕರ್ನಾಟಕದಲ್ಲಿ ಉನ್ನತ ಶಿಕ್ಷಣ ದಾಖಲಾತಿ: ಶಿಷ್ಟ ಮತ್ತು ಪರಿಶಿಷ್ಟ ಆಯಾಮಗಳು ೨೦೧೧-೧೨**

| ವಿವರಗಳು | ಒಟ್ಟು ಜನಸಂಖ್ಯೆ | ಪ.ಜಾ. ಜನಸಂಖ್ಯೆ | ಪ.ಪಂ. ಜನಸಂಖ್ಯೆ | ಪರಿಶಿಷ್ಟರ ಜನಸಂಖ್ಯೆ | ಶಿಷ್ಟರ ಜನಸಂಖ್ಯೆ |
|---|---|---|---|---|---|
| | ೨೦೧೧ | ೨೦೧೧ | ೨೦೧೧ | (ಪ.ಜಾ+ ಪ.ಪಂ) | ಒಟ್ಟು ಜನಸಂಖ್ಯೆ- ಪರಿಶಿಷ್ಟರ ಜನಸಂಖ್ಯೆ) |
| ಜನಸಂಖ್ಯೆಯಲ್ಲಿ ೧೮-೨೩ ವಯೋಮಾನದವರ ಸಂಖ್ಯೆ | ೭೪೦೧೬೭೪ | ೧೩೨೮೯೭೩ | ೫೩೬೨೫೭ | ೧೮೬೫೨೩೦ | ೫೫೩೬೪೪೪ |
| ಉನ್ನತ ಶಿಕ್ಷಣದಲ್ಲಿ ದಾಖಲಾತಿ | ೧೭೭೮೦೮೯ | ೨೦೫೧೮೨ | ೬೮೨೮೦ | ೨೭೩೪೬೨ | ೧೫೦೪೬೨೭ |
| ಉನ್ನತ ಶಿಕ್ಷಣದಲ್ಲಿ ಒಟ್ಟು ದಾಖಲಾತಿ ಶೇಕಡ ಪ್ರಮಾಣ | ೨೪.೦೨ | ೧೫.೪೪ | ೧೨.೭೩ | ೧೪.೬೬ | ೨೭.೧೮ |
| ಉನ್ನತ ಶಿಕ್ಷಣದಲ್ಲಿ ಮಹಿಳೆಯರ ದಾಖಲಾತಿ ಶೇಕಡ ಪ್ರಮಾಣ | ೨೨.೭೬ | ೧೩.೬೯ | ೧೧.೦೨ | ೧೨.೯೩ | ೨೬.೧೩ |

**ಮೂಲ:** ಭಾರತ ಸರ್ಕಾರ, ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ, ಉನ್ನತ ಶಿಕ್ಷಣ ಇಲಾಖೆ ೨೦೧೩. **ಆಲ್ ಇಂಡಿಯನ್ ಸರ್ವೆ ಆಫ್ ಹೈಯರ್ ಎಜುಕೇಶನ್** ೨೦೧೨-೨೦೧೩. ನವದೆಹಲಿ.

ಕರ್ನಾಟಕದಲ್ಲಿ ಉನ್ನತ ಶಿಕ್ಷಣದ ದಾಖಲಾತಿ ಸಾಮಾಜಿಕ ಗುಂಪುವಾರು ವಿವರಗಳನ್ನು ೨೦೧೬-೧೭ನೆಯ ಸಾಲಿಗೆ ಸಂಬಂಧಿಸಿದಂತೆ ಕೆಲವು ಸಂಗತಿಗಳನ್ನು ಇಲ್ಲಿ ನೀಡಲಾಗಿದೆ.

- ಕರ್ನಾಟಕದಲ್ಲಿ ೧೮ರಿಂದ ೨೩ ವಯೋಮಾನದ ಒಟ್ಟು ವಿದ್ಯಾರ್ಥಿಗಳ ಒಟ್ಟು ದಾಖಲಾತಿ ಪ್ರಮಾಣ ೨೦೧೬-೧೭ರಲ್ಲಿ ಶೇ.೨೬.೪೦
- ಕರ್ನಾಟಕದಲ್ಲಿ ೧೮ರಿಂದ ೨೩ ವಯೋಮಾನದ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಒಟ್ಟು ದಾಖಲಾತಿ ಪ್ರಮಾಣ ೨೦೧೬-೧೭ರಲ್ಲಿ ಶೇ.೧೯.೧೦
- ಕರ್ನಾಟಕದಲ್ಲಿ ೧೮ರಿಂದ ೨೩ ವಯೋಮಾನದ ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿಗಳ ಒಟ್ಟು ದಾಖಲಾತಿ ಪ್ರಮಾಣ ೨೦೧೬-೧೭ರಲ್ಲಿ ಶೇ.೧೭.೦೦.
- ಕನಾರ್ಟಕದಲ್ಲಿ ಉನ್ನತ ಶಿಕ್ಷಣ ಕ್ಷೇತ್ರದಲ್ಲಿರುವ ಒಟ್ಟು ಬೋಧಕರ ಸಂಖ್ಯೆ ೨೦೧೬-೧೭ರಲ್ಲಿ ೧೨೭೮೦೫(ಶೇ೧೦೦.೦೦)
- ಕರ್ನಾಟಕದಲ್ಲಿ ಉನ್ನತ ಶಿಕ್ಷಣ ಕ್ಷೇತ್ರದಲ್ಲಿರುವ ಪ.ಜಾ. ಬೋಧಕರ ಸಂಖ್ಯೆ ೨೦೧೬-೧೭ರಲ್ಲಿ ೧೦೧೯೯(ಶೇ.೭.೯೭)
- ಕರ್ನಾಟಕದಲ್ಲಿ ಉನ್ನತ ಶಿಕ್ಷಣ ಕ್ಷೇತ್ರದಲ್ಲಿರುವ ಪ.ಪಂ. ಬೋಧಕರ ಸಂಖ್ಯೆ ೨೦೧೬-೧೭ರಲ್ಲಿ ೨೫೭೨(ಶೇ.೨.೦೧)
- ಕನಾಟಕದಲ್ಲಿ ಉನ್ನತ ಶಿಕ್ಷಣ ಕ್ಷೇತ್ರದಲ್ಲಿರುವ ಒಬಿಸಿ ಬೋಧಕರ ಸಂಖ್ಯೆ ೨೦೧೬-೧೭ರಲ್ಲಿ ೪೪೭೧೨(ಶೇ.೩೪.೯೬)
- ಕನಾಟಕದಲ್ಲಿ ಉನ್ನತ ಶಿಕ್ಷಣ ಕ್ಷೇತ್ರದಲ್ಲಿರುವ ಮುಂದುವರಿದ ವರ್ಗಗಳ ಬೋಧಕರ ಸಂಖ್ಯೆ ೨೦೧೬-೧೭ರಲ್ಲಿ ೭೦೪೨೨(ಶೇ.೫೫.೦೬).

(ಮೂಲ: ಭಾರತ ಸರ್ಕಾರ, ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ, ಉನ್ನತ ಶಿಕ್ಷಣ ಇಲಾಖೆ ೨೦೧೭. **ಆಲ್ ಇಂಡಿಯನ್ ಸರ್ವೆ ಆಫ್ ಹೈಯರ್ ಎಜುಕೇಶನ್** ೨೦೧೬-೧೭. ನವದೆಹಲಿ.)

ವಿದ್ಯಾರ್ಥಿಗಳ ದಾಖಲಾತಿಗೆ ಸಂಬಂಧಿಸಿದಮತೆ ಪ.ಜಾ. ಮತ್ತು ಪ.ಪಂ. ಸ್ಥಿತಿ ಸ್ವಲ್ಪಮಟ್ಟಿಗೆ ಉತ್ತಮವಾಗುತ್ತಿದೆ. ಆದರೆ ಅಲ್ಲಿ ಬೋಧಕವರ್ಗದ ಸಾಮಾಜಿಕ ಗುಂಪುವಾರು ಸ್ಥಿತಿಯು ಮಾತ್ರ ಉನ್ನತ ವರ್ಗದ ಪರವಾಗಿರುವುದು ಸ್ಪಷ್ಟವಾಗಿದೆ.

ಒಟ್ಟು ಜನಸಂಖ್ಯೆಯನ್ನು ತೆಗೆದುಕೊಂಡರೆ ಉನ್ನತ ಶಿಕ್ಷಣದಲ್ಲಿ ದಾಖಲಾತಿ ಪ್ರಮಾಣ ಶೇ. ೨೪.೦೨. ಆದರೆ ಅದರಲ್ಲಿ ಪರಿಶಿಷ್ಟರನ್ನು ಬಿಟ್ಟು ಶಿಷ್ಟರನ್ನು ಮಾತ್ರ ಲೆಕ್ಕ ಹಾಕಿದರೆ ಆಗ ಶಿಷ್ಟರ ದಾಖಲಾತಿ ಪ್ರಮಾಣ ಶೇ. ೨೭.೧೮. ಉನ್ನತ ಶಿಕ್ಷಣದಲ್ಲಿ ಒಟ್ಟು ಪರಿಶಿಷ್ಟರ ದಾಖಲಾತಿ ಪ್ರಮಾಣ ಶೇ. ೧೪.೬೬. ಒಟ್ಟು ಜನಸಂಖ್ಯೆಯನ್ನು ಪರಿಗಣಿಸಿದರೆ ಇಲ್ಲಿ ಒಟ್ಟು ಜನಸಂಖ್ಯೆ ಮತ್ತು ಪರಿಶಿಷ್ಟರ ನಡುವಿನ ಅಸಮಾನತೆ ಶೇ. ೯.೩೬ರಷ್ಟಾಗುತ್ತದೆ (ಶೇ. ೨೪.೦೨- ಶೇ. ೧೪.೬೬=

ಶೇ. ೯.೩೬) ಆದರೆ ಶಿಷ್ಟ ಮತ್ತು ಪರಿಶಿಷ್ಟರ ನಡುವಿನ ಅಸಮಾನತೆಯನ್ನು ಲೆಕ್ಕ ಹಾಕಿದರೆ ಇಲ್ಲಿ ಅಸಮಾನತೆ ಶೇ. ೧೨.೫೨ರಷ್ಟಾಗುತ್ತದೆ(ಶೇ. ೨೭.೧೮– ಶೇ. ೧೪.೬೬= ಶೇ. ೧೨.೫೨). ಒಟ್ಟು ೧೮ರಿಂದ ೨೩ ವಯೋಮಾನದ ಜನಸಂಖ್ಯೆಯಲ್ಲಿ ಶಿಷ್ಟರ ಪ್ರಮಾಣ ಶೇ. ೭೪.೭೯. ಆದರೆ ಉನ್ನತ ಶಿಕ್ಷಣದಲ್ಲಿನ ದಾಖಲಾತಿಯಲ್ಲಿ ಅವರ ಪ್ರಮಾಣ ಶೇ. ೮೪.೬೨. ಒಟ್ಟು ೧೮ರಿಂದ ೨೩ ವಯೋಮಾನದ ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ ಶೇ. ೨೫.೨೦. ಉನ್ನತ ಶಿಕ್ಷಣದಲ್ಲಿನ ದಾಖಲಾತಿಯಲ್ಲಿ ಅವರ ಪ್ರಮಾಣ ಕೇವಲ ಶೇ. ೧೫.೩೭. ಅಕ್ಷರ ಸಂಸ್ಕೃತಿಯು ಸಾಮಾಜಿಕ ವಿಮೋಚನೆಗೆ ದಾರಿ ಮಾಡಿಕೊಡುವ ಒಂದು ಸಂಗತಿಯಾಗಿದೆ. ಅದರ ಆರ್ಥಿಕ ಆಯಾಮಕ್ಕೆ ನೀಡಿದಷ್ಟು ಮಹತ್ವವನ್ನು ನಾವು ಅದರ ಸಾಮಾಜಿಕ ಆಯಾಮಕ್ಕೆ ನೀಡುತ್ತಿಲ್ಲ. ಈ ಕಾರಣವಾಗಿ ಸಾಕ್ಷರತೆಯಲ್ಲಿನ ಸಾಮಾಜಿಕ ಅಸಮಾನತೆಯು ಇಂದಿಗೂ ಮುಂದುವರಿದಿದೆ. ಹೀಗೆ ದಲಿತರು ಮತ್ತು ದಲಿತೇತರರ ನಡುವೆ ಅಭಿವೃದ್ಧಿಗೆ ಸಂಬಂಧಿಸಿದಂತೆ ಸಾಕ್ಷರತೆ–ಶಿಕ್ಷಣ ಆಯಾಮಗಳಲ್ಲಿ ವ್ಯತ್ಯಾಸಗಳನ್ನು ಗುರುತಿಸಬಹುದು. ಅಂಕಿಅಂಶಗಳು ಸಾಬೀತುಪಡಿಸಿದಂತೆ ದಲಿತರು ಮತ್ತು ದಲಿತೇತರರ ನಡುವೆ ಅನಕ್ಷರತೆ, ಸಾಕ್ಷರತೆ ಕೊರತೆ, ಸಾಕ್ಷರತೆ–ಶಿಕ್ಷಣ ಪ್ರಾಪ್ತಿಯ ಕೊರತೆ ಇವು ಬಹುಮುಖ್ಯ ಕಾರಣಗಳಾಗಿವೆ.

**೪.೩.೪. ಆರೋಗ್ಯ ಭಾಗ್ಯ: ಸಾಮಾಜಿಕ ಗುಂಪುಗಳ ಸ್ಥಿತಿಗತಿ**

ಅಸ್ಪೃಶ್ಯತೆ, ಬಡತನ, ಹಸಿವು, ತಾರತಮ್ಯ ಮುಂತಾದ ಸಂಗತಿಗಳ ಹಿನ್ನೆಲೆಯಲ್ಲಿ ಆರೋಗ್ಯ ಅನ್ನುವುದು ಪರಿಶಿಷ್ಟರಿಗೆ ಆದ್ಯತೆಯ ಸಂಗತಿಯಾಗಿಲ್ಲ. ಆರೋಗ್ಯಕ್ಕೆ ಸಂಬಂಧಿಸಿದಂತೆ ಅನೇಕ ಬಗೆಯ ಅಸಮಾನತೆಯನ್ನು ಅವರು ಎದುರಿಸುತ್ತಿದ್ದಾರೆ. ಆರೋಗ್ಯವನ್ನು ಅಭಿವೃದ್ಧಿಯ ಸಾಧನವಾಗಿ ನೋಡುವ ಕ್ರಮವಿದೆ. ಇದು ಒಂದು ಹಂತದವರೆಗೆ ಸರಿ. ಆರೋಗ್ಯವಂತ ಶ್ರಮಿಕರ ಕಾರ್ಯಕ್ಷಮತೆಯು ಆರೋಗ್ಯದಿಂದ ವಂಚಿತರಾದ ಶ್ರಮಿಕರ ಕಾರ್ಯಕ್ಷಮತೆಗಿಂತ ಉತ್ತಮವಾಗಿರುತ್ತದೆ. ಆರೋಗ್ಯವನ್ನು ಅಭಿವೃದ್ಧಿಯ ಸಾಧನವನ್ನಾಗಿ ಪರಿಭಾವಿಸಿಕೊಳ್ಳುವ ಅಗತ್ಯವಿದೆ. ಆರೋಗ್ಯವು ಜನರ ಸ್ವಾತಂತ್ರ್ಯದ ವ್ಯಾಪ್ತಿಯನ್ನು ವಿಸ್ತೃತಗೊಳಿಸುತ್ತದೆ. ಆರೋಗ್ಯ ಭಾಗ್ಯವು ಜನರ ಹಕ್ಕು. ಈ ಕಾರಣಕ್ಕೆ ಯು ಎನ್ ಡಿ ಪಿ ಯು ಆರೋಗ್ಯದ ಸೂಚಿಗಳಾದ ಶಿಶು ಮರಣ ಪ್ರಮಾಣ, ಮಕ್ಕಳ ಮರಣ ಪ್ರಮಾಣ, ಹುಟ್ಟಿದ ಸಂದರ್ಭದಲ್ಲಿನ ಜೀವನಾಯುಷ್ಯ ಮುಂತಾದವುಗಳನ್ನು ಮಾನವ ಅಭಿವೃದ್ಧಿ ಸೂಚ್ಯಂಕದ ಒಂದು ಅಂಗವನ್ನಾಗಿ ಪರಿಗಣಿಸಿದೆ.

ಆರೋಗ್ಯವೇ ಅಭಿವೃದ್ಧಿ. ಅದನ್ನು ಶ್ರಮಿಕರ ಕಾರ್ಯಕ್ಷಮತೆಯನ್ನು ಉತ್ತಮಪಡಿಸುವ ಸಾಧನವನ್ನಾಗಿ ನೋಡುವುದು ಎರಡನೆಯ ಸಂಗತಿ. ಆರೋಗ್ಯ ಭಾಗ್ಯವು ಸ್ವಾಯತ್ತವಾಗಿ ಪ್ರಾಪ್ತವಾಗುವ ಸಂಗತಿಯಲ್ಲ. ಸಾಮಾಜಿಕ ರಚನೆಗೆ ಅನುಗುಣವಾಗಿ ಅದು ಸಮಾಜದ ವಿವಿಧ ಜನವರ್ಗಗಳಿಗೆ ಪ್ರಾಪ್ತವಾಗುತ್ತದೆ. ಸಾಮಾಜಿಕ ಶ್ರೇಣೀಕರಣವನ್ನು ಅದರ ಉತ್ಪನ್ನವಾದ ಅಸಮಾನತೆಯನ್ನು ನಿವಾರಿಸದೆ ಆರೋಗ್ಯಕ್ಕೆ ಸಂಬಂಧಿಸಿದ ಅಸಮಾನತೆಯನ್ನು ತೊಡೆದುಹಾಕುವುದು ಸಾಧ್ಯವಿಲ್ಲ. ಇದನ್ನು ಡಾ. ಬಿ.ಆರ್. ಅಂಬೇಡ್ಕರ್ ಮತ್ತೆ ಮತ್ತೆ ತಮ್ಮ ಬರಹಗಳಲ್ಲಿ ಚರ್ಚಿಸಿದ್ದಾರೆ. ಈ ಬಗ್ಗೆ ಕೆಳಗಿನ ಕೋಷ್ಟಕ ೪.೯ರಲ್ಲಿ ಕೆಲವು ವಿವರಗಳನ್ನು ನೀಡಲಾಗಿದೆ.

**ಕೋಷ್ಟಕ ೪.೯. ಕರ್ನಾಟಕದಲ್ಲಿ ಸಾಮಾಜಿಕ ಗುಂಪುಗಳ ಆರೋಗ್ಯ ಆಯಾಮಗಳು**

| ಕ್ರ.ಸಂ | ವಿವರಗಳು | ಎನ್ ಎಫ್ ಎಚ್ ಎಸ್ | | | | ಎನ್ ಎಫ್ ಎಚ್ ಎಸ್ | | | |
|---|---|---|---|---|---|---|---|---|---|
| | | ೧೯೯೨-೧೯೯೩ | | | | ೨೦೦೫-೨೦೦೬ | | | |
| | | ಪ.ಜಾ | ಪ.ಪಂ | ಒಬಿಸಿ | ಇತರೆ | ಪ.ಜಾ | ಪ.ಪಂ | ಒಬಿಸಿ | ಇತರೆ |
| ೧ | ಶಿಶು ಮರಣ ಪ್ರಮಾಣ | ೯೮.೪ | ೮೫.೬ | – | ೭೦.೬ | ೫೭.೨ | ೪೫.೮ | ೫೩ | ೪೩.೫ |
| ೨ | ಐದು ವರ್ಷಕ್ಕಿಂತ ಕಡಿಮೆ ವಯೋಮಾನದ ಮಕ್ಕಳ ಮರಣ ಪ್ರಮಾಣ | ೧೨೬ | ೧೨೦ | – | ೯೭.೧ | ೬೫.೪ | ೭೭.೯ | ೬೩.೮ | ೬೦.೪ |
| ೩ | ಮಹಿಳೆಯರ (೧೫-೪೯ ವಯೋಮಾನ) ಪೌಷ್ಟಿಕ ಸ್ಥಿತಿಗತಿ (ಬಿಎಮ್ಐ ೧೮.೫ಕ್ಕಿಂತ ಕಡಿಮೆ) | ೪೩.೩ | ೪೭.೯ | ೩೯.೬ | ೩೨ | ೩೩.೭ | ೪೦.೭ | ೨೫.೯ | ೨೩.೯ |
| ೪ | ಪುರುಷರ (೧೫-೪೯ ವಯೋಮಾನ) ಪೌಷ್ಟಿಕ ಸ್ಥಿತಿಗತಿ (ಬಿಎಮ್ಐ ೧೮.೫ಕ್ಕಿಂತ ಕಡಿಮೆ) | -- | -- | -- | -- | ೩೭.೭ | ೪೯.೬ | ೪೧.೧ | ೨೬.೮ |

ಮೂಲ: ಮನೋಹರ್ ಯಾದವ್ (ಸಂ) ೨೦೧೪. ಎ ಕಾಂಪ್ರಹೆನ್ಸಿವ್ ಸ್ಟಡಿ ಆಫ್ ಸ್ಟೇಟಸ್ ಆಫ್ ಸೆಡ್ಯೂಲ್ ಕಾಸ್ಟ್ ಇನ್ ಕರ್ನಾಟಕ. ಸೆಂಟರ್ ಫಾರ್ ಸ್ಟಡಿ ಆಫ್ ಸೋಶಿಯಲ್ ಚೇಂಜ್ ಆಂಡ್ ಡೆವಲಪ್‌ಮೆಂಟ್, ಇನ್ಸಿಟಿಟೂಟ್ ಫಾರ್ ಸೋಶಿಯಲ್ ಆಂಡ್ ಎಕನಾಮಿಕ್ ಚೇಂಜ್, ಬೆಂಗಳೂರು. ಪುಟಗಳು ೩೩-೩೫. ಅತ್ಯಂತ ಖೇದದ ಮತ್ತು ವಿಷಾದ ಸಂಗತಿಯೆಂದರೆ ಸಾಮಾಜಿಕ ಗುಂಪುವಾಗಿ ಆರೋಗ್ಯಕ್ಕೆ ಸಂಬಂಧಿಸಿದ ಮಾಹಿತಿ ನಮಗೆ ದೊರೆಯಲಿಲ್ಲ.

ಕರ್ನಾಟಕದಲ್ಲಿ ಮಕ್ಕಳ, ಮಹಿಳೆಯರ ಆರೋಗ್ಯ ಸ್ಥಿತಿಗತಿಯು ಕಳೆದ ೧೫-೨೦ ವರ್ಷಗಳಲ್ಲಿ ಸಾಕಷ್ಟು ಉತ್ತಮಗೊಂಡಿದೆ. ಉದಾಹರಣೆಗೆ ಶಿಶು ಮರಣ ಪ್ರಮಾಣ ಹಾಗೂ ಮಕ್ಕಳ ಮರಣ ಪ್ರಮಾಣ ೧೯೯೨-೯೩ರಿಂದ ೨೦೦೪-೦೫ರ ಅವಧಿಯಲ್ಲಿ ಎಲ್ಲ ಸಾಮಾಜಿಕ ಗುಂಪುಗಳಿಗೆ ಸಂಬಂಧಿಸಿದಂತೆ ಕಡಿಮೆಯಾಗಿದೆ. ಕೋಷ್ಟಕ ೪.೯ರಲ್ಲಿನ ನಾಲ್ಕು ಸೂಚಿಗಳಲ್ಲಿಯೂ ಇದನ್ನು ಕಾಣಬಹುದು. ಆದರೆ ವಿಷಾದದ ಸಂಗತಿಯೆಂದರೆ ಪರಿಶಿಷ್ಟರು ಮತ್ತು ಇತರೆ ಜನಸಂಖ್ಯೆಗಳ ನಡುವಿನ ಆರೋಗ್ಯಕ್ಕೆ ಸಂಬಂಧಿಸಿದ ಅಸಮಾನತೆಯು ಮಾತ್ರ ಅವಿಚ್ಛಿನ್ನವಾಗಿ ಮುಂದುವರಿದಿದೆ.

**೪.೩.೫. ದುಡಿಮೆಗಾರರು, ಸಾಗುವಳಿಗಾರರು/ಭೂಮಾಲೀಕರು ಮತ್ತು ಭೂರಹಿತ ದಿನಗೂಲಿ ದುಡಿಮೆಗಾರರು**

ನಮ್ಮ ಸಮಾಜದಲ್ಲಿ ಪರಿಶಿಷ್ಟರು ಎದುರಿಸುತ್ತಿರುವ ತಾರತಮ್ಯ ಯಾವ ಸ್ವರೂಪದ್ದು ಮತ್ತು ಯಾವ ಪ್ರಮಾಣದ್ದು ಎಂಬುದನ್ನು ಕೆಳಗಿನ ಕೋಷ್ಟಕ(೪.೧೦)ದಲ್ಲಿ ಮಂಡಿಸಲಾಗಿದೆ. ಅಭಿವೃದ್ಧಿಯಲ್ಲಿನ ಪಾಲಿನ ವಿಷಯ ಬಂದಾಗ ಅದರಲ್ಲಿ ಶಿಷ್ಟರ ಪಾಲು ಅಧಿಕವಾಗಿರುತ್ತದೆ ಮತ್ತು ದುಸ್ಥಿತಿಯ ವಿಷಯ ಬಂದಾಗ ಅದರಲ್ಲಿ ಪರಿಶಿಷ್ಟರ ಪಾಲು ಅಧಿಕವಾಗಿರುತ್ತದೆ. ಕರ್ನಾಟಕದ ದುಡಿಮೆಗಾರರ ಶಿಷ್ಟ-ಪರಿಶಿಷ್ಟ ಆಯಾಮದಲ್ಲಿ ಇದನ್ನು ಅರ್ಥ ಮಾಡಿಕೊಳ್ಳಬಹುದಾಗಿದೆ.

ಆರ್ಥಿಕ ಬೆಳವಣಿಗೆಯ ನಿಯಮದ ಪ್ರಕಾರ ವರಮಾನದ ಬೆಳವಣಿಗೆಯ ನಡೆಯು ಉನ್ನತವಾದಂತೆ ಕೃಷಿಯ ಅವಲಂಬನೆಯು ಕಡಿಮೆಯಾಗಬೇಕು. ಸಾಂಪ್ರದಾಯಿಕ ಆರ್ಥಿಕ ಬೆಳವಣಿಗೆ ಸಿದ್ಧಾಂತಗಳು ಇದನ್ನು ಪ್ರತಿಪಾದಿಸಿಕೊಂಡು ಬರುತ್ತಿವೆ. ಶಿಷ್ಟರ ಕೃಷಿ ಅವಲಂಬನೆಯು ಶೇ. ೫೦ಕ್ಕಿಂತ ಕಡಿಮೆಯಾಗಿದ್ದರೆ ಪರಿಶಿಷ್ಟರಲ್ಲಿ ಕೃಷಿಯ ಅವಲಂಬನೆಯು ಶೇ. ೬೦ಕ್ಕಿಂತ ಅಧಿಕ ಮಟ್ಟದಲ್ಲಿ ಮುಂದುವರಿದಿದೆ. ಅಂದರೆ ಕೃಷಿಯೇತರ ಚಟುವಟಿಕೆಗಳು ಶಿಷ್ಟರಿಗೆ ಸಂಬಂಧಿಸಿದಂತೆ ಅಧಿಕವಾಗಿ ದೊರೆಯುತ್ತಿವೆ. ಅನಕ್ಷರತೆ, ಭೂಮಿಯ ಒಡೆತನದ ಕೊರತೆಯ ಕಾರಣವಾಗಿ, ಸಾಮಾಜಿಕ ಪ್ರತ್ಯೇಕತನದ ಕಾರಣದಿಂದ ಪರಿಶಿಷ್ಟರಿಗೆ ಕೃಷಿಯೇತರ ಚಟುವಟಿಕೆಗಳ ಅವಕಾಶ ಸೀಮಿತವಾಗಿವೆ. ಕೃಷಿಯಲ್ಲಿ ಶ್ರಮಿಕರ ಉತ್ಪಾದನಾ ಮಟ್ಟವು ಕೃಷಿಯೇತರ ವಲಯದಲ್ಲಿನ ಶ್ರಮಶಕ್ತಿಯ ಉತ್ಪಾದನಾ ಪ್ರಮಾಣಕ್ಕಿಂತ ಕಡಿಮೆಯಿರುತ್ತದೆ.

**ಕೋಷ್ಟಕ ೪.೧೦. ದುಡಿಮೆಗಾರರ ಶಿಷ್ಟ ಮತ್ತು ಪರಿಶಿಷ್ಟ ಆಯಾಮಗಳು: ೨೦೧೧ (ಲಕ್ಷಗಳಲ್ಲಿ)**

| ವಿವರಗಳು | ಒಟ್ಟು | ಶಿಷ್ಟರು | ಪರಿಶಿಷ್ಟರು |
|---|---|---|---|
| ಒಟ್ಟು ದುಡಿಮೆಗಾರರು | | | |
| ಒಟ್ಟು | ೨೭೮.೭ | ೨೦೭.೫೪ (೭೪.೪೭) | ೭೧.೧೮ (೨೫.೫೩) |
| ಪುರುಷರು | ೧೮೨.೭ | ೧೪೦.೨ | ೪೨.೫ |
| ಮಹಿಳೆಯರು | ೯೬.೦೨ | ೬೭.೩೪ | ೨೮.೬೮ |
| ಒಟ್ಟು ಭೂ ಸಾಗುವಳಿಗಾರರು(ಭೂಮಾಲೀಕರು) | | | |
| ಒಟ್ಟು | ೬೫.೮ | ೫೨.೫೫(೭೯.೪೯) | ೧೩.೨೫(೨೦.೫೧) |
| ಪುರುಷರು | ೪೭.೫೪ | ೩೮.೧೨ | ೯.೪೨ |
| ಮಹಿಳೆಯರು | ೧೮.೨೬ | ೧೪.೪೩ | ೩.೮೩ |
| ಭೂರಹಿತ ದಿನಗೂಲಿ ದುಡಿಮೆಗಾರರು | | | |
| ಒಟ್ಟು | ೭೧.೫೫ | ೪೧.೮೫(೫೮.೫೦) | ೨೯.೭೦(೪೧.೫೦) |
| ಪುರುಷರು | ೩೨.೮೩ | ೧೮.೭೨ | ೧೪.೧೧ |
| ಮಹಿಳೆಯರು | ೩೮.೭೨ | ೨೩.೧೩ | ೧೫.೫೯ |

ಮೂಲ: ಸೆನ್ಸಸ್ ಆಫ್ ಇಂಡಿಯಾ ೨೦೧೧. ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್, ಸಿರೀಸ್ ೩೦. ಕರ್ನಾಟಕ, ಡೈರೆಕ್ಟೋರೇಟ್ ಆಫ್ ಸೆನ್ಸಸ್ ಆಪರೇಶನ್, ಬೆಂಗಳೂರು.

ಈ ಕಾರಣಕ್ಕೆ ಸಾಮಾನ್ಯವಾಗಿ ಕೃಷಿಯಲ್ಲಿ ತಲಾ ವರಮಾನವು ಕೃಷಿಯೇತರ ವಲಯದಲ್ಲಿನ ತಲಾ ವರಮಾನಕ್ಕಿಂತ ಕಡಿಮೆಯಿರುತ್ತದೆ. ಏಕೆಂದರೆ ಕೃಷಿಯನ್ನು ಅವಲಂಬಿಸಿಕೊಂಡಿರುವ ದುಡಿಮೆಗಾರರ ಸಂಖ್ಯೆಯು ಅಪಾರ: ಆದರೆ ಅದರಿಂದ ಪ್ರಾಪ್ತವಾಗುತ್ತಿರುವ ವರಮಾನ ಕಡಿಮೆ. ಇದಕ್ಕೆ ಪ್ರತಿಯಾಗಿ ಕೃಷಿಯೇತರ ವಲಯಗಳಲ್ಲಿ ದುಡಿಮೆಗಾರರ ಸಂಖ್ಯೆ ಕಡಿಮೆ: ಅಲ್ಲಿಂದ ಹರಿದು ಬರುವ ವರಮಾನ ಅಧಿಕ. ಉದಾಹರಣೆಗೆ ೨೦೧೩-೨೦೧೪ರಲ್ಲಿ ಕರ್ನಾಟಕದ ಒಟ್ಟು ರಾಜ್ಯ ಆಂತರಿಕ ಉತ್ಪನ್ನ (ಚಾಲ್ತಿ ಬೆಲೆಗಳಲ್ಲಿ) ರೂ. ೬೧೪೬೦೭ ಕೋಟಿ. ಇದರಲ್ಲಿ ಕೃಷಿ ಮತ್ತು ತತ್ಸಂಬಂಧಿ ವಲಯದ ಪಾಲು ಶೇ. ೧೭.೯೨ (ರೂ. ೧೧೦೧೦೭ ಕೋಟಿ)ರಷ್ಟಾದರೆ ಕೃಷಿಯೇತರ ವಲಯದ ಪಾಲು ಶೇ. ೮೧.೦೮(ರೂ. ೫೦೪೫೦೦ ಕೋಟಿ). ಈ ಅಂಕಿಗಳ ಪ್ರಕಾರ ೨೦೧೩-೨೦೧೪ರಲ್ಲಿ ಕರ್ನಾಟಕದ ಒಟ್ಟು ತಲಾ ವರಮಾನ ರೂ. ೧೦೦೭೫೫(ಕರ್ನಾಟಕ ಸರ್ಕಾರ ೨೦೧೫. ಕರ್ನಾಟಕ ಆರ್ಥಿಕ ಸಮೀಕ್ಷೆ ೨೦೧೪-೨೦೧೫, ಯೋಜನಾ ಇಲಾಖೆ, ಬೆಂಗಳೂರು). ಆದರೆ ಒಟ್ಟು ರಾಜ್ಯ ವರಮಾನದಲ್ಲಿ ಕೃಷಿಯ ಪಾಲು ಕಡಿಮೆಯಿದ್ದು ಅದನ್ನು ಅವಲಂಬಿಸಿ ಕೊಂಡಿರುವವರ ಸಂಖ್ಯೆ ಅಧಿಕವಿರುವುದರಿಂದ ಅಲ್ಲಿನ ಒಟ್ಟು ತಲಾ ವರಮಾನ ಕಡಿಮೆ. ಶಿಷ್ಟರಲ್ಲಿ ಕೃಷಿಯ ಅವಲಂಬನೆ ೨೦೧೧ರಲ್ಲಿ ಶೇ. ೪೫.೪೮ರಷ್ಟಿದ್ದರೆ ಪರಿಶಿಷ್ಟರಲ್ಲಿ ಅದು ಶೇ. ೬೦.೩೪ರಷ್ಟಿದೆ. ಅಂದರೆ ರಾಜ್ಯದ ಒಟ್ಟು ಆಂತರಿಕ ಉತ್ಪನ್ನದಲ್ಲಿ ಪರಿಶಿಷ್ಟರ ಪಾಲು ಕಡಿಮೆಯಿದೆ.

**ಕೋಷ್ಟಕ ೪.೧೧. ದುಡಿಮೆಗಾರರಲ್ಲಿ ಶಿಷ್ಟ ಮತ್ತು ಪರಿಶಿಷ್ಟ ಆಯಾಮಗಳು:**

**ಆಯ್ದ ಸೂಚಿಗಳು ೨೦೦೧ ಮತ್ತು ೨೦೧೧.**

| ವಿವರಗಳು | ೨೦೦೧ | ೨೦೧೧ |
|---|---|---|
| ಒಟ್ಟು ಶಿಷ್ಟ ದುಡಿಮೆಗಾರರಲ್ಲಿ ಶಿಷ್ಟ ಭೂಮಾಲೀಕರ ಪ್ರಮಾಣ | ಶೇ. ೩೧.೦೪ | ಶೇ. ೨೫.೩೨ |
| ಒಟ್ಟು ಪರಿಶಿಷ್ಟ ದುಡಿಮೆಗಾರರಲ್ಲಿ ಪರಿಶಿಷ್ಟ ಭೂಮಾಲೀಕರ ಪ್ರಮಾಣ | ಶೇ. ೨೩.೬೨ | ಶೇ. ೧೮.೬೧ |
| ಒಟ್ಟು ಶಿಷ್ಟ ದುಡಿಮೆಗಾರರಲ್ಲಿ ಶಿಷ್ಟ ಭೂರಹಿತ ದಿನಗೂಲಿ ದುಡಿಮೆಗಾರರ ಪ್ರಮಾಣ | ಶೇ. ೨೧.೦೦ | ಶೇ. ೨೦.೧೬ |
| ಒಟ್ಟು ಪರಿಶಿಷ್ಟ ದುಡಿಮೆಗಾರರಲ್ಲಿ ಪರಿಶಿಷ್ಟ ಭೂರಹಿತ ದಿನಗೂಲಿ ದುಡಿಮೆಗಾರರ ಪ್ರಮಾಣ | ಶೇ. ೪೩.೬೨ | ಶೇ. ೪೧.೭೨ |
| ಶಿಷ್ಟ ಒಟ್ಟು ದುಡಿಮೆಗಾರರಲ್ಲಿ ಕೃಷಿಯನ್ನು ಅವಲಂಬಿಸಿಕೊಂಡಿರುವವರ ಪ್ರಮಾಣ | ಶೇ. ೫೨.೦೪ | ಶೇ. ೪೫.೪೮ |
| ಪರಿಶಿಷ್ಟ ಒಟ್ಟು ದುಡಿಮೆಗಾರರಲ್ಲಿ ಕೃಷಿಯನ್ನು ಅವಲಂಬಿಸಿಕೊಂಡಿರುವವರ ಪ್ರಮಾಣ | ಶೇ. ೬೭.೨೪ | ಶೇ. ೬೦.೩೪ |

**ಮೂಲ:** ಕೋಷ್ಟಕ ೪.೧೨ರ ಅಂಕಿಅಂಶಗಳನ್ನು ಆಧರಿಸಿ ಸಿದ್ಧಪಡಿಸಲಾಗಿದೆ.

ಕೃಷಿಯ ಅವಲಂಬನೆಯು ಪರಿಶಿಷ್ಟರಲ್ಲಿ ಅಧಿಕವಾಗಿರುವುದರಿಂದ ಅವರ ತಲಾ ವರಮಾನವು ಶಿಷ್ಟರ ತಲಾ ವರಮಾನಕ್ಕಿಂತ ಕೆಳಮಟ್ಟದಲ್ಲಿದೆ ಎಂದು ತಿಳಿಯಬಹುದು. ಅಸ್ಪೃಶ್ಯತೆಯ ಆರ್ಥಿಕ ಪರಿಣಾಮ ಇದಾಗಿದೆ. ಕೋಷ್ಟಕ ೪.೧೦ರಲ್ಲಿನ ಅಂಕಿಅಂಶಗಳನ್ನು ಆಧರಿಸಿ ಕೆಲವು ಸೂಚಿಗಳನ್ನು ಲೆಕ್ಕ ಹಾಕಲಾಗಿದೆ. ಅವುಗಳನ್ನು ಕೋಷ್ಟಕ ೪.೧೧ರಲ್ಲಿ ನೀಡಲಾಗಿದೆ.

ಒಟ್ಟಾರೆ ದುಸ್ಥಿತಿಯ ಪ್ರಮಾಣವು ಶಿಷ್ಟ ವರ್ಗದಲ್ಲಿ ಕೆಳಮಟ್ಟದಲ್ಲಿದ್ದರೆ ಅದು ಪರಿಶಿಷ್ಟರಲ್ಲಿ ಅಧಿಕವಾಗಿದೆ. ಆದರೆ ಅಭಿವೃದ್ಧಿಗೆ ಬಂದರೆ ಅದರಲ್ಲಿ ಶಿಷ್ಟರ ಪಾಲು ಅಧಿಕವಾಗಿದ್ದು ಪರಿಶಿಷ್ಟರ ಪಾಲು ಕೆಳಮಟ್ಟದಲ್ಲಿದೆ. ಅಸ್ಪೃಶ್ಯತೆ ಮತ್ತು ಸಾಮಾಜಿಕ ಪ್ರತ್ಯೇಕತನ ಯಾವ ಪರಿಣಾಮಗಳನ್ನು ಬೀರಬಹುದು ಎಂಬುದಕ್ಕೆ ಇಲ್ಲಿ ನಿದರ್ಶನವಿದೆ. ಅಭಿವೃದ್ಧಿ ಅನ್ನುವುದು ಕೇವಲ ವರಮಾನದ ಏರಿಕೆಗೆ ಸಂಬಂಧಿಸಿದ ಸಂಗತಿಯಲ್ಲ. ಅದು ಮಹಿಳೆಯರನ್ನು, ಪರಿಶಿಷ್ಟರನ್ನು, ಅಲ್ಪಸಂಖ್ಯಾತರನ್ನು ಸೇರಿಸಿಕೊಂಡು ಜನರಿಗೆ, ಅವರ ಘನತೆ, ಗೌರವಕ್ಕೆ ಸಂಬಂಧಿಸಿದ ಸಂಗತಿಯಾಗಿದೆ.

ಕೋಷ್ಟಕ ೪.೧೦ ಮತ್ತು ೪.೧೧ರಲ್ಲಿನ ವಿವರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ನಮಗೆ ಅಸಮಾನತೆಯ ಮತ್ತೊಂದು ಸಂಗತಿ ತಿಳಿಯುತ್ತದೆ. ಕೃಷಿಯನ್ನು ಅವಲಂಬಿಸಿಕೊಂಡಿರುವ ಶಿಷ್ಟರಲ್ಲಿ

ಸಾಗುವಳಿಗಾರರ ಸಂಖ್ಯೆಯು (೫೨.೫೫ ಲಕ್ಷ) ಭೂರಹಿತ ದುಡಿಮೆಗಾರರ ಸಂಖ್ಯೆಗಿಂತ (೪೧.೮೫ ಲಕ್ಷ) ಅಧಿಕವಾಗಿದೆ. ಶಿಷ್ಟರು ಅನುಭವಿಸುತ್ತಿರುವ ಸಮೃದ್ಧತೆಯ ಸೂಚಿ ಇದಾಗಿದೆ. ಆದರೆ ಪರಿಶಿಷ್ಟರಿಗೆ ಸಂಬಂಧಿಸಿದಂತೆ ಸಾಗುವಳಿಗಾರರ ಸಂಖ್ಯೆಯು(೧೩.೨೫ ಲಕ್ಷ) ಭೂರಹಿತ ದುಡಿಮೆಗಾರರ ಸಂಖ್ಯೆಗಿಂತ(೨೯.೭೦ ಲಕ್ಷ) ಕಡಿಮೆಯಿದೆ. ಭೂಮಾಲೀಕರು ಮತ್ತು ಭೂರಹಿತ ದಿನಗೂಲಿ ದುಡಿಮೆಗಾರರ ನಡುವಿನ ಅನುಪಾತ (೨೦೧೧) ಶಿಷ್ಟರಲ್ಲಿ ೧:೦.೨೪ರಷ್ಟಿದ್ದರೆ ಪರಿಶಿಷ್ಟರಲ್ಲಿ ಅದು ೧:೨.೨೪ರಷ್ಟಿದೆ. ಅಂದರೆ ಶಿಷ್ಟರಲ್ಲಿ ಪ್ರತಿ ಭೂಮಾಲೀಕರಿಗೆ ೦.೨೪ ಭೂರಹಿತ ದಿನಗೂಲಿ ದುಡಿಮೆಗಾರರಿದ್ದರೆ ಪರಿಶಿಷ್ಟರಲ್ಲಿ ಪ್ರತಿ ಭೂಮಾಲೀಕರಿಗೆ ೨.೨೪ ಭೂರಹಿತ ದಿನಗೂಲಿ ದುಡಿಮೆಗಾರರಿದ್ದಾರೆ. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ ಶಿಷ್ಟರಲ್ಲಿ ಪ್ರತಿ ನಾಲ್ಕು ಭೂಮಾಲೀಕರಿಗೆ ಒಬ್ಬ ಭೂರಹಿತ ದಿನಗೂಲಿ ದುಡಮೆಗಾರರಿದ್ದರೆ, ಪರಿಶಿಷ್ಟರಲ್ಲಿ ಪ್ರತಿ ನಾಲ್ಕು ಭೂಮಾಲೀಕರಿಗೆ ಒಂಬತ್ತು ಭೂರಹಿತ ದಿನಗೂಲಿ ದುಡಿಮೆಗಾರರಿದ್ದಾರೆ. ಪರಿಶಿಷ್ಟರು ಅನುಭವಿಸುತ್ತಿರುವ ದುಸ್ಥಿತಿಯ ಸೂಚಿ ಇದಾಗಿದೆ. ಶಿಷ್ಟರಿಗೆ ಸಂಬಂಧಿಸಿದಂತೆ ಕೃಷಿಯು ಬಂಡವಾಳಶಾಹಿ ಸ್ವರೂಪವನ್ನು ತಳೆಯುತ್ತಿದೆ. ಆದರೆ ಪರಿಶಿಷ್ಟರಲ್ಲಿ ಇದು ಸಾಧ್ಯವಾಗುತ್ತಿಲ್ಲ. ಶಿಷ್ಟರಿಗೆ ಸಂಬಂಧಿಸಿದಂತೆ ಕೃಷಿಯು ವರಮಾನದ ಮೂಲವಾಗಿ ಉಳಿದಿಲ್ಲ. ಆದರೆ ಪರಿಶಿಷ್ಟರಿಗೆ ಅದು ಇನ್ನೂ ವರಮಾನದ ಮೂಲವಾಗಿ ಮುಂದುವರಿದಿದೆ.

**೪.೩.೬. ದಲಿತರು ಮತ್ತು ದಲಿತೇತರರುಗಳ ನಡುವೆ ಭೂಹಿಡುವಳಿಗಳ ವಿತರಣೆ**

ಕೋಷ್ಟಕ ೪.೧೨ರಲ್ಲಿ ಭೂಹಿಡುವಳಿಗಳಿಗೆ ಸಂಬಂಧಿಸಿದಂತೆ ಮಹತ್ವದ ಸಂಗತಿಗಳನ್ನು ನೀಡಲಾಗಿದೆ. ಪರಿಶಿಷ್ಟರು ಮತ್ತು ಶಿಷ್ಟರ ನಡುವಿನ ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಯ ಮೂಲವು ಅವರ ನಡುವಿನ ಭೂಒಡೆತನಕ್ಕೆ ಸಂಬಂಧಿಸಿದ ರಚನೆಯಲ್ಲಿದೆ.

**ಕೋಷ್ಟಕ ೪.೧೨. ಕರ್ನಾಟಕದಲ್ಲಿ ಉಳುಮೆ ಮಾಡುವ ಭೂಹಿಡುವಳಿಗಳ ಸಂಖ್ಯೆ ಮತ್ತು ವಿಸ್ತೀರ್ಣ ೨೦೧೦-೨೦೧೧**

| ಕ್ರ.ಸಂ. | ವಿವರಣೆ | ಒಟ್ಟು | ದಲಿತರು | ದಲಿತೇತರರು |
|---|---|---|---|---|
| ೧ | ಒಟ್ಟು ಭೂಹಿಡುವಳಿಗಳ ಸಂಖ್ಯೆ (ಲಕ್ಷಗಳಲ್ಲಿ) | ೭೮.೨ | ೧೩.೮೭ | ೬೪.೩೩ |
| ೨ | ಒಟ್ಟು ಭೂಹಿಡುವಳಿಗಳಲ್ಲಿ ಅತಿಸಣ್ಣ ಮತ್ತು ಸಣ್ಣ ಭೂಹಿಡುವಳಿಗಳ ಸಂಖ್ಯೆ (ಲಕ್ಷಗಳಲ್ಲಿ) | ೫೯.೭೯<br>೭೬.೪೬ | ೧೧.೪೧<br>೮೨.೨೬ | ೪೮.೩೮<br>೭೫.೨೧ |
| ೩ | ಒಟ್ಟು ಭೂಹಿಡುವಳಿಗಳ ವಿಸ್ತೀರ್ಣ(ಲಕ್ಷ ಹೆಕ್ಟೇರುಗಳಲ್ಲಿ) | ೧೨೦.೮೮ | ೧೭.೭೯ | ೧೦೩.೦೯ |
| ೪ | ಒಟ್ಟು ಭೂಹಿಡುವಳಿಗಳ ವಿಸ್ತೀರ್ಣದಲ್ಲಿ ಅತಿಸಣ್ಣ ಮತ್ತು ಸಣ್ಣ ಭೂಹಿಡುವಳಿಗಳ ವಿಸ್ತೀರ್ಣ (ಲಕ್ಷ ಹೆಕ್ಟೇರುಗಳಲ್ಲಿ) | ೪೮.೬೬<br>೪೦.೨೫ | ೯.೨೮<br>೫೨.೨೨ | ೩೯.೩೭<br>೩೮.೧೯ |
| ೫ | ಒಟ್ಟು ಭೂಹಿಡುವಳಿಗಳಲ್ಲಿ ಅರೆಮಧ್ಯಮ, ಮಧ್ಯಮ ಮತ್ತು ದೊಡ್ಡ ಭೂಹಿಡುವಳಿಗಳ ಸಂಖ್ಯೆ (ಲಕ್ಷಗಳಲ್ಲಿ) | ೧೮.೪೧<br>೨೩.೫೪ | ೨.೪೬<br>೧೭.೭೪ | ೧೫.೯೫<br>೨೪.೭೯ |
| ೬ | ಒಟ್ಟು ಭೂಹಿಡುವಳಿ ವಿಸ್ತೀರ್ಣದಲ್ಲಿ ಅರೆಮಧ್ಯಮ, ಮಧ್ಯಮ ಮತ್ತು ದೊಡ್ಡ ಭೂಹಿಡುವಳಿಗಳ ವಿಸ್ತೀರ್ಣ (ಲಕ್ಷ ಹೆಕ್ಟೇರುಗಳಲ್ಲಿ) | ೭೨.೨೨<br>೫೯.೭೪ | ೮.೫<br>೪೭.೭೮ | ೬೩.೭೨<br>೬೧.೮೧ |

**ಮೂಲ:** ಕರ್ನಾಟಕ ಸರ್ಕಾರ, ೨೦೧೩. ಸ್ಟಾಟಿಸ್ಟಿಕಲ್ ಅಬ್‌ಸ್ಟ್ರಾಕ್ಟ್ ಆಫ್ ಕರ್ನಾಟಕ. ೨೦೧೩-೨೦೧೪, ಡೈರೆಕ್ಟೊರೇಟ್ ಆಫ್ ಎಕನಾಮಿಕ್ಸ್ ಆಂಡ್ ಸ್ಟಾಟಿಸ್ಟಿಕ್ಸ್, ಬೆಂಗಳೂರು

**ಟಿಪ್ಪಣಿ:** ಆವರಣದಲ್ಲಿರುವ ಅಂಕಿಗಳು ಒಟ್ಟು ಮೊತ್ತದ ಶೇಕಡ ಪ್ರಮಾಣವನ್ನು ತೋರಿಸುತ್ತವೆ.

ಈ ಕೋಷ್ಟಕದಲ್ಲಿ ೨೦೧೦-೧೧ನೆಯ ಸಾಲಿಗೆ ಸಂಬಂಧಿಸಿದ ಹಿಡುವಳಿಗಳ ಗಾತ್ರವಾರು ಸಾಮಾಜಿಕ ಗುಂಪುವಾರಿ ವಿವರಗಳನ್ನು ನೀಡಲಾಗಿದೆ. ಅದರ ಮುಂದಿನ ವರ್ಷಗಳ ಮಾಹಿತಿ ದೊರೆಯಲಿಲ್ಲ. ಆದರೂ ಎರಡು ಸಂಗತಿಗಳನ್ನು ಇಲ್ಲಿ ಹೇಳಬಹುದು. (೧). ಹಿಡುವಳಿಗಳ ಗಾತ್ರವಾರು ಸ್ವರೂಪದಲ್ಲಿ ೨೦೧೦-೧೧ರ ನಂತರ ಬಹಳ ಬದಲಾವಣೆಯಾದಂತೆ ಕಾಣುವುದಿಲ್ಲ. (೨). ಭೂ ಹಿಡುವಳಿಗಳ ಗಾತ್ರಗಳ ವಿಧದಲ್ಲಿ ಸಾಮಾಜಿಕ ಗುಂಪುವಾರು ಸ್ವರೂಪದಲ್ಲಿ ಹೆಚ್ಚಿನ ಬದಲಾವಣೆಯಾಗಿದೆ ಎಂದು ಭಾವಿಸುವುದಕ್ಕೆ ನಮಗೆ ಹೆಚ್ಚಿನ ಆಧಾರ ದೊರೆಯುವುದಿಲ್ಲ.

ಕರ್ನಾಟಕದಲ್ಲಿ ಒಟ್ಟು ಭೂಹಿಡುವಳಿಗಳಲ್ಲಿ ಅತಿಸಣ್ಣ (ಒಂದು ಹೆಕ್ಟೇರು) ಮತ್ತು ಸಣ್ಣ ಭೂಹಿಡುವಳಿಗಳ (ಒಂದರಿಂದ ಎರಡು ಹೆಕ್ಟೇರುಗಳು) ಪ್ರಮಾಣ ಶೇ. ೭೬.೪೬ರಷ್ಟಿದ್ದರೆ ಶಿಷ್ಟರಲ್ಲಿ ಅದು ಶೇ. ೭೫.೨೧ ಮತ್ತು ಪರಿಶಿಷ್ಟರಲ್ಲಿ ಶೇ. ೮೨.೨೬ರಷ್ಟಿದೆ. ಇಲ್ಲಿ ಶಿಷ್ಟರ ಪಾಲು ಕಡಿಮೆ:

ಪರಿಶಿಷ್ಟರ ಪಾಲು ಅಧಿಕ. ಆದರೆ ಅರೆಮಧ್ಯಮ(೨ರಿಂದ ೪ ಹೆಕ್ಟೇರುಗಳು), ಮಧ್ಯಮ(೪ರಿಂದ ೧೦ ಹೆಕ್ಟೇರುಗಳು) ಮತ್ತು ದೊಡ್ಡ ಭೂಹಿಡುವಳಿಗಳಿಗೆ(೧೦ ಹೆಕ್ಟೇರಿಗಿಂತ ಅಧಿಕ) ಬಂದರೆ ಅಲ್ಲಿ ಶಿಷ್ಟರ ಪಾಲು ಅಧಿಕ(ಶೇ. ೨೪.೭೯): ಪರಿಶಿಷ್ಟರ ಪಾಲು ಕಡಿಮೆ(ಶೇ. ೧೭.೭೪). ಇಲ್ಲಿ ಶಿಷ್ಟರು ಮತ್ತು ಪರಿಶಿಷ್ಟರ ನಡುವೆ ಅಸಮಾನತೆ ತೀವ್ರವಾಗಿಲ್ಲ. ಇದಕ್ಕಿಂತ ಶಿಷ್ಟರು ಮತ್ತು ಪರಿಶಿಷ್ಟರ ನಡುವೆ ಹೆಚ್ಚು ಅಸಮಾನತೆಯನ್ನು ಅವರ ನಡುವಿನ ಭೂಹಿಡುವಳಿಗಳ ವಿಸ್ತೀರ್ಣಕ್ಕೆ ಸಂಬಂಧಿಸಿದಂತೆ ಕಾಣಬಹುದು. ಇಲ್ಲಿ ಒಟ್ಟು ಭೂಹಿಡುವಳಿಗಳ ವಿಸ್ತೀರ್ಣದಲ್ಲಿ ಅತಿಸಣ್ಣ ಮತ್ತು ಸಣ್ಣ ಭೂಹಿಡುವಳಿಗಳ ವಿಸ್ತೀರ್ಣದ ಪ್ರಮಾಣ ಶೇ. ೫೯.೭೪ ರಷ್ಟಿದ್ದರೆ ಶಿಷ್ಟರಲ್ಲಿ ಅದು ಶೇ. ೬೧.೮೧ ಮತ್ತು ಪರಿಶಿಷ್ಟರಲ್ಲಿ ಅದರ ಪ್ರಮಾಣ ಕೇವಲ ಶೇ. ೪೭.೭೮ರಷ್ಟಿದೆ.

ಒಟ್ಟು ಜನಸಂಖ್ಯೆಯಲ್ಲಿ ಶಿಷ್ಟ ಮತ್ತು ಪರಿಶಿಷ್ಟರ ನಡುವೆ ಜನಸಂಖ್ಯೆಯ ವಿತರಣೆಯ ಪ್ರಮಾಣ ಎಷ್ಟಿದೆಯೋ ಅದಕ್ಕೆ ಅನುಗುಣವಾಗಿ ಅವರ ನಡುವೆ ಭೂಹಿಡುವಳಿಗಳ ವಿತರಣೆ ನಡೆದಿಲ್ಲ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜನಸಂಖ್ಯೆಯ ಪ್ರಮಾಣ ಶೇ. ೨೪.೧೦ರಷ್ಟಿದ್ದರೆ ಅವರು ಭೂಹಿಡುವಳಿಗಳಲ್ಲಿ ಪಡೆದಿರುವ ಪಾಲು ಕೇವಲ ಶೇ. ೧೭.೭೪ ಮತ್ತು ಭೂಹಿಡುವಳಿಗಳ ವಿಸ್ತೀರ್ಣದಲ್ಲಿ ಪರಿಶಿಷ್ಟರು ಪಡೆದಿರುವ ಪಾಲು ಶೇ. ೧೪.೭೨. ಪರಿಶಿಷ್ಟರು ಅನುಭವಿಸುತ್ತಿರುವ ತಾರತಮ್ಯ ಮತ್ತು ದುಸ್ಥಿತಿಯ ಮೂಲ ಇಲ್ಲಿದೆ. ಭೂಮಿಯು ಆಸ್ತಿ ಮಾತ್ರವಲ್ಲ. ಅದು ಪ್ರತಿಷ್ಠೆಯ ಮತ್ತು ಘನತೆಯ ಸೂಚಿಯಾಗಿದೆ. ಪರಿಶಿಷ್ಟರ ಬಳಿಯಿರುವ ಭೂಹಿಡುವಳಿಗಳು ಹೆಚ್ಚಾಗಿ ಅತಿ ಸಣ್ಣ ಮತ್ತು ಸಣ್ಣ ಹಿಡುವಳಿಗಳಾಗಿರುವುದರಿಂದ (ಶೇ. ೮೨.೨೬) ಅವರಿಗೆ ಕೃಷಿಯಿಂದ ಹೆಚ್ಚು ವರಮಾನವನ್ನು ಪಡೆಯುವುದು ಸಾಧ್ಯವಾಗಿಲ್ಲ. ಹೀಗೆ ದಲಿತ ಮತ್ತು ದಲಿತೇತರರ ನಡುವೆ ವ್ಯತ್ಯಾಸವನ್ನು ಗುರುತಿಸಬಹುದು. ಭೂಹಿಡುವಳಿಗಳಿಗೆ ಸಂಬಂಧಿಸಿದಂತೆ ದಲಿತರ ಅನಭಿವೃದ್ಧಿ ಸಂಗತಿಗಳನ್ನು ಮೇಲಿನ ಅಂಕಿಅಂಶಗಳು ಎತ್ತಿಹಿಡಿಯುತ್ತವೆ.

**೪.೩.೭ ಲಿಂಗ ಸಂಬಂಧಗಳು: ಪರಿಶಿಷ್ಟ ಮಹಿಳೆಯರ ಬವಣೆ**

ಸಮಾಜದಲ್ಲಿ ಮಹಿಳೆಯರು ಮತ್ತು ಪುರುಷರ ನಡುವೆ ಅನೇಕ ಬಗೆಯ ಅಸಮಾನತೆಗಳಿವೆ. ಉದಾಹರಣೆಗೆ ರಾಜ್ಯದ ಒಟ್ಟು ಅಕ್ಷರಸ್ಥರಲ್ಲಿ ಮಹಿಳೆಯರ ಪ್ರಮಾಣ ಶೇ. ೪೪.೬೨. ರಾಜ್ಯದ ಒಟ್ಟು ಪರಿಶಿಷ್ಟ ಅಕ್ಷರಸ್ಥರಲ್ಲಿ ಮಹಿಳೆಯರ ಪ್ರಮಾಣ ಶೇ. ೪೨.೯೮. ಒಟ್ಟಾರೆ ಜನಸಂಖ್ಯೆಯಲ್ಲಿ ಮಹಿಳೆಯರ ಪ್ರಮಾಣ ಶೇ. ೪೯ರಷ್ಟಿದೆ. ಆದರೆ ಅಕ್ಷರಸ್ಥರಲ್ಲಿ ಮಾತ್ರ ಅವರ ಪ್ರಮಾಣ ಕಡಿಮೆಯಿದೆ. ಅದೇ ರೀತಿಯಲ್ಲಿ ಒಟ್ಟು ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ ಶೇ. ೩೪.೮೫. ಆದರೆ ಭೂರಹಿತ ದಿನಗೂಲಿ ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ ಶೇ. ೫೪.೧೧ರಷ್ಟಿದೆ. ಹೀಗೆ ಎಲ್ಲ ಆಯಾಮಗಳಲ್ಲೂ ಮಹಿಳೆಯರು ಅಸಮಾನತೆಯನ್ನು ಅನುಭವಿಸುತ್ತಿದ್ದಾರೆ. ಒಟ್ಟು ಶಿಷ್ಟ ಅಕ್ಷರಸ್ಥರಲ್ಲಿ ಮಹಿಳೆಯರ ಪ್ರಮಾಣ ಶೇ. ೪೫.೦೪. ಆದರೆ ಪರಿಶಿಷ್ಟ ಅಕ್ಷರಸ್ಥರಲ್ಲಿ ಮಹಿಳೆಯರ ಪ್ರಮಾಣ ಕೇವಲ ಶೇ. ೪೨.೯೯. ಪರಿಶಿಷ್ಟರ ಅಭಿವೃದ್ಧಿಯ ಬಗ್ಗೆ ಯೋಚಿಸುವಾಗ ನಾವು ಅದರ

ಲಿಂಗ ಸಂಬಂಧಿ ಆಯಾಮದ ಬಗ್ಗೆ ಯೋಚಿಸುವ ಅಗತ್ಯವಿದೆ. ಲಿಂಗ ಅಸಮಾನತೆ ಅನ್ನುವುದು ಕೇವಲ ಮಹಿಳೆಯರು ಮತ್ತು ಪುರುಷರ ನಡುವಿನ ಅಸಮಾನತೆ ಮಾತ್ರವಲ್ಲ. ಇಲ್ಲಿ ಶಿಷ್ಟ ಮಹಿಳೆಯರು ಮತ್ತು ಪರಿಶಿಷ್ಟ ಮಹಿಳೆಯರ ನಡುವಿನ ಅಸಮಾನತೆಯನ್ನು ಗಮನಿಸಬೇಕಾಗುತ್ತದೆ. ಲಿಂಗ ಸಂಬಂಧಿ ಸಾಕ್ಷರತಾ ಅಂತರ ಶೇ. ೧೪.೩೯ ಗಳಷ್ಟಿದ್ದರೆ ಶಿಷ್ಟ ಮಹಿಳೆಯರ ಸಾಕ್ಷರತೆ ಮತ್ತು ಪರಿಶಿಷ್ಟ ಮಹಿಳೆಯರ ಸಾಕ್ಷರತೆಯ ನಡುವೆ ಶೇ. ೨೨ ಗಳಷ್ಟು ಅಂತರವಿದೆ.

ದಲಿತ ಮಹಿಳೆಯರು ಅನೇಕ ಬಗೆಯ ಅಸಮಾನತೆಗಳನ್ನು ಏಕಕಾಲದಲ್ಲಿ ಎದುರಿಸುತ್ತಿದ್ದಾರೆ. ಮೊದಲನೆಯದಾಗಿ ಬಡವರಾಗಿ ಅವರು ವರ್ಗ ಅಸಮಾನತೆಯನ್ನು, ದಲಿತರಾಗಿ ಜಾತಿ ಅಸಮಾನತೆಯನ್ನು, ಮಹಿಳೆಯರಾಗಿ ಲಿಂಗ ಅಸಮಾನತೆಯನ್ನು ಎದುರಿಸುತ್ತಿದ್ದಾರೆ. ಈ ಮೂರು ಬಗೆಯ ಅಸಮಾನತೆಗಳಿಗೆ ಪ್ರಾದೇಶಿಕ ಆಯಾಮವೂ ಇದೆ. ಹಿಂದುಳಿದ ಪ್ರದೇಶಗಳ ದಲಿತ ಮಹಿಳಾ ದುಡಿಮೆಗಾರರು ಅತ್ಯಂತ ಸಂಕೀರ್ಣವಾದ ದುಸ್ಥಿತಿಯನ್ನು ಅನುಭವಿಸುತ್ತಿದ್ದಾರೆ. ಈ ಬಗೆಯಲ್ಲಿ ಅನೇಕ ವಿಧದ ಅಸಮಾನತೆಗಳನ್ನು ಏಕಕಾಲದಲ್ಲಿ ಅನುಭವಿಸುವುದನ್ನು ಇಂಗ್ಲೀಷಿನಲ್ಲಿ 'ಇಂಟರ್‌ಸೆಕ್ಷನಾಲಿಟಿ' ಎಂದು ಕರೆಯುತ್ತಾರೆ. ಮಹಿಳೆಯರು ತಾವು 'ಮಹಿಳೆಯರು' ಅನ್ನುವ ಕಾರಣಕ್ಕೆ ಶೋಷಣೆ, ದಬ್ಬಾಳಿಕೆ, ತಾರತಮ್ಯ, ಪ್ರತ್ಯೇಕತನ ಮುಂತಾದವುಗಳನ್ನು ಏಕಕಾಲದಲ್ಲಿ, ವಿವಿಧ ಪ್ರಮಾಣದಲ್ಲಿ ಅನುಭವಿಸುತ್ತಿರುತ್ತಾರೆ. ಲಿಂಗ ತಾರತಮ್ಯವು ಜನಾಂಗ, ವರ್ಗ, ಬುಡಕಟ್ಟು, ಪ್ರದೇಶ, ಜಾತಿ, ವರ್ಣ, ಲಿಂಗ ಸಂಬಂಧಗಳು ಮುಂತಾದ ನೆಲೆಗಳಲ್ಲಿ ಏಕಕಾಲದಲ್ಲಿ ಕ್ರಿಯಾಶೀಲವಾಗುವ ಪ್ರಕ್ರಿಯೆಯನ್ನು 'ಪರಸ್ಪರ ಅಂತರ್-ಸಂಬಂಧಗಳು' ಎಂದು ಕರೆಯಬಹುದು. ಉದಾಹರಣೆಗೆ ದಲಿತ ಮಹಿಳೆಯು ಲಿಂಗ ತಾರತಮ್ಯವನ್ನು ಮಹಿಳೆ ಅನ್ನುವ ಕಾರಣಕ್ಕೆ, ಪ್ರತ್ಯೇಕತೆಯನ್ನು (ಅಸ್ಪೃಶ್ಯತೆಯನ್ನು) ದಲಿತಳು ಅನ್ನುವ ಕಾರಣಕ್ಕೆ, ಬಡತನವನ್ನು ಕೆಳವರ್ಗದವಳು-ಬಡವಳು ಅನ್ನುವ ಕಾರಣಕ್ಕೆ, ಅನ್ಯಾಯವನ್ನು-ತಾರತಮ್ಯಗಳನ್ನು ಅನಕ್ಷರಸ್ಥಳು ಅನ್ನುವ ಕಾರಣಕ್ಕೆ ಅನುಭವಿಸುತ್ತಿರುತ್ತಾಳೆ.

ತಾರತಮ್ಯ ಅನ್ನುವುದು ಯಾವುದೋ ಒಂದು ನೆಲೆಯಲ್ಲಿ ಅಥವಾ ಏಕಾಕಾರದಲ್ಲಿ ಸಂಭವಿಸುವ ಸಂಗತಿಯಲ್ಲ. ದಲಿತತನ, ಬಡತನ, ಅನಕ್ಷರತೆ, ಪ್ರತ್ಯೇಕತೆ, ಮಹಿಳಾತನ—ಎಲ್ಲವೂ ಏಕಕಾಲದಲ್ಲಿ ಸಂಭವಿಸುತ್ತಿರುವ ಪ್ರಕ್ರಿಯೆಯನ್ನು ಪರಸ್ಪರ ಅಂತರ್-ಸಂಬಂಧಗಳು ಎಂದು ಕರೆಯಲಾಗಿದೆ. ಈ ಪರಿಭಾವನೆಯಿಂದ ಕಲಿಯಬಹುದಾದ ಪಾಠವೇನೆಂದರೆ ಲಿಂಗ ಅಸಮಾನತೆಯನ್ನು ತೊಡೆಯಲು ಕ್ರಮಗಳನ್ನು ಬಹುಮುಖಿಯಾಗಿ ತೆಗೆದುಕೊಳ್ಳಬೇಕಾಗುತ್ತದೆ ಎಂಬುದಾಗಿದೆ. ಯಾವುದೋ ಒಂದು ನೆಲೆಯಲ್ಲಿ ಅದನ್ನು ಎದುರಿಸಿದರೆ ಅದರ ನಿವಾರಣೆ ಸಾಧ್ಯವಿಲ್ಲ. ಲಿಂಗ ಅಸಮಾನತೆ ಅನ್ನುವುದು ಕೇವಲ ಮಹಿಳೆ ಅನ್ನುವ ಕಾರಣಕ್ಕೆ ಮಾತ್ರ ಎಂದು ಸೀಮಿತ ನೆಲೆಯಲ್ಲಿ ಪರಿಭಾವಿಸಿಕೊಂಡರೆ ಸಮಸ್ಯೆಯ ಎಲ್ಲ ಮುಖಗಳನ್ನು ಅರ್ಥ ಮಾಡಿಕೊಳ್ಳುವುದು ಸಾಧ್ಯವಿಲ್ಲ.

ಮಹಿಳೆಯರನ್ನು ಕೇವಲ ಮಹಿಳೆಯರು ಎಂದೂ, 'ಒಂದು ವರ್ಗ' ಅಥವಾ 'ಸಾಮಾಜಿಕ ಗುಂಪು' ಅನ್ನುವ ರೀತಿಯಲ್ಲಿ ಪರಿಭಾವಿಸಿಕೊಳ್ಳುವುದು ಪರಿಮಿತ ವಿಶ್ಲೇಷಣೆಯಾಗುತ್ತದೆ. ಮಹಿಳೆಯರು ದಲಿತ ವರ್ಗಕ್ಕೆ ಸೇರಿದ್ದರೆ ಅವರ ಶೋಷಣೆಯ ಸ್ವರೂಪವು ದಲಿತೇತರ ಮೇಲ್ವರ್ಗದ ಮಹಿಳೆಯರ ಶೋಷಣೆಯ ನೆಲೆಗಿಂತ ಭಿನ್ನವಾಗಿರುತ್ತದೆ. ಮಹಿಳೆಯರ ದಲಿತತನಕ್ಕೆ ಬಡತನವೂ ಸೇರಿಕೊಂಡರೆ ಅದರ ಶೋಷಣೆಯ ಸ್ವರೂಪ ಮತ್ತೂ ಭಿನ್ನವಾಗಿರುತ್ತದೆ. ದಲಿತತನ ಮತ್ತು ಬಡತನಗಳಿಗೆ ಅನಕ್ಷರತೆಯೂ ಸೇರಿಕೊಂಡರೆ ಆಗ ಶೋಷಣೆಯ ಸ್ವರೂಪ, ತೀವ್ರತೆ, ಕಾಲಾವಧಿ ಪೂರ್ಣವಾಗಿ ಭಿನ್ನವಾಗಿರುತ್ತದೆ ಮತ್ತು ಸಹಿಸಲಾಧ್ಯವಾಗಿರುತ್ತದೆ. ಇಂಟರ್‌ಸೆಕ್ಷನಾಲಿಟಿ (Intersectionality) ಅನ್ನುವುದು ಇವೆಲ್ಲವನ್ನೂ ಸೂಚಿಸುವ ಪರಿಭಾವನೆಯಾಗಿದೆ. 'ಪರಸ್ಪರ ಅಂತರ್-ಸಂಬಂಧಗಳು' ಅನ್ನುವುದು ಲಿಂಗ ತಾರತಮ್ಯದ ಬಹುಮುಖಗಳನ್ನು ಅರ್ಥ ಮಾಡಿಕೊಳ್ಳಲು ಮತ್ತು ವಿಶ್ಲೇಷಿಸಲು ಬಳಸುವ ಒಂದು ಪರಿಭಾಷೆ. ಈ ಎಲ್ಲ ಸಂಗತಿಗಳು ಒಟ್ಟಿಗೆ ಸೇರಿ ಅಸಮಾನತೆಯನ್ನು ಅಸಹನೀಯವನ್ನಾಗಿ ಮಾಡುತ್ತಿರುತ್ತವೆ. ಲಿಂಗ ಅಸಮಾನತೆಯ ಮೇಲೆ ಒಟ್ಟಿಗೆ, ಏಕಕಾಲದಲ್ಲಿ ಪರಿಣಾಮ ಬೀರುವ ಈ ಎಲ್ಲ ಸಂಗತಿಗಳ ನಡುವಿನ ಸಂಬಂಧಗಳನ್ನು ಗುರುತಿಸುವ ಒಂದು ಕ್ರಮವೇ ಪರಸ್ಪರ ಅಂತರ್ ಸಂಬಂಧಗಳು. ಇದನ್ನು ಅರ್ಥ ಮಾಡಿಕೊಂಡರೆ ಲಿಂಗ ಅಸಮಾನತೆ ವಿರುದ್ಧ ಪರಿಣಾಮಕಾರಿಯಾದ ಕ್ರಮಗಳನ್ನು ತೆಗೆದುಕೊಳ್ಳಬಹುದು.

**ಕೋಷ್ಟಕ ೪.೧೩. ದುಡಿಮೆ ಸಹಭಾಗಿತ್ವ ಪ್ರಮಾಣ: ೨೦೧೧**

| | |
|---|---|
| ಒಟ್ಟು ಪುರುಷರ ದುಡಿಮೆ ಸಹಭಾಗಿತ್ವ ಪ್ರಮಾಣ | ಶೇ. ೫೯.೦೦ |
| ಒಟ್ಟು ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ | ಶೇ. ೩೧.೮೭ |
| ಶಿಷ್ಟ ಪುರುಷರ ದುಡಿಮೆ ಸಹಭಾಗಿತ್ವ ಪ್ರಮಾಣ | ಶೇ. ೫೯.೪೮ |
| ಶಿಷ್ಟ ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ | ಶೇ. ೨೯.೫೨ |
| ಪರಿಶಿಷ್ಟ ಪುರುಷರ ಸಹಭಾಗಿತ್ವ ಪ್ರಮಾಣ | ಶೇ. ೫೭.೪೪ |
| **ಪರಿಶಿಷ್ಟ ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ** | **ಶೇ. ೩೯.೧೫** |

**ಮೂಲ:** ಸೆನ್ಸಸ್ ಆಫ್ ಇಂಡಿಯಾ ೨೦೧೧. ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್, ಡೈರೆಕ್ಟೊರೇಟ್ ಆಫ್ ಸೆನ್ಸಸ್ ಆಫರೇಶನ್, ಬೆಂಗಳೂರು.

**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ದುಡಿಮೆ ಸಹಭಾಗಿತ್ವ ಪ್ರಮಾಣವನ್ನು ಶಿಷ್ಟರಿಗೆ ಮತ್ತು ಪರಿಶಿಷ್ಟರಿಗೆ ಪ್ರತ್ಯೇಕವಾಗಿ ಗಣನೆ ಮಾಡಲಾಗಿದೆ.

ದಲಿತರ ಸಂದರ್ಭದಲ್ಲಿ ಲಿಂಗ ಅಸಮಾನತೆ ಅನ್ನುವುದು ಏಕಾಕಾರದ ನಿರಂಕುಶ ಸಂಗತಿಯಲ್ಲ. ಅದು ಬಹುಮುಖಿ ಸಮಸ್ಯೆಯಾಗಿದೆ. ಲಿಂಗ ಅಸಮಾನತೆಯ ಮತ್ತೊಂದು ಸೂಚಿಯೆಂದರೆ ದುಡಿಮೆ ಸಹಭಾಗಿತ್ವ ಪ್ರಮಾಣ. ದುಡಿಮೆ ಸಹಭಾಗಿತ್ವದ ಶಿಷ್ಟ ಮತ್ತು ಪರಿಶಿಷ್ಟ ಆಯಾಮಗಳ

ವಿವರಗಳನ್ನು ಹಾಗೂ ಲಿಂಗ ಸಂಬಂಧಗಳ ಆಯಾಮವನ್ನು ಕೋಷ್ಟಕ ೧೦ರಲ್ಲಿ ನೀಡಿದೆ. ಈ ಕೋಷ್ಟಕ ೪.೧೩ರಲ್ಲಿ ನೀಡಿರುವ ವಿವರಗಳು ಕುತೂಹಲಕಾರಿಯಾಗಿವೆ. ಮೊದಲನೆಯದಾಗಿ ಇದು ದುಡಿಮೆ ಸಹಭಾಗಿತ್ವದಲ್ಲಿನ ಲಿಂಗ ಅಸಮಾನತೆಯನ್ನು ತೋರಿಸುತ್ತದೆ. ಎರಡನೆಯದಾಗಿ ಶಿಷ್ಟ ಮತ್ತು ಪರಿಶಿಷ್ಟ ದುಡಿಮೆಗಾರರ ನಡುವಿನ ದುಡಿಮೆ ಸಹಭಾಗಿತ್ವಕ್ಕೆ ಸಂಬಂಧಿಸಿದ ಅಸಮಾನತೆಯನ್ನು ಇದು ತೋರಿಸುತ್ತದೆ. ಪರಿಶಿಷ್ಟ ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣವು(ಶೇ. ೩೯.೧೫) ಒಟ್ಟು ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣಕ್ಕಿಂತ(ಶೇ. ೩೧.೮೭) ಅಧಿಕವಾಗಿದೆ. ದುಡಿಮೆ ಸಹಭಾಗಿತ್ವ ಅಧಿಕ ಮಟ್ಟದಲ್ಲಿರುವುದು ವಾಸ್ತವವಾಗಿ ಮಹಿಳೆಯರ ಸಬಲೀಕರಣದ ಸೂಚಿಯಾಗಿದೆ. ಇಲ್ಲಿ ಪರಿಶಿಷ್ಟ ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ ಅಧಿಕವಾಗಿದೆ. ಆದರೆ ಪರಿಶಿಷ್ಟ ಮಹಿಳೆಯರು ಯಾವ ಬಗೆಯ ದುಡಿಮೆ ಮಾಡುತ್ತಿದ್ದಾರೆ? ಅವರು ಯಾವ ವಲಯದಲ್ಲಿ ದುಡಿಯುತ್ತಿದ್ದಾರೆ? ಅವರ ಉದ್ಯೋಗದ ಲಕ್ಷಣಗಳು ಎಂದರೆ ಅದು ತಾತ್ಕಾಲಿಕ ಮತ್ತು ಇಲ್ಲಿನ ಉದ್ಯೋಗಗಳು ಅಸಂಘಟಿತ ವಲಯದಲ್ಲಿವೆ ಹಾಗೂ ಇಲ್ಲಿ ಯಾವುದೇ ಬಗೆಯ ಕಾರ್ಮಿಕ ಕಲ್ಯಾಣಕ್ಕೆ ಅವಕಾಶವಿಲ್ಲ. ಪರಿಶಿಷ್ಟ ಮಹಿಳೆಯರು ತೀವ್ರ ರೀತಿಯ ದುಡಿಮೆ ಒತ್ತಡವನ್ನು ಅನುಭವಿಸುತ್ತಿದ್ದಾರೆ. ಪರಿಶಿಷ್ಟ ಮಹಿಳೆಯರಿಗೆ ದುಡಿಮೆಯು ಅನಿವಾರ್ಯವಾಗಿದೆಯೇ ವಿನಃ ಅದು ಆಯ್ಕೆಯ ಸಂಗತಿಯಲ್ಲ. ಶಿಷ್ಟ ಮಹಿಳೆಯರ ಮತ್ತು ಪರಿಶಿಷ್ಟ ಮಹಿಳೆಯರ ನಡುವಿನ ದುಡಿಮೆ ಸಹಭಾಗಿತ್ವದಲ್ಲಿನ ಅಸಮಾನತೆಯು ಶೇ. ೯.೬೩ ಅಂಶಗಳಷ್ಟಿದೆ. ಪುರುಷರಿಗೆ ಸಂಬಂಧಿಸಿದಂತೆ ಶಿಷ್ಟ ಮತ್ತು ಪರಿಶಿಷ್ಟರಲ್ಲಿ ದುಡಿಮೆ ಸಹಭಾಗಿತ್ವ ಪ್ರಮಾಣ ಸರಿಸುಮಾರು ಸಮನಾಗಿದೆ. ಆದರೆ ಮಹಿಳೆಯರಿಗೆ ಸಂಬಂಧಿಸಿದಂತೆ ತೀವ್ರ ಅಸಮಾನತೆಯಿದೆ.

ಒಟ್ಟು ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣವು ಪುರುಷರ ದುಡಮೆ ಸಹಭಾಗಿತ್ವ ಪ್ರಮಾಣಕ್ಕಿಂತ ಏಕೆ ಕೆಳಮಟ್ಟದಲ್ಲಿದೆ? ಇದು ಕೂಡ ಲಿಂಗ ಅಸಮಾನತೆಯ ಸೂಚಿಯಾಗಿದೆ. ಮಹಿಳೆಯರ ಮನೆವಾರ್ತೆಯನ್ನು ದುಡಿಮೆಯೆಂದು ಪರಿಗಣಿಸುತ್ತಿಲ್ಲ. ಮಾರುಕಟ್ಟೆ ಪ್ರವೇಶಿಸುವ ಚಟುವಟಿಕೆಗಳನ್ನು ಮಾತ್ರ ದುಡಿಮೆಯೆಂದು ಪರಿಗಣಿಸಲಾಗುತ್ತದೆ. ಯಾವ ಚಟುವಟಿಕೆಗಳಿಗೆ ಹಣ ರೂಪದ ಮೌಲ್ಯವಿರುತ್ತದೋ ಅವುಗಳನ್ನು ಮಾತ್ರ ದುಡಿಮೆಯೆಂದು ಪರಿಗಣಿಸಲಾಗುತ್ತದೆ. ಮಹಿಳೆಯರು ನಿರ್ವಹಿಸುವ ಅನೇಕ ದುಡಿಮೆಗಳು ಮಾರುಕಟ್ಟೆ ಪ್ರವೇಶಿಸುವುದಿಲ್ಲ ಮತ್ತು ಅವುಗಳಿಗೆ ಹಣ ರೂಪದ ಮೌಲ್ಯವಿರುವುದಿಲ್ಲ. ಈ ಕಾರಣದಿಂದಾಗಿ ಮಹಿಳೆಯರು ದುಡಿಮೆ ಮಾರುಕಟ್ಟೆಯಲ್ಲಿ ಅಸಮಾನತೆಯನ್ನು ಅನುಭವಿಸುತ್ತಿದ್ದಾರೆ. ಅವರ ದುಡಿಮೆಯ ಬಹುಪಾಲು ಅಂಶ ಸಂಗೋಪನಾ ಸ್ವರೂಪದಲ್ಲಿರುತ್ತದೆ ವಿನಃ ಸಂಪಾದನಾ ಸ್ವರೂಪದಲ್ಲಿರುವುದಿಲ್ಲ. ಸಾಕ್ಷರತೆಗೆ ಸಂಬಂಧಿಸಿದಂತೆ ಲಿಂಗ ಅಸಮಾನತೆಯಿದೆ ಮತ್ತು ಜಾತಿ ಅಸಮಾನತೆಯಿದೆ. ಕೂಲಿಗೆ ಸಂಬಂಧಿಸಿದಂತೆ ಲಿಂಗ ಅಸಮಾನತೆಯಿದೆ ಮತ್ತು ಜಾತಿ ಅಸಮಾನತೆಯಿದೆ. ಉದ್ಯೋಗಕ್ಕೆ ಸಂಬಂಧಿಸಿದಂತೆ ಲಿಂಗ ಅಸಮಾನತೆಯಿದೆ ಮತ್ತು ಜಾತಿ ಅಸಮಾನತೆಯಿದೆ. ವಸತಿಗೆ ಸಂಬಂಧಿಸಿದಂತೆ ಲಿಂಗ ಮತ್ತು ಜಾತಿ ಅಸಮಾನತೆಯಿದೆ. ಆಸ್ತಿಗೆ ಸಂಬಂಧಿಸಿದಂತೆ ಲಿಂಗ ಅಸಮಾನತೆಯಿದೆ ಮತ್ತು ಜಾತಿ

ಅಸಮಾನತೆಯಿದೆ. ಒಟ್ಟಾರೆ ಹೇಳಬೇಕೆಂದರೆ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ತರದಲ್ಲಿರುವವರು ಯಾರೆಂದರೆ ದಲಿತ ಮಹಿಳೆಯರು.

**೪.೩.೭.೧ ಲಿಂಗ ಅನುಪಾತ: ಶಿಷ್ಟರು ಮತ್ತು ಪರಿಶಿಷ್ಟರು.**

ಅಮರ್ತ್ಯ ಸೇನ್ ಪ್ರಕಾರ ಲಿಂಗ ಅಸಮಾನತೆಯ ಖಚಿತ ಸೂಚಿಯೆಂದರೆ ಲಿಂಗ ಅನುಪಾತ. ಲಿಂಗ ಅನುಪಾತ ಸಾವಿರಕ್ಕಿಂತ ಅಧಿಕವಾಗಿರಬೇಕು ಎಂದು ಹೇಳಲಾಗಿದೆ. ಒಂದು ಸಮಾಜದಲ್ಲಿ ಮಹಿಳೆಯರು ಪುರುಷರಿಗೆ ಸಮಾನವಾದ ಅವಕಾಶಗಳನ್ನು ಅನುಭವಿಸುತ್ತಿದ್ದರೆ ಅಲ್ಲಿ ಲಿಂಗ ಅನುಪಾತ ಸಾವಿರಕ್ಕಿಂತ ಅಧಿಕವಾಗಿರಬೇಕು. ಲಿಂಗ ಅನುಪಾತದ ದೃಷ್ಟಿಯಿಂದ ೨೦೧೧ರಲ್ಲಿ ಪರಿಶಿಷ್ಟರ ಸ್ಥಿತಿಯು ಶಿಷ್ಟರ ಸ್ಥಿತಿಗಿಂತ ಉತ್ತಮವಾಗಿದೆ. ಒಟ್ಟು ಜನಸಂಖ್ಯೆಯಲ್ಲಿ ಲಿಂಗ ಅನುಪಾತ ೯೭೩. ಆದರೆ ಶಿಷ್ಟರಲ್ಲಿ ಅದು ೯೬೮ರಷ್ಟಿದ್ದರೆ ಪರಿಶಿಷ್ಟರಲ್ಲಿ ಅದು ೯೯೦ರಷ್ಟಿದೆ. ಇದನ್ನು ಪರಿಶಿಷ್ಟರಲ್ಲಿ ಲಿಂಗ ಸಮಾನತೆಯ ಸೂಚಿಯನ್ನಾಗಿ ಬಳಸಲು ಬರುವುದಿಲ್ಲ. ಲಿಂಗ ಅನುಪಾತವು ಶಿಷ್ಟರಲ್ಲಿರುವುದಕ್ಕಿಂತ ಪರಿಶಿಷ್ಟರಲ್ಲಿ ಉತ್ತಮವಾಗಿದೆ, ನಿಜ. ಆದರೆ ಈ ಉತ್ತಮ ಸೂಚಿಯು ಪರಿಶಿಷ್ಟ ಮಹಿಳೆಯರು ಉಳಿದ ಸಂಗತಿಗಳಿಗೆ ಸಂಬಂಧಿಸಿದಂತೆ ಅನುಭವಿಸುತ್ತಿರುವ ವಿಕಲತೆ ಮತ್ತು ಅಸಮಾನತೆಗಳಿಂದ ಉಂಟಾಗಬಹುದಾದ ದುಸ್ಥಿತಿಯನ್ನು ಸರಿದೂಗಿಸಲಾರದು.

ಅನೇಕ ಅಧ್ಯಯನಗಳು ದಾಖಲಿಸಿರುವಂತೆ ಕುಟುಂಬಗಳಲ್ಲಿ ಪರಿಶಿಷ್ಟ ಮಹಿಳೆಯರು ಶಿಷ್ಟ ಮಹಿಳೆಯರಿಗಿಂತ ಹೆಚ್ಚಿನ ಸ್ವಾತಂತ್ರ್ಯವನ್ನು ಪಡೆದಿರುತ್ತಾರೆ. ಅವರು ಮನೆಯಿಂದ ಹೊರಗೆ ಹೆಚ್ಚು ದುಡಿಯುವುದರಿಂದ ಅವರು ಸ್ವಲ್ಪಮಟ್ಟಿಗೆ ತಮ್ಮ ಅಧಿಕಾರವನ್ನು ಕುಟುಂಬದ ಚೌಕಟ್ಟಿನಲ್ಲಿ ಚಲಾಯಿಸಬಲ್ಲವರಾಗಿದ್ದಾರೆ. ಇಂತಹ ಕುಟುಂಬಗಳಲ್ಲಿ ಲಿಂಗ ತಾರತಮ್ಯ ತೀವ್ರವಾಗಿರುವುದಿಲ್ಲ. ಪರಿಶಿಷ್ಟರಲ್ಲಿ ಹೆಣ್ಣುಮಕ್ಕಳನ್ನು ಗಂಡು ಮಕ್ಕಳಷ್ಟೇ ಪ್ರೀತಿಯಿಂದ ಪೋಷಿಸುತ್ತಾರೆ. ಈ ಕಾರಣದಿಂದ ಲಿಂಗ ಅನುಪಾತ ಪರಿಶಿಷ್ಟ ಮಹಿಳೆಯರಲ್ಲಿ ಶಿಷ್ಟರ ಮಹಿಳೆಯರಲ್ಲಿ ಇರುವುದಕ್ಕಿಂತ ಅಧಿಕವಾಗಿದೆ. ಮಕ್ಕಳ ಲಿಂಗ ಅನುಪಾತಕ್ಕೆ (೦-೬ ವಯೋಮಾನ) ಸಂಬಂಧಿದಂತೆಯೂ ಪರಿಶಿಷ್ಟರ ಸ್ಥಿತಿಯು ಶಿಷ್ಟರ ಸ್ಥಿತಿಗಿಂತ ಉತ್ತಮವಾಗಿದೆ. ಒಟ್ಟು ಮಕ್ಕಳ ಲಿಂಗ ಅನುಪಾತ ಕರ್ನಾಟಕದಲ್ಲಿ ೯೪೮ರಷ್ಟಿದ್ದರೆ ಶಿಷ್ಟರಲ್ಲಿ ಅದು ೯೪೩ರಷ್ಟಿದೆ. ಆದರೆ ಪರಿಶಿಷ್ಟರಲ್ಲಿನ ೦-೬ ವಯೋಮಾನದ ಮಕ್ಕಳ ಲಿಂಗ ಅನುಪಾತ ೯೬೩ರಷ್ಟಿದೆ.

**೪.೩.೮ ಬಡತನದ ರೇಖೆ: ಸಾಮಾಜಿಕ ಗುಂಪುಗಳು**

ಬಡತನದ ಪ್ರಮಾಣವು ಸಾಮಾನ್ಯ ಜನವರ್ಗದಲ್ಲಿರುವುದಕ್ಕಿಂತ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಲ್ಲಿ ಅಧಿಕವಾಗಿದೆ. ಇದನ್ನು ಕೋಷ್ಟಕ ೪.೧೪ರಲ್ಲಿ ಮಂಡಿಸಿದೆ. ಒಟ್ಟು ಜನವರ್ಗದಲ್ಲಿ ಬಿಪಿಎಲ್ ಕುಟುಂಬಗಳ ಪ್ರಮಾಣ ಗ್ರಾಮೀಣ ಪ್ರದೇಶದಲ್ಲಿ ೨೦೦೪-೦೫ರಲ್ಲಿ ಶೇ. ೩೭.೪೯ರಷ್ಟಿದ್ದರೆ ಅದು ೨೦೧೧-೧೨ರಲ್ಲಿ ಶೇ. ೨೪.೫೩ಕ್ಕಿಳಿದಿದೆ. ಇದೇ ರೀತಿಯಲ್ಲಿ ಪ.ಜಾ. ಕುಟುಂಬಗಳಲ್ಲಿ ಬಡ ಕುಟುಂಬಗಳ ಪ್ರಮಾಣ ೨೦೦೪-೦೫ರಲ್ಲಿ ಶೇ. ೫೭.೩೭ರಷ್ಟಿದ್ದುದು

೨೦೧೧-೧೨ರಲ್ಲಿ ಶೇ.೩೭.೦೬ ರಷ್ಟಾಗಿದ್ದರೆ ಪ.ಪಂ.ಗಳಲ್ಲಿ ಇದು ಶೇ. ೫೦.೫೩ರಿಂದ ಶೇ. ೩೦.೮೧ರಷ್ಟಕ್ಕೆ ಕಡಿಮೆಯಾಗಿದೆ. ಒಬಿಸಿಗಳಲ್ಲಿ ಬಡತನದ ಪ್ರಮಾಣ ಇದೇ ಕಾಲಾವಧಿಯಲ್ಲಿ ಶೇ. ೩೫.೮೫ರಿಂದ ಶೇ. ೨೦.೭೫ಕ್ಕಿಳಿದಿದೆ. ಇತರ ವರ್ಗಗಳಲ್ಲಿ ಬಿಪಿಎಲ್ ಕುಟುಂಬಗಳ ಪ್ರಮಾಣ ೨೦೦೪-೦೫ರಲ್ಲಿ ಗ್ರಾಮೀಣ ಪ್ರದೇಶದಲ್ಲಿ ಶೇ. ೨೩.೭೨ರಿಂದ ಶೇ. ೨೧.೬೨ಕ್ಕಿಳಿದಿದೆ.

ಇದಕ್ಕೆ ಪ್ರತಿಯಾಗಿ ನಗರ ಪ್ರದೇಶಗಳಲ್ಲಿ ಪ.ಪಂ. ಬಿಟ್ಟರೆ ಉಳಿದ ಎಲ್ಲ ಸಾಮಾಜಿಕ ಗುಂಪುಗಳಲ್ಲಿಯೂ ಬಡತನದ ಪ್ರಮಾಣ ಗ್ರಾಮೀಣ ಪ್ರದೇಶದಲ್ಲಿರುವುದಕ್ಕಿಂತ ಕೆಳಮಟ್ಟದಲ್ಲಿದೆ. ಆದರೆ ಪ.ಪಂ.ಕ್ಕೆ ಸಂಬಂಧಿಸಿದಂತೆ ೨೦೦೪-೦೫ರಲ್ಲಿ ಗ್ರಾಮೀಣ ಪ್ರದೇಶದಲ್ಲಿ ಬಡ ಕುಟುಂಬಗಳ ಪ್ರಮಾಣ ಶೇ. ೫೦.೫೩ರಷ್ಟಿದ್ದರೆ ನಗರ ಪ್ರದೇಶದಲ್ಲಿ ಅದು ಶೇ. ೫೫.೭೦ರಷ್ಟಿದೆ. ಇದೇ ರೀತಿಯಲ್ಲಿ ೨೦೧೧-೧೨ರಲ್ಲಿ ಇದು ಕ್ರಮವಾಗಿ ಶೇ. ೩೦.೮೧ ಮತ್ತು ಶೇ. ೩೩.೯೯ರಷ್ಟಿದೆ.

**ಕೋಷ್ಟಕ ೪.೧೪. ಸಾಮಾಜಿಕ ಗುಂಪುವಾರು ಬಡತನ ರೇಖೆ ಕೆಳಗೆ ಜೀವಿಸುತ್ತಿರುವ ಕುಟುಂಬಗಳ ಶೇಕಡ ಪ್ರಮಾಣ: ೨೦೦೪-೦೫ ಮತ್ತು ೨೦೧೧-೧೨**

| ಕ್ರ.ಸಂ. | ಸಾಮಾಜಿಕ ಗುಂಪುಗಳು | ೨೦೦೪-೦೫ | | ೨೦೧೧-೧೨ | |
|---|---|---|---|---|---|
| | | ಗ್ರಾಮೀಣ | ನಗರ | ಗ್ರಾಮೀಣ | ನಗರ |
| ೧ | ಒಟ್ಟು | ೩೭.೪೯ | ೨೫.೮೮ | ೨೪.೫೩ | ೧೫.೨೯ |
| ೨ | ಪ.ಜಾ. | ೫೩.೩೭ | ೪೧.೨೨ | ೩೭.೦೬ | ೨೪.೯೬ |
| ೩ | ಪ.ಪಂ. | ೫೦.೫೩ | ೫೫.೭೦ | ೩೦.೮೧ | ೨೩.೯೯ |
| ೪ | ಒಬಿಸಿ | ೩೫.೮೫ | ೩೨.೧೪ | ೨೦.೭೫ | ೧೫.೦೯ |
| ೫ | ಇತರೆ | ೩೭.೪೯ | ೧೪.೩೧ | ೨೪.೫೩ | ೮.೭೭ |

**ಮೂಲ:** ಎನ್ ಎಸ್ ಎಸ್ ಒ ದತ್ತಾಂಶ

ಒಟ್ಟಾರೆ ಎಲ್ಲ ವರ್ಗಗಳಲ್ಲಿಯೂ ಬಡ ಕುಟುಂಬಗಳ ಪ್ರಮಾಣ ೨೦೦೪-೦೫ರಿಂದ ೨೦೧೧-೧೨ರ ಅವಧಿಯಲ್ಲಿ ಕಡಿಮೆಯಾಗಿದೆ. ಆದರೆ ಇದು ಇತರೆ ಜನವರ್ಗದಲ್ಲಿ ಇದರ ಪ್ರಮಾಣ ಅತ್ಯಂತ ಕೆಳಮಟ್ಟದಲ್ಲಿದೆ. ಉದಾಹರಣೆಗೆ ೨೦೧೧-೧೨ರಲ್ಲಿ ಇತರೆ ಜನವರ್ಗದಲ್ಲಿ ಬಡ ಕುಟುಂಬಗಳ ಪ್ರಮಾಣ ಗ್ರಾಮೀಣ ಪ್ರದೇಶದಲ್ಲಿ ಶೇ. ೨೧.೬೨ರಷ್ಟಿದ್ದರೆ ನಗರ ಪ್ರದೇಶದಲ್ಲಿ ಇದು ಕೇವಲ ಶೇ. ೮.೭೭. ಪ.ಜಾ. ಮತ್ತು ಪ.ಪಂ.ಗಳಲ್ಲಿ ಬಡತನದ ತೀವ್ರತೆಯು ೨೦೧೧-೧೨ರಲ್ಲಿ ಉಳಿದ ಜನವರ್ಗದಲ್ಲಿರುವುದಕ್ಕಿಂತ ಅಧಿಕವಾಗಿದೆ.

### ೪.೩.೯. ಸಾಮಾಜಿಕ ಗುಂಪುಗಳ ಕುಟುಂಬ ಘಟಕವಾರು ತಲಾ ಮಾಸಿಕ ಅನುಭೋಗ ವೆಚ್ಚ: ೨೦೦೯–೨೦೧೦

ಎನ್‌ಎಸ್‌ಎಸ್ ಸಂಸ್ಥೆಯು ಪ್ರತಿ ಐದು ವರ್ಷಗಳಿಗೊಮ್ಮೆ ಅನುಭೋಗ ವೆಚ್ಚಕ್ಕೆ ಸಂಬಂಧಿಸಿದಂತೆ ಸಮೀಕ್ಷೆಯನ್ನು ನಡೆಸುತ್ತದೆ. ಈ ವರದಿಗಳಲ್ಲಿ ನಮಗೆ ಕುಟುಂಬವಾರು ಅನುಭೋಗ ವೆಚ್ಚದ ವಿವರಗಳು ದೊರೆಯುತ್ತವೆ. ಕೋಷ್ಟಕ ೪.೧೫ರಲ್ಲಿ ಸಾಮಾಜಿಕ ಗುಂಪುಗಳಿಗೆ ಸಂಬಂಧಿಸಿದಂತೆ ಮಾಸಿಕ ಅನುಭೋಗ ವೆಚ್ಚದ ವಿವರಗಳನ್ನು ನೀಡಲಾಗಿದೆ. ಇದು ಕುಟುಂಬವಾರು ಅನುಭೋಗ ವೆಚ್ಚ (ಇದು ವ್ಯಕ್ತಿವಾರು ಅನುಭೋಗ ವೆಚ್ಚವಲ್ಲ). ಇಲ್ಲಿರುವ ಒಂದು ವಿಶಿಷ್ಟತೆಯನ್ನು ಗುರುತಿಸಬೇಕು. ಒಟ್ಟು ಜನಸಂಖ್ಯೆಗೆ ಸಂಬಂಧಿಸಿದ ಕುಟುಂಬ ಘಟಕಗಳು ಮತ್ತು ಪರಿಶಿಷ್ಟ ಕುಟುಂಬ ಘಟಕಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ಅಸಮಾನತೆಯಿಲ್ಲ(ಅಂಕಣ ೬ ಮತ್ತು ೨ ಹಾಗೂ ಅಂಕಣ ೬ ಮತ್ತು ಅಂಕಣ ೩ಗಳಲ್ಲಿನ ವ್ಯತ್ಯಾಸ).

**ಕೋಷ್ಟಕ ೪.೧೫. ಸಾಮಾಜಿಕ ಗುಂಪುವಾರು ಸರಾಸರಿ ಕುಟುಂಬ ಮಾಸಿಕ ತಲಾ ಅನುಭೋಗ ವೆಚ್ಚ(ರೂಪಾಯಿಗಳಲ್ಲಿ)**

| ವಿವರಗಳು | ಪ. ಜಾ. | ಪ. ಪಂ. | ಒಬಿಸಿಗಳು | ಇತರೆ | ಒಟ್ಟು |
|---|---|---|---|---|---|
| ೧ | ೨ | ೩ | ೪ | ೫ | ೬ |
| ಗ್ರಾಮೀಣ ಪ್ರದೇಶ | | | | | |
| ಭಾರತ | ರೂ. ೯೩೯ | ರೂ. ೮೭೩ | ರೂ. ೧೦೩೬ | ರೂ. ೧೨೮೧ | ರೂ. ೧೦೫೪ |
| ಕರ್ನಾಟಕ | ರೂ. ೯೩೪ | ರೂ. ೯೦೧ | ರೂ. ೧೦೨೧ | ರೂ. ೧೧೨೧ | ರೂ. ೧೦೨೦ |
| ನಗರ ಪ್ರದೇಶ | | | | | |
| ಭಾರತ | ರೂ. ೧೪೪೪ | ರೂ. ೧೭೯೭ | ರೂ. ೧೬೭೯ | ರೂ. ೨೪೬೭ | ರೂ. ೧೯೮೪ |
| ಕರ್ನಾಟಕ | ರೂ. ೧೬೩೭ | ರೂ. ೧೨೧೬ | ರೂ. ೧೯೫೫ | ರೂ. ೨೩೫೧ | ರೂ. ೨೦೫೩ |

**ಮೂಲ:** ಭಾರತ ಸರ್ಕಾರ, ಎನ್.ಎಸ್.ಎಸ್. ೬೬ನೆಯ ಸುತ್ತಿನ ವರದಿ. ಜುಲೈ ೨೦೦೯–ಜೂನ್ ೨೦೧೦

ಇಲ್ಲಿ ಅಸಮಾನತೆ ಸರಾಸರಿ ರೂ. ೨೦೦ರ ಒಳಗಿದೆ. ಆದರೆ ಪರಿಶಿಷ್ಟ ಕುಟುಂಬಗಳು ಮತ್ತು ಇತರೆ (ಶಿಷ್ಟರುಗಳ) ಕುಟುಂಬ ಘಟಕಗಳ ನಡುವೆ ಅಸಮಾನತೆಯು ತೀವ್ರವಾಗಿದೆ (ಅಂಕಣ ೫ ಮತ್ತು ಅಂಕಣ ೨ ಹಾಗೂ ಅಂಕಣ ೬ ಮತ್ತು ಅಂಕಣ ೩ ನಡುವಿನ ವ್ಯತ್ಯಾಸ). ಇಲ್ಲಿ ಅಸಮಾನತೆಯು ರೂ. ೨೦೦ಕ್ಕಿಂತ ಅಧಿಕವಾಗಿದೆ. ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿ ಕನಿಷ್ಠ ಮಾಸಿಕ ಅನುಭೋಗ ವೆಚ್ಚ ಪ.ಪಂ.ಗಳಲ್ಲಿದ್ದರೆ ಗರಿಷ್ಠ ಇತರೆ ಕುಟುಂಬ ಘಟಕಗಳಲ್ಲಿದೆ. ನಗರ ಪ್ರದೇಶದಲ್ಲಿ ಕನಿಷ್ಠ ಮಾಸಿಕ ಅನುಭೋಗ ವೆಚ್ಚವು ಪ.ಜಾ.ಯಲ್ಲಿದ್ದರೆ ಗರಿಷ್ಠ ಇತರೆ ಜನವರ್ಗದಲ್ಲಿದೆ.

ಈ ಭಾಗದಲ್ಲಿ ದಲಿತರ ಪ್ರಸ್ತುತ ಸಾಮಾಜಿಕ–ಆರ್ಥಿಕ ಸ್ಥಿತಿಗತಿಗಳನ್ನು ೯ ವಿವಿಧ ಆಯಾಮಗಳಲ್ಲಿ ಗುರುತಿಸಲಾಗಿದೆ. ಅವರ ಅಭಿವೃದ್ಧಿಯ ಮುಂದಿನ ದಾರಿಯ ಬಗ್ಗೆ ಕೆಲವು ಸಂಗತಿಗಳನ್ನು

ಪ್ರಬಂಧದ ಭಾಗ ೨ರಲ್ಲಿ ಚರ್ಚಿಸಲಾಗಿದೆ. ವಾಸ್ತವವಾಗಿ ಭಾಗ ೧ರಲ್ಲಿನ ವಿಶ್ಲೇಷಣೆಯಿಂದ ಪರಿಶಿಷ್ಟರ ಅಭಿವೃದ್ಧಿಯ ದಾರಿ ಯಾವುದಿರಬೇಕು ಎಂಬುದರ ಸೂಚನೆಯು ದೊರೆಯುತ್ತದೆ. ಇದು ವರಮಾನ ಬೆಳವಣಿಗೆಯಿಂದ ಮಾತ್ರ ಪರಿಹಾರವಾಗುವ ಸಮಸ್ಯೆಯಲ್ಲ. ಇದಕ್ಕೆ ಪ್ರಜ್ಞಾಪೂರ್ವಕ ಪ್ರಯತ್ನ ನಡೆಸಬೇಕಾಗುತ್ತದೆ. ಇದು ತನ್ನಷ್ಟಕ್ಕೆ ನಡೆಯುವ ಸಂಗತಿಯಲ್ಲ.

### ೪.೪. ದಲಿತರ ಅಭಿವೃದ್ಧಿಯ ಸಂವಿಧಾನಾತ್ಮಕ ನೆಲೆಗಳು

> "I feel that it is workable, it is flexible and it is strong enough to hold the country together both in peace time and in war time, indeed, it I may say so it things wrong under the new constitution the reason will not be that we hard a bewl constitution. What we will have to say is that man was vile"
>
> Dr. B.R. Ambedkar, Chairman,
> Drafting committee Of the constitution Assembly.

ಭಾರತೀಯ ಸಂವಿಧಾನದ ಮೂಲಭೂತ ಹಕ್ಕುಗಳು, ಕರ್ತವ್ಯಗಳಂತೆ ರಾಜನೀತಿ ನಿರ್ದೇಶಕ ತತ್ವಗಳು ಅಷ್ಟೇ ಮುಖ್ಯ ಪಾತ್ರವಹಿಸಿವೆ. ಅದರಲ್ಲಿ ಮುಖ್ಯವಾದ ಸಂಗತಿಯೆಂದರೆ ಕಲ್ಯಾಣ ರಾಜ್ಯ ಅಥವಾ ಸಮಾಜವಾದ ತತ್ವಗಳು ಅಂದರೆ ಜನರು ಲಿಂಗ-ಬೇಧವಿಲ್ಲದೆ ಜಾತಿ ಬೇದವಿಲ್ಲದೆ, ವರ್ಗಬೇಧವಿಲ್ಲದೆ, ಧರ್ಮ ಬೇಧವಿಲ್ಲದೆ, ಪ್ರಾದೇಶಿಕ ಬೇಧವಿಲ್ಲದೆ, ಭಾಷೆ ಬೇಧವಿಲ್ಲದೆ ಬಡವ ಬಲ್ಲಿದ ಬಗ್ಗೆ ಯಾವ ತಾರತಮ್ಯ ತೋರದೆ ಕಲ್ಯಾಣ ಮತ್ತು ಸಮಾಜವಾದ ನೆಲೆಯನ್ನು ಎಲ್ಲರೂ ಸಮಾನವಾಗಿ ಬದುಕಿನ ನೆಲೆ ಕಂಡುಕೊಂಡು ಸುಖೀ ಮತ್ತು ಅಭಿವೃದ್ಧಿಯ ಜೀವನಕ್ಕೆ ಆಸರೆ ಯಾಗಿರಬೇಕೆಂದು ಇದರ ಆಶಯವಾಗಿದೆ. ಆದರೆ ಅದು ಇಂದು ಏನು ಆಗಿದೆ ಆಂದರೆ ಬಹುದೊಡ್ಡ ಸಮುದಾಯವು ಸಂವಿಧಾನಾತ್ಮಕ ರಕ್ಷಣೆಯಿದ್ದರೂ ಇಲ್ಲದಂಥ ಪರಿಸ್ಥಿತಿಗೆ ಕಾರಣವಾಗಿರುವ ಅಂಶಗಳನ್ನು ಕಾಣುವ ಸ್ಥಿತಿಗೆ ಬಂದಿದೆ.

೩ನೇ ಪರಿಚ್ಛೇದದ ಪ್ರಕಾರ ಆರ್ಥಿಕ, ಸಾಮಾಜಿಕ, ರಾಜಕೀಯ ನ್ಯಾಯವನ್ನು ಅಧ್ಯಾಯ ೪ರಲ್ಲಿ ಸೌಲಭ್ಯಗಳನ್ನು ಮತ್ತು ಅವಕಾಶಗಳಲ್ಲಿ ಅಸಮಾನತೆಯನ್ನು ಹೋಗಲಾಡಿಸಬೇಕೆಂದು ಹೇಳುತ್ತದೆ. ೩೯ನೇ ಪರಿಚ್ಛೇದದ ಪ್ರಕಾರ ಕಾರ್ಮಿಕರ ಮತ್ತು ಮಕ್ಕಳ ಆರೋಗ್ಯವನ್ನು ರಕ್ಷಿಸಬೇಕು. ಬಲತ್ಕಾರದ ಮೂಲಕ ಕೆಲಸಕ್ಕೆ ಒತ್ತಾಯಿಸುವಂತಿಲ್ಲ ಎಂದು ಹೇಳುತ್ತದೆ. ಸ್ತ್ರೀ-ಪುರುಷರು ತಮ್ಮ ಜೀವನೋಪಾಯವನ್ನು ನಡೆಸಲು ಸಮಾನತೆ ಒದಗಿಸುವುದು.

೩೯ಎ ಪರಿಚ್ಛೇದದ ಪ್ರಕಾರ ಬಡವರಿಗೆ ಉಚಿತ ಕಾನೂನಿನ ನೆರವು ನೀಡುವುದು ರಾಜ್ಯದ ಕರ್ತವ್ಯವೆಂದು ಹೇಳಲಾಗಿದೆ. ೪೧ನೇ ಪರಿಚ್ಛೇದ ಪ್ರಕಾರ ಉದ್ಯೋಗಕ್ಕೆ ಸಂಬಂಧಪಟ್ಟಂತೆ, ಕೆಲಸದ ಹಕ್ಕು, ಶಿಕ್ಷಣ ನೆರವು, ವಯೋವೃದ್ಧರಿಗೆ, ಅನಾರೋಗ್ಯದಿಂದ ಬಳಲುವವರಿಗೆ, ಅಸಮರ್ಥರಿಗೆ, ಅಂಗವಿಕಲರಿಗೆ, ಸಹಾಯಧನ, ಸಹಕಾರ, ಅವಕಾಶಗಳನ್ನು ನೀಡಬೇಕೆಂದು ಹೇಳಲಾಗಿದೆ.

೪೨ನೇ ಪರಿಚ್ಛೇದ ಪ್ರಕಾರ ಪ್ರಾಮಾಣಿಕತೆಯ ಆಧಾರದ ಮೇಲೆ ಬಾಣಂತಿಯರಿಗೆ ಪ್ರಸೂತಿ ಪರಿಹಾರವನ್ನು ದೊರಕಿಸಿಕೊಡಬೇಕೆಂದು ಹೇಳುತ್ತದೆ. ೪೩ನೇ ಪರಿಚ್ಛೇದ ಪ್ರಕಾರ ಕಾರ್ಖಾನೆಗಳಲ್ಲಿ ದುಡಿಯುವ ರೈತರಿಗೆ, ಕೂಲಿ ಕಾರ್ಮಿಕರಿಗೆ ನಿಯಮಬದ್ಧವಾದ ಕೆಲಸ, ಉತ್ತಮ ಜೀವನಮಟ್ಟ, ಸಾಂಸ್ಕೃತಿಕ ಅವಕಾಶಗಳನ್ನು ನೀಡಬೇಕೆಂದು ಹೇಳುತ್ತದೆ. ಹಾಗೂ ಕಾರ್ಖಾನೆಗಳಲ್ಲಿ ದುಡಿಯುವ, ಭಾಗವಹಿಸುವ ಹಕ್ಕು ಇದೆಯೆಂದು ಹೇಳುತ್ತದೆ. ೪೩ನೇ ಪರಿಚ್ಛೇದ ಪ್ರಕಾರ ಕಾರ್ಖಾನೆಗಳಲ್ಲಿ ದುಡಿಯುವ ಕೂಲಿ ಕಾರ್ಮಿಕರಿಗೆ ನಿಯಮಬದ್ಧವಾದ ಕೆಲಸ, ಉತ್ತಮ ಜೀವನಮಟ್ಟ ಸಾಂಸ್ಕೃತಿಕ ಅವಕಾಶಗಳನ್ನು ನೀಡಬೇಕೆಂದು ಹೇಳುತ್ತದೆ. ಹಾಗೂ ಕಾರ್ಖಾನೆಗಳಲ್ಲಿ ಭಾಗವಹಿಸುವ ಹಕ್ಕು ಎಲ್ಲರಿಗೂ ಇದೆಯೆಂದು ಹೇಳುತ್ತದೆ.

೪೬ನೇ ಪರಿಚ್ಛೇದ ಪ್ರಕಾರ ಪರಿಶಿಷ್ಟ ಜಾತಿಯವರಿಗೆ ಹಿಂದುಳಿದ ವರ್ಗದವರಿಗೆ ಮುಕ್ತಿಗೊಳಿಸಿ ಅವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಅವಕಾಶಗಳನ್ನು ಉತ್ತಮಪಡಿಸಿಕೊಳ್ಳಬೇಕೆಂದು ಹೇಳಲಾಗಿದೆ. ೪೭ನೇ ಪರಿಚ್ಛೇದದ ಪ್ರಕಾರ ಜನರ ಜೀವನ ಮಟ್ಟವನ್ನು ಉತ್ತಮಪಡಿಸುವುದಲ್ಲದೆ, ಒಳ್ಳೆಯ ಆಹಾರವನ್ನು ನೀಡಿ ಅವರ ಆರೋಗ್ಯವನ್ನು ಸುಧಾರಿಸುವುದು ರಾಜ್ಯದ ಕರ್ತವ್ಯವೆಂದು ತಿಳಿಸಲಾಗಿದೆ.

೩೯(ಡಿ) ಪರಿಚ್ಛೇದದ ಪ್ರಕಾರ ಪುರುಷರಿಗೆ ಮತ್ತು ಸ್ತ್ರೀಯರಿಗೆ " ಸಮಾನ ಕೆಲಸಕ್ಕೆ ಸಮಾನ ವೇತನವನ್ನು ನೀಡುವುದು" ೩೯(ಇಎಫ್) ಪರಿಚ್ಛೇದದ ಪ್ರಕಾರ ಮಕ್ಕಳ ಶೋಷಣೆಯಾಗದಂತೆ ನೋಡಿಕೊಳ್ಳುವುದು ಜನರ ಒಳಿತಿಗಾಗಿ ಜನಸಮೂಹಕ್ಕೆ ಆರ್ಥಿಕ ಮತ್ತು ಭೌತಿಕ ಸಂಪನ್ಮೂಲಗಳನ್ನು ಒದಗಿಸುವುದು ಈ ಮೇಲಿನ ಎಲ್ಲವುಗಳನ್ನು ನಾಗರಿಕರಿಗೆ ಪರಿಹಾರ ಇಲ್ಲದೆ ಹಕ್ಕುಗಳೆಂದು ತಿಳಿಸಲಾಗಿದೆ. ಆ ಕಾರಣದಿಂದ ರಾಜ್ಯದ ಯಾವುದೇ ಪಕ್ಷದ ಸರಕಾರಗಳು ಅಧಿಕಾರಕ್ಕೆ ಬಂದರೆ ದುರ್ಬಲರ, ದಲಿತರ ಮತ್ತು ಹಿಂದುಳಿದವರ ಹಿತ ಕಾಯುವುದರಿಂದ ಅಭಿವೃದ್ಧಿಯಿಂದ ವಂಚಿತರಾದವರನ್ನು ಅಭಿವೃದ್ಧಿಯ ಪರಿವ್ಯಾಪ್ತಿಗೆ ತರುವ ಕೆಲಸವಾಗಬೇಕಾಗಿರುತ್ತದೆ. ಯಾವುದೇ ಸರಕಾರಗಳು ಸ್ವಯಂ ಕಾರ್ಯಕ್ರಮಗಳನ್ನು ರೂಪಿಸಿರುವುದಿಲ್ಲ. ಎಲ್ಲಾ ಅಂಶಗಳು ರಾಜ್ಯಗಳಿಗೆ ಸಂವಿಧಾನದತ್ತ ಕೊಡುಗೆಯಾಗಿವೆ. ಆದ್ದರಿಂದ ಜನರನ್ನು ರಕ್ಷಿಸುವ ಅವರ ಸಬಲತೆಯಿಂದ ವಿಮುಕ್ತಿಪಡೆಯಲು ಹಲವಾರು ಸಂವಿಧಾನಾತ್ಮಕ ಪರಿಹಾರಗಳನ್ನು ರೂಪಿಸಿಕೊಂಡು ಬಂದಿವೆ. ಅವುಗಳು ಆ ಸರಕಾರದ ಬದ್ಧತೆಯೂ ಹೌದು. ಸಂವಿಧಾನವೇ ಸಮಾಜ ಕಲ್ಯಾಣದ ಅಭಿವೃದ್ಧಿ ಬಗ್ಗೆ ನೀಲನಕ್ಷೆ ತಯಾರು ಮಾಡಿಬಿಟ್ಟಿರುತ್ತದೆ.

ಕರ್ನಾಟಕ ರಾಜ್ಯ ಸರಕಾರ ಸುಪ್ರಿಂಕೋರ್ಟ್‌ನ ನಿವೃತ್ತ ನ್ಯಾಯಾದೀಶರಾದ ಚಿನ್ನಪ್ಪ ರೆಡ್ಡಿಯವರನ್ನು ಮೀಸಲಾತಿಯನ್ನು ಪರಿಶೀಲಿಸಲು ಆಯೋಗ ನೇಮಿಸಲಾಗಿತ್ತು. ಈ ಆಯೋಗ ೧೯೯೦ರಲ್ಲಿ ವರದಿ ಸಲ್ಲಿಸಿದೆ.

ಹಿಂದುಳಿದ ವರ್ಗಗಳಿಗೆ ಮೀಸಲಾತಿ ಕೊಡಲು ಕಾಕಾ ಕಾಲ್ಕೇಕರ್ ಆಯೋಗವನ್ನು ಮತ್ತು ೧೯೭೮ರಲ್ಲಿ ಮುರಾರ್ಜಿ ದೇಸಾಯಿಯವರು ಮಂಡಲ್ ಆಯೋಗವನ್ನು ನೇಮಿಸಿದ್ದರು. ಸಮಾನತೆ

ಹಕ್ಕು ಸಂಬಂಧಪಟ್ಟಂತೆ ಭಾರತ ಸರ್ಕಾರ ೧೯೫೫ರಲ್ಲಿ ವಿಶ್ವವಿಖ್ಯಾತ ಅಪರಾಧಗಳ unctouchability oftences Act ನ್ನು ಅಂಗೀಕರಿಸಲು ಪುನಃ ಇದನ್ನು ೧೯೭೬ರಲ್ಲಿ ತಿದ್ದುಪಡಿ ಮಾಡಿ ನಾಗರಿಕ ಹಕ್ಕುಗಳ ರಕ್ಷಣ ಕಾಯ್ದೆ Protection of civil rights act 1955ಎಂದು ಹೆಸರಿಸಲಾಯಿತು. ಈ ಕಾಯ್ದೆಯ ಪ್ರಕಾರ.

೧. ಯಾರೊಬ್ಬರಿಗೂ ಆಸ್ಪತ್ರೆ, ಔಷಧಾಲಯಗಳು, ಶಿಕ್ಷಣ ವಿಷಯದಲ್ಲಿ ಪ್ರವೇಶವನ್ನು ಯಾವುದೇ ಕಾರಣಕ್ಕೂ ನಿರಾಕರಿಸುವಂತಿಲ್ಲ.

೨. ಸಾರ್ವಜನಿಕ ಪೂಜಾ ಸ್ಥಳದಲ್ಲಿ ಪೂಜೆ ಮಾಡದಂತೆ ನಿಷೇಧಿಸುವಂತಿಲ್ಲ.

೩. ಪರಿಶಿಷ್ಟ ಜಾತಿಗೆ ಸಂಬಂಧಪಟ್ಟವರನ್ನು ಅಸ್ಪೃಶ್ಯರೆಂದು ತೊಂದರೆಯನ್ನುಂಟು ಮಾಡುವಂತಿಲ್ಲ.

ಈ ಮೇಲಿನ ನಿಯಮಗಳನ್ನು ಉಲ್ಲಂಘಿಸಿದವರಿಗೆ ಸರಕಾರ ಶಿಕ್ಷೆ ನೀಡಬಹುದು ಹಾಗೂ ಅಸ್ಪೃಶ್ಯತೆಯನ್ನು ಆಚರಿಸುವವರನ್ನು ಸಂಸತ್ತು ಅಥವಾ ರಾಜ್ಯ ವಿಧಾನಸಭೆಗೆ ಸ್ಪರ್ಧಿಸದಂತೆ ನಿಷೇಧ ಹೇರಬಹುದು. ಭಾರತದ ಸಂಸತ್ತು ೧೯೮೯ರಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸಂಬಂಧಪಟ್ಟಂಥ ದೌರ್ಜನ್ಯಗಳ ನಿಷೇಧ ಕಾಯ್ದೆ (ದಲಿತ ಕಾಯ್ದೆ)ಯನ್ನು ೩೦ನೇ ಜನವರಿ, ೧೯೯೦ರಿಂದ ಜಾರಿಗೆ ತಂದಿದೆ.

೧೫(೩)ನೇ ಪರಿಚ್ಛೇದ ವರ್ಣ ವಿಶೇಷವಾಗಿ ಮಹಿಳೆಯರು ಮಕ್ಕಳಿಗೆ ವಿಶೇಷ ಸೌಲಭ್ಯಗಳನ್ನು ನೀಡಲು ಸರ್ಕಾರಗಳಿಗೆ ಅಧಿಕಾರವಿದೆ. ೧೬(೧) ೪(೨)ರ ಪರಿಚ್ಛೇದ ಪ್ರಕಾರ ಸಾರ್ವಜನಿಕ ಸೇವೆಗಳ ನೇಮಕಾತಿಗಳಲ್ಲಿ ಎಲ್ಲರಿಗೂ ಸಮಾನ ಅವಕಾಶಗಳಿದ್ದರೂ ಕಾರ್ಯಗತಗೊಳಿಸುವಾಗ ಈ ನಿಯಮಗಳನ್ನು ಸಡಿಲಗೊಳಿಸಲು ರಾಜ್ಯ ಸರಕಾರಗಳಿಗೆ ಅಧಿಕಾರವಿದೆ.

ಭಾರತದ ಸುಪ್ರಿಂಕೋರ್ಟ್ ಎಸ್.ಸಿ/.ಎಸ್.ಟಿ ಹಾಗೂ ಹಿಂದುಳಿದ ವರ್ಗಗಳಿಗೆ ಸಂಬಂಧಪಟ್ಟಂತೆ ಮೀಸಲಾತಿ ಶೇ. ೫೦ ಹೆಚ್ಚಿಸಬಾರದೆಂದು ೯ರ ಸೆಪ್ಟೆಂಬರ್ ೧೯೯೪ರಲ್ಲಿ ಕರ್ನಾಟಕ ಸರಕಾರಕ್ಕೆ ನಿರ್ದೇಶನ ಕೊಟ್ಟಾಗ ತಕ್ಷಣ ಕರ್ನಾಟಕ ಸರ್ಕಾರ ೧೯೯೫ರಲ್ಲಿ ಶೇ. ೫೦ ಮೀಸಲಾತಿ ನಿಯಮವನ್ನು ಜಾರಿಗೆ ತಂದಿತು. ಅಂದು ಎಂ.ಪಿ.ಪ್ರಕಾಶ್‌ರವರ ಅಧ್ಯಕ್ಷತೆಯಲ್ಲಿ ಈ ಮೀಸಲಾತಿಯನ್ನು ಜಾರಿಗೊಳಿಸಿತು. ಹಿಂದುಳಿದ ವರ್ಗಗಳ ಮೀಸಲಾತಿಗೆ ನಿಗಧಿಪಡಿಸಲಾದ ವಾರ್ಷಿಕ ಆದಾಯದ ಮಿತಿಯನ್ನು ರೂ. ೨ ಲಕ್ಷದಿಂದ ಮೂರುವರೆ ಲಕ್ಷ ರೂಪಾಯಿಗಳಿಗೆ ಮುಖ್ಯಮಂತ್ರಿಗಳಾದ ಡಿ.ವಿ. ಸದಾನಂದ ಗೌಡರ ನೇತೃತ್ವದ ಸರ್ಕಾರ ೨ ಫೆಬ್ರವರಿ ೨೦೧೨ರಂದು ತೀರ್ಮಾನಿಸಿತು.

ಹೀಗೆ ಭಾರತ ಸರಕಾರ ೧೯೫೫ರಲ್ಲಿ ನಾಗರಿಕ ರಕ್ಷಣಾ ಹಕ್ಕು ಎಂಬ ಕಾಯ್ದೆಯನ್ನು ಜಾರಿಗೆ ತಂದಿದೆ. ದಲಿತರ ಅಭಿವೃದ್ಧಿಯ ಸಂವಿಧಾನಾತ್ಮಕ ನೆಲೆಯಲ್ಲಿ ವಿಧಿಬದ್ಧವಾದ ಶಾಸನ ರಕ್ಷಣೆಯಿರುವುದರಿಂದ ಸಂವಿಧಾನದ ಮಾರ್ಗಸೂತ್ರದಂತೆ ದಲಿತರಿಗೆ ಅವಕಾಶಗಳು ದೊರೆಯಬೇಕು. ದೊರಕಿಸಿಕೊಡುವಲ್ಲಿ ರಾಜ್ಯ ಸರಕಾರಗಳ ನೈತಿಕ ಹೊಣೆಯಾಗಿರುತ್ತದೆ. ಅವುಗಳು ಪರಿಣಾಮಕಾರಿ

ಯಾಗಬೇಕು. ಶಿಕ್ಷಣ, ಆಹಾರ, ಬಟ್ಟೆ, ಮನೆ, ಭೂಮಿ ಮತ್ತು ನಾಗರಿಕ ಹಕ್ಕು ಈ ನೆಲೆಯಲ್ಲಿ ದೊರೆಯುವುದರಿಂದ ದಲಿತ ಅಭಿವೃದ್ಧಿ ಬದುಕಿಗೆ ಆಸರೆಯಾಗಿ ವೃದ್ಧಿಯಾಗಿ ಜೀವನಮಟ್ಟ ಜೊತೆಗೆ ದಲಿತರ ಆರ್ಥಿಕ ಸಬಲೀಕರಣಕ್ಕೆ ಕಾರಣವಾಗುತ್ತದೆ.

ಶತ ಶತಮಾನಗಳಿಂದ ನೊಂದು, ಬೆಂದು, ಅವಮಾನಕ್ಕೆ, ತಾರತಮ್ಯಕ್ಕೆ ತುತ್ತಾಗಿರುವ ಸಂಗತಿಗೆ ಬಲವಾದ ಕಾರಣ ಶ್ರೇಣೀಕರಣಗೊಂಡ ಜಾತಿಯ ವ್ಯವಸ್ಥೆ. ನಮ್ಮ ಸಮಾಜದ ರಚನೆಯಲ್ಲಿ ಬೇರು ಬಿಟ್ಟ ಪೆಡಂಭೂತವಾದ ಜಾತಿ ವ್ಯವಸ್ಥೆ ದಮನಿತ ಆರ್ಥಿಕವಾಗಿ ಹಿಂದುಳಿಯುವುದಕ್ಕೆ ನೇರ ಹೊಣೆಯಾಗಿದೆ. ಭಾರತೀಯ ಸಂವಿಧಾನದ ೩೩೮ ಮತ್ತು ೪೬ಕಲಂ ಅಡಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ವಿಶೇಷ ರಕ್ಷಣೆ ನೀಡಲಾಗಿದೆ. ಪರಿಶಿಷ್ಟ ಜಾತಿ ಮತ್ತು ಪಂಗಡಗಳು ಗುಂಪುಗಳಾಗಿದ್ದು ಎಂದು ಪರಿಗಣಿಸಲಾಗಿ ಅವುಗಳ ಏಳ್ಗೆಗಾಗಿ ರಾಜ್ಯ ಸರ್ಕಾರವು ಸೂಕ್ತ ರಕ್ಷಣಾ ಕ್ರಮಗಳನ್ನು ಅನುಷ್ಠಾನಗೊಳಿಸಿದೆ.

೧-ಕಲಂ ೩೩೮ ಮತ್ತು ೩೩೮ಎ ದಲ್ಲಿ ಸಂವಿಧಾನದತ್ತವಾಗಿ ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ನೀಡಲಾದ ರಕ್ಷಣಾ ಕ್ರಮ ಕುರಿತಾದ ಅಂಶಗಳನ್ನು ನಿಯಂತ್ರಿಸಲು ಮತ್ತು ಪತ್ತೆಹಚ್ಚಲು ರಾಷ್ಟ್ರೀಯ ಪರಿಶಿಷ್ಟ ಜಾತಿ ಆಯೋಗ ಮತ್ತು ರಾಷ್ಟ್ರೀಯ ಪರಿಶಿಷ್ಟ ಪಂಗಡಗಳ ಆಯೋಗ ನಿರ್ಮಾಣದ ಕುರಿತು ವಿವರವಿದೆ. ಸಂವಿಧಾನದಲ್ಲಿರುವ ಅಯೋಗವನ್ನು ವಿಧಿಬದ್ಧವಾಗಿ ಜಾರಿಗೆ ತರುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದ ಕೀರ್ತಿ ಅಂದಿನ ಕೇಂದ್ರ ಮಂತ್ರಿ ಬಾಬುಜಗಜೀವನ್ ರಾಮ್ ಅವರಿಗೆ ಸಲ್ಲುತ್ತದೆ. ೨ ಕಲಂ ೪೬ ಎಸ್.ಟಿ, ಎಸ್.ಸಿ ಮತ್ತು ಇತರೆ ಹಿಂದುಳಿದ ಜಾತಿಯವರಿಗೆ ಆರ್ಥಿಕ ಮತ್ತು ಶೈಕ್ಷಣಿಕ ಭದ್ರತೆ ನೀಡುವುದು ಕಂಡು ಬಂದಿದೆ.

ಹಿಂದುಳಿದ ಜಾತಿಯ ಜನರಿಗೆ (ಅಸ್ಪೃಶ್ಯತೆಗೆ ಒಳಗಾದ ಸಮುದಾಯ) ರಾಜಕೀಯ ಮೀಸಲಾತಿ ನೀಡುವ ತರ್ಕ ಮತ್ತು ಯೋಜನೆಯು ೧೯೩೨ರ ಪೂನಾ ಒಪ್ಪಂದದ ಪ್ರತಿಫಲವಾಗಿದೆ. ಈ ಒಪ್ಪಂದವನ್ನು ದಲಿತ ಜಾತಿಗಳ ಪರವಾಗಿ ಡಾ. ಬಿ.ಆರ್.ಅಂಬೇಡ್ಕರ್ ಮತ್ತು ಹಿಂದುಳಿದ ಜಾತಿಗಳ ಪರವಾಗಿ ಡಾ. ಮದನಮೋಹನ ಮಾಳವೀಯ ಸಹಿ ಮಾಡಿದರು. ಅದರೂ ಗಾಂಧಿಯ ಹಠಮಾರಿ ಧೋರಣೆಯಿಂದ ದಲಿತರಿಗೆ ಮೀಸಲು ಕ್ಷೇತ್ರಗಳು ಬಲಿಷ್ಠ ಜಾತಿಗಳಿಗೆ ಹೋದವು. ಇದರಿಂದ ಮೀಸಲು ಕ್ಷೇತ್ರಗಳು ದಲಿತ ರಾಜಕಾರಣಿಗಳಿಗೆ ನೇಣುಗಂಬಗಳಾಗಿವೆ. ಇದು ಐತಿಹಾಸಿಕ ಸತ್ಯ ಹೌದು. ಇಂದು ಪೂನಾ ಒಪ್ಪಂದವು (೧)ಕೇಂದ್ರ ಮತ್ತು ರಾಜ್ಯ ಶಾಸಕಾಂಗ ಸದನಗಳಲ್ಲಿ ಶೇ. ೧೮ರಷ್ಟು ಹಿಂದುಳಿದ ಜಾತಿಗೆ ಮೀಸಲಾತಿ, (೨) ಸಾರ್ವಜನಿಕ ಸೇವಾ ಆಯೋಗದಲ್ಲಿ ಜಾತಿ ಆಧಾರಿತ ತಾರತಮ್ಯತೆ ರಹಿತ ಹುದ್ದೆ ಭರ್ತಿಯ ಭರವಸೆ (೩) ಹಿಂದುಳಿದ ಜಾತಿಯ ಜನರು ಶೈಕ್ಷಣಿಕ ಪ್ರಗತಿ ಸಾಧಿಸಲು ಸಾಕಷ್ಟು ಪ್ರಮಾಣದಲ್ಲಿ ಶೈಕ್ಷಣಿಕ ಅನುದಾನದಲ್ಲಿ ಮೀಸಲು ಕಲ್ಪಿಸುವ ಭರವಸೆಯನ್ನು ನೀಡಿದೆ (ಥೋರಟ್ ಮತ್ತು ಕುಮಾರ್ ೨೦೧೧)

ದಲಿತ ಅಭಿವೃದ್ಧಿಯ ಉತ್ತೇಜನ ಮತ್ತು ಮಾನವ ಹಕ್ಕುಗಳನ್ನು ಸಾಕಾರಗೊಳಿಸುವುದು ಎರಡು ಕೂಡ ಏಕರೂಪದ ಪ್ರೇರಣೆ ಹೊಂದಿದೆ. ಇವೆರಡೂ ಸ್ವಾತಂತ್ರ್ಯ, ಕಲ್ಯಾಣ ಮತ್ತು ಘನತೆ ಗೌರವವನ್ನು ಎಲ್ಲ ವ್ಯಕ್ತಿಗಳಿಗೂ ಎಲ್ಲ ಸಮಾಜಗಳಲ್ಲೂ ಉತ್ತೇಜಿಸುವ ಮೂಲಭೂತ ಬದ್ಧತೆ ಪಡೆದಿದೆ. ಮಾನವಾಭಿವೃದ್ದಿಯು ಸಮುದಾಯವೊಂದರ ಸದಸ್ಯರು ಹೊಂದಿರುವ ಸ್ವಾತಂತ್ರ್ಯಗಳು ಮತ್ತು ಸಾಮರ್ಥ್ಯಗಳ ಬಗೆಗೆ ಕೇಂದ್ರೀಕರಿಸಿದರೆ, ಮಾನವ ಹಕ್ಕುಗಳು ವ್ಯಕ್ತಿಗಳ ಮತ್ತು ಸಮುದಾಯದ ಏಜೆಂಟರುಗಳ ಮೇಲೆ ಹೊಂದಿರುವ ಹಕ್ಕುಗಳನ್ನು ಕುರಿತದ್ದಾಗಿದೆ. ಇದು ಮಾನವ ಹಕ್ಕುಗಳನ್ನು ಖಾತ್ರಿಪಡಿಸಲು ಮಾಡಲಾದ ಸಾಮಾಜಿಕ ವ್ಯವಸ್ಥೆಗಳನ್ನು ಮತ್ತು ಈ ಸಾಮರ್ಥ್ಯಗಳನ್ನು ಹಾಗೂ ಸ್ವಾತಂತ್ರ್ಯಗಳನ್ನು ಹೊಂದಲು ಮಾಡಬೇಕಾದದ್ದನ್ನು ತಿಳಿಸುತ್ತವೆ.

ಅಭಿವೃದ್ಧಿ ಚಿಂತನೆಯು ಸಾಂಪ್ರದಾಯಿಕವಾಗಿ ಅನೇಕ ಸಾಮಾಜಿಕ ವ್ಯವಸ್ಥೆಗಳ ಪರಿಣಾಮಗಳನ್ನು ಕುರಿತದ್ದಾಗಿದೆ. ಮಾನವಾಭಿವೃದ್ದಿ ಚಿಂತನೆಯು ಅಭಿವೃದ್ಧಿ ಕ್ರಿಯೆಯ ಮಹತ್ವದ ಬಗೆಗೆ ಚಿಂತಿಸಿದೆ. ಸಾಮಾಜಿಕ ವ್ಯವಸ್ಥೆಗಳ ಫಲಿತಾಂಶವನ್ನು ಅಳತೆ ಮಾಡುವ ವಿಧಾನವನ್ನು ಮಾನವಾಭಿವೃದ್ಧಿ ವಿಧಾನ ಅಭಿವೃದ್ಧಿಪಡಿಸಿದೆ.

ವ್ಯಕ್ತಿಗಳು ಕೆಲವು ಸರಕು ಮತ್ತು ಸ್ವಾತಂತ್ರ್ಯಗಳನ್ನು ಅನುಭವಿಸುವಾಗ ಮಾನವ ಹಕ್ಕುಗಳು ತೃಪ್ತಿಪಡಿಸಲ್ಪಡುವುವು. ಅದಕ್ಕಾಗಿ ಅವುಗಳನ್ನು ಪಡೆಯುವ ಬಗೆಗೆ ಸಾಮಾಜಿಕ ವ್ಯವಸ್ಥೆಯ ಖಾತ್ರಿಯಿರಬೇಕು. ಆದ್ದರಿಂದ ಸಮಾಜವೊಂದರೊಳಗೆ ಮಾನವಭಿವೃದ್ದಿ ಸಾಧನೆಗಳನ್ನು ಕೈಗೊಳ್ಳಲು ಸುರಕ್ಷೆ ಕಲ್ಪಿಸುವ ಸಾಮಾಜಿಕ ಮಾನದಂಡಗಳು ಮತ್ತು ಸಂಸ್ಥೆಗಳಿರಬೇಕು.

ಸಂವಿಧಾನದ ನೆಲೆಯಲ್ಲಿ ದಲಿತರ ಅಭಿವೃದ್ಧಿಗೆ ಸಂಬಂಧಿಸಿದಂತೆ ಸುದೀರ್ಘವಾಗಿ ಸಾಮಾಜಿಕ ನ್ಯಾಯವನ್ನು ಚಿಂತನೆ ಮಾಡಿರುವುದು ಮತ್ತು ದೇಶದ ಅಭಿವೃದ್ಧಿಯನ್ನು ಒಳಗೊಂಡಂತೆ ಚಿಂತಿಸಿರುವುದರ ಕ್ಷ-ಕಿರಣವನ್ನು ಗಮನಿಸಬಹುದಾಗಿದೆ.

**೪.೫. ಪರಿಶಿಷ್ಟ ಜಾತಿಗಳ ಮೇಲೆ ಆಗುತ್ತಿರುವ ದೌರ್ಜನ್ಯಗಳಿಂದ ಮಾನವ ಅಭಿವೃದ್ಧಿ ಧಕ್ಕೆ**

ಭಾರತದಂಥ ದೇಶದಲ್ಲಿ ಜಾತಿ ಒಗ್ಗೂಡುವಿಕೆಯು ದಂಗುಗೊಳಿಸುತ್ತಿರುವಾಗ, ಮಾನವ ಅಭಿವೃದ್ಧಿಯು ಏಕಪ್ರಕಾರದ ಯೋಜನಾ ಪರಿಕಲ್ಪನೆಗಳಿಂದ ಮಾನವನ ಸಮಗ್ರ ಅಭಿವೃದ್ಧಿಯತ್ತ ಸಾಗಿ ಸಮಷ್ಠಿ ಬೆಳವಣಿಗೆಯನ್ನು ಕಾಣಲು ಸಾಧ್ಯವೇ ಎಂಬ ಗೊಂದಲ ಹುಟ್ಟಿಕೊಳ್ಳದೇ ಇರಲಾರದು. ಭಾರತದ ಮನುಷ್ಯರ ಅಂತಃಸತ್ವ ಹಾಗೂ ಮೂಲಸೆಲೆಗಳು ಜಾತಿ ಬೇರುಗಳಿಂದ ಮೊಳಕೆ ಯೊಡೆದಿರುವುದರಿಂದಲೇ ಮೇಲ್ಜಾತಿಯ ಮನುಷ್ಯರು ಪರಿಶಿಷ್ಟ ಜಾತಿಗಳ ಮೇಲೆ ಹಲ್ಲೆ, ಹಿಂಸೆ, ಕೊಲೆ, ಅತ್ಯಾಚಾರಗಳಂಥ ಅಮಾನವೀಯ ಪ್ರಕ್ರಿಯೆಗಳು ಕಾನೂನುಗಳನ್ನು ಲೆಕ್ಕಿಸದೇ ನಿರಾತಂಕವಾಗಿ ನಡೆಯುತ್ತಲೇ ಇವೆ. ಮನುಷ್ಯ ಸಂಬಂಧಗಳ ವಾಸ್ತವಿಕ ವಿನ್ಯಾಸಗಳನ್ನು ಅರಿಯದೇ ಭೌಗೋಳಿಕ ಲಕ್ಷಣಗಳಿಂದಲೇ ಅಭಿವೃದ್ಧಿ ಸಾಧಿಸುತ್ತೇವೆ ಎನ್ನುವುದು ಅಕಲ್ಪಿತವಾದ ಯೋಜನೆಯಾಗುವುದು.

ಸ್ವತಂತ್ರ ಭಾರತದಲ್ಲಿ ಸುವರ್ಣ ಕರ್ನಾಟಕ ಸಂದರ್ಭದಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗಗಳು ಭಯದಿಂದಲೇ ಬದುಕನ್ನು ದೂಡುತ್ತಿರುವ ಸ್ಥಿತಿಯಲ್ಲಿರುವಾಗ ಮಾನವ ಅಭಿವೃದ್ಧಿಯು ಹೇಗೆ ಸಮಷ್ಠಿ ಬೆಳವಣಿಗೆಯನ್ನು ಸಾಧಿಸಲು ಸಾಧ್ಯವಾಗುವುದು? ೧೨.೧೨.೨೦೦೬ರಂದು ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಸಭೆಗೆ ಮಂಡಿಸಿದ ಸರ್ಕಾರಿ ಅಧಿಕೃತ ದಾಖಲೆಗಳಲ್ಲಿ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುವ ಪ್ರಕರಣಗಳ ಸಂಖ್ಯೆ ೪೮೫. ಶಿಕ್ಷೆಗೆ ಒಳಗಾದ ಪ್ರಕರಣಗಳ ಸಂಖ್ಯೆ ೧೪. ಹೀಗೆ ೨೦೦೧ರಿಂದ ೨೦೦೬ (ಅಕ್ಟೋಬರ್ ಅಂತ್ಯ)ರವರೆಗೆ ಸುಮಾರು ೭೧೮೯ ದೌರ್ಜನ್ಯ ಪ್ರಕರಣಗಳು ವರದಿಯಾಗಿದ್ದು, ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುವ ಪ್ರಕರಣಗಳು ೩೯೩೭. ಶಿಕ್ಷೆಗೆ ಒಳಗಾದ ಪ್ರಕರಣಗಳು ೭೦. ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ಪರಿಶಿಷ್ಟರ ಮೇಲಿನ ದೌರ್ಜನ್ಯಗಳು, ಬಲಾಢ್ಯ ಜಾತಿಗಳ ಕಪಿಮುಷ್ಠಿಯಿಂದ ಸಿಕ್ಕಿಕೊಂಡಿರುವ ಯಾವ ಯೋಜನೆಗಳು ಮುಕ್ತಿ ಕಾಣುತ್ತಿಲ್ಲದಿರುವುದು ಮಾನವ ಅಭಿವೃದ್ಧಿಯ ಯಶಸ್ಸನ್ನು ಅಸಾಧ್ಯವಾದ ಪಲ್ಲಟಗೊಳಪಟ್ಟಿವೆ

ಗ್ರಾಮೀಣ ಹಾಗೂ ನಗರ ಪ್ರದೇಶಗಳೆನ್ನದೆ ಪರಿಶಿಷ್ಟ ಜಾತಿಗಳ ಮೇಲೆ ಆಂತರಿಕ ಮತ್ತು ಬಾಹ್ಯ ಭಯಗಳ ಮೂಲಕ ಅಸ್ಪೃಶ್ಯತೆ ದಿಗಿಲುಗಳಿಂದ ಹೊರಬರಲು ಸಾಧ್ಯವಾಗುತ್ತಿಲ್ಲ. ಸವಕಲಾದ ಕುಲಕಸುಬುಗಳಿಂದ ಮುಕ್ತಿಗೊಳ್ಳದಂತೆ ನೋಡಿಕೊಳ್ಳುವಲ್ಲಿ ಮೇಲ್ಜಾತಿಯವರು ಹಿಂಜರಿಯುವುದಿಲ್ಲ. ೨೦೦೧ರಿಂದ ೨೦೦೬ರವರೆಗೆ ಕೊಲೆ, ಅತ್ಯಾಚಾರ, ತೀವ್ರ ಗಾಯ, ಬೆಂಕಿ ಹಚ್ಚುವುದು, ಇನ್ನಿತರ ಪ್ರಕರಣಗಳು ಒಟ್ಟು ಕ್ರಮವಾಗಿ ೧೧೩೧, ೧೧೭೩, ೧೧೮೯, ೯೪೯ ಹೀಗೆ ದೊಡ್ಡ ಸಂಖ್ಯೆಯಲ್ಲಿ ಸಾಗುತ್ತಿರುವಾಗ ಮಾನವ ಅಭಿವೃದ್ಧಿಯ ಸರ್ವತೋಮುಖ ಪ್ರಗತಿ ಸಾಗಲು ಹೇಗೆ ಸಾಧ್ಯ? ಇದನ್ನು ಕೋಷ್ಟಕ–೪.೧೬ಯಲ್ಲಿ ಕಾಣಬಹುದು.

### ಕೋಷ್ಟಕ-೪.೧೬ ಪ್ರಮುಖ ಶೀರ್ಷಿಕೆಗಳಡಿ ದೌರ್ಜನ್ಯ ಪ್ರಕರಣಗಳ ವಿಂಗಡಣೆ

| ಅಕ್ಟೋಬರ್ ೨೦೦೬ರ ಅಂತ್ಯದವರೆಗೆ | | | | | | | | | | | | |
|---|---|---|---|---|---|---|---|---|---|---|---|---|
| ಅಪರಾಧ ಶೀರ್ಷಿಕೆ | ೨೦೦೧ | ೨೦೦೨ | ೨೦೦೩ | ೨೦೦೪ | ೨೦೦೫ | ೨೦೦೬ ಅಕ್ಟೋಬರ್ ಅಂತ್ಯ | ೨೦೦೧ | ೨೦೦೨ | ೨೦೦೩ | ೨೦೦೪ | ೨೦೦೫ | ೨೦೦೬ ಅಕ್ಟೋಬರ್ ಅಂತ್ಯ |
| ಕೊಲೆ | ೧೭ | ೨೫ | ೨೬ | ೨೨ | ೩೫ | ೨೦ | ೫ | ೦ | ೭ | ೪ | ೫ | ೭ |
| ಅತ್ಯಾಚಾರ | ೩೦ | ೩೪ | ೩೯ | ೩೧ | ೫೦ | ೩೬ | ೬ | ೧ | ೪ | ೦ | ೬ | ೩ |
| ತೀವ್ರ ಗಾಯ | ೩೨ | ೪೯ | ೫೬ | ೪೩ | ೪೦ | ೫೦ | ೦ | ೫ | ೨ | ೭ | ೩ | ೪ |
| ಬೆಂಕಿ ಹಚ್ಚುವುದು | ೧೦ | ೧೨ | ೧೧ | ೧೦ | ೧೪ | ೬ | ೦ | ೧ | ೧ | ೦ | ೪ | ೦ |
| ಇತರೆ ಐ.ಪಿ.ಸಿ ಪ್ರಕರಣಗಳು | ೬ | ೧ | ೬ | ೬ | ೨ | ೧ | ೪೯ | ೧ | ೩ | ೦ | ೦ | ೦ |
| ಪ.ಜಾತಿ/ಪ.ವರ್ಗಗಳ ದೌರ್ಜನ್ಯ ನಿಯಂತ್ರಣ ಪ್ರಕರಣಗಳು | ೯೧೫ | ೧೦೧೦ | ೧೦೩೫ | ೧೦೦೭ | ೧೦೪೫ | ೮೩೬ | ೬೦ | ೯೩ | ೧೦೩ | ೧೦೨ | ೧೦೩ | ೯೭ |
| ಒಟ್ಟು | ೧೦೧೦ | ೧೧೩೧ | ೧೧೭೩ | ೧೧೧೯ | ೧೧೮೫ | ೯೪೯ | ೧೨೦ | ೧೦೧ | ೧೨೦ | ೧೧೩ | ೧೨೧ | ೧೦೬ |

ಮೂಲ: ೧೨.೧೨.೨೦೦೬ರಂದು ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳ ಅಧ್ಯಕ್ಷತೆಯ ಸಭೆಗೆ ಮಂಡಿಸಿದ ಸರ್ಕಾರಿ ಅಧಿಕೃತ ದಾಖಲೆಗಳ ಅಂಕಿಅಂಶಗಳು

**ಪ.ಜಾ. ಮತ್ತು ಪ.ಪಂ.ಗಳ ಮೇಲೆ ನಡೆದ ಅಪರಾಧ ಪ್ರಕರಣಗಳು ೨೦೧೩**

- ಪ.ಜಾ ಜನರ ಮೇಲೆ ೨೦೧೩ರಲ್ಲಿ ನಡೆದ ಅಪರಾಧ ಪ್ರಕರಣಗಳು: ಭಾರತ: ೩೯೪೦೮. ಕರ್ನಾಟಕ: ೨೫೬೬.
- ಪ.ಜಾ ಮೇಲೆ ನಡೆದ ಅಪರಾಧಗಳ ಪ್ರಮಾಣ: ಭಾರತ ೧೯.೫೭. ಕರ್ನಾಟಕ ೨೪.೫೦ (ಪ.ಜಾ. ಮೇಲೆ ನಡೆದ ಅಪರಾಧಗಳ ಪ್ರಮಾಣವನ್ನು ಪ್ರತಿ ಲಕ್ಷ ಪ.ಜಾ ಜನಸಂಖ್ಯೆಗೆ ಲೆಕ್ಕ ಹಾಕಲಾಗುತ್ತದೆ)
- ಪ.ಪಂ.ಗಳ ಜನರ ಮೇಲೆ ೨೦೧೩ರಲ್ಲಿ ನಡೆದ ಅಪರಾಧ ಪ್ರಕರಣಗಳು: ಭಾರತ ೬೭೯೩. ಕರ್ನಾಟಕ ೫೩೫
- ಪ.ಪಂ. ಜನರ ಮೇಲೆ ನಡೆದ ಅಪರಾಧಗಳ ಪ್ರಮಾಣ: ಭಾರತ ೬.೫೧. ಕರ್ನಾಟಕ ೧೨.೫೯. (ಪ.ಪಂ. ಮೇಲೆ ನಡೆದ ಅಪರಾಧಗಳ ಪ್ರಮಾಣವನ್ನು ಪ್ರತಿ ಲಕ್ಷ ಪ.ಪಂ. ಜನಸಂಖ್ಯೆಗೆ ಲೆಕ್ಕ ಹಾಕಲಾಗುತ್ತದೆ)
- ಭಾರತದಲ್ಲಿ ಪ.ಜಾ. ಜನರ ಮೇಲೆ ನಡೆದ ಒಟ್ಟು ಅಪರಾಧಗಳಲ್ಲಿ ಕರ್ನಾಟಕದ ಪಾಲು ೨೦೧೨ರಲ್ಲಿ ಶೇ. ೭.೭೪ರಷ್ಟಿದ್ದುದು ೨೦೧೩ರಲ್ಲಿ ಶೇ. ೬.೫೧ಕ್ಕಿಳಿದಿದೆ. ಆದರೆ ಪ.ಪಂ. ಜನರ ಮೇಲೆ ನಡೆದ ಒಟ್ಟು ಅಪರಾಧಗಳಲ್ಲಿ ಕರ್ನಾಟಕದ ಪಾಲು ೨೦೧೨ರಲ್ಲಿ ಶೇ. ೬.೩೨ರಷ್ಟಿತ್ತು. ಇದು ೨೦೧೩ರಲ್ಲಿ ಶೇ. ೭.೮೮ಕ್ಕೇರಿದೆ.(ಮೂಲ: ಭಾರತ ಸರ್ಕಾರ, ಗೃಹ ಇಲಾಖೆ, **ಕ್ರೈಮ್ ಇನ್ ಇಂಡಿಯಾ ೨೦೧೩. ಕಾಂಪೆಂಡಿಯಮ್**. ನ್ಯಾಷಿನಲ್) ಕ್ರೈಮ್ ರೆಕಾರ್ಡ್ಸ್ ಬ್ಯೂರೋ ೨೦೧೫.
- ಆದರೆ ೧೯೯೧ರಲ್ಲಿ ಇದು ೧೭೬೪೬ಕ್ಕೂ, ೨೦೦೧ರಲ್ಲಿ ೩೩೫೦೧ಕ್ಕೂ, ೨೦೦೯ರಲ್ಲಿ ೩೩೫೯೪ಕ್ಕೂ ಮತ್ತು ೨೦೧೩ರಲ್ಲಿ ೩೯೪೦೮ಕ್ಕೂ ಏರಿಕೆಯಾಗಿದೆ.

  ಪ.ಜಾ. ಜನವರ್ಗದ ಮೇಲೆ ನಡೆಯುತ್ತಿರುವ ದೌರ್ಜನ್ಯ, ಹಿಂಸೆ, ಕೊಲೆ ಮುಂತಾದವುಗಲ ವಿವರಗಳನ್ನು ೨೦೧೬ಕ್ಕೆ ಸಂಬಂಧಿಸಿದಂತೆ ಕೇವಲು ವಿವರಗಳನ್ನು ಇಲ್ಲಿ ನೀಡಲಾಗಿದೆ.

- ರಾಜ್ಯದಲ್ಲಿ ೨೦೧೬ ರಲ್ಲಿ ನಡೆದ ಪ.ಜಾ. ಜನರ ಕೊಲೆಗಳು: ೪೮
- ಪ.ಜಾ. ಮಹಿಲೆಯರ ಮೇಲೆ ೨೦೧೬ ರಲ್ಲಿ ನಡೆದ ಅತ್ಯಾಚಾರಗಳು: ೪೯.
- ಇತರೆ ಐ ಪಿ ಸಿ ಪ್ರಕರಣಗಳು: ೧೦೮.
- ಪ.ಜಾ. ಮೇಲೆ ನಡೆದ ದೌರ್ಜನ್ಯಗಲ ನಿಯಂತ್ರಣ ಪ್ರಕರಣಗಳು(ಐಪಿಸಿಯಲ್ಲಿವು): ೧೪೩೭
- ಐ ಪಿ ಸಿ ಮತ್ತು ಇತರೆ ದೌರ್ಜನ್ಯ ಪ್ರಕರಣಗಳು: ೨೦೧೬: ೧೮೬೬.

ಒಟ್ಟಾರೆ ದಲಿತರ ಮೇಲೆ ಅವ್ಯಾಹತವಾಗಿ ದೌರ್ಜನ್ಯಗಳು ನಡೆಯುತ್ತಲೇ ಬಂದಿವೆ. ಅವು ಕಡಿಮೆಯಾಗುವುದಕ್ಕೆ ಪ್ರತಿಯಾಗಿ ಹೆಚ್ಚುತ್ತಾ ನಡೆದಿವೆ. ಇಲ್ಲಿ ವರದಿ ಮಡಿರುವ ಪ್ರಕರಣಗಳ ವಿವರಗಳು ಕೇವಲ ವರಿದಿ ಮಾಡಿರುವ, ನೋಂದಣಿಯಾಗಿರುವ ಪ್ರಕರಣಗಳಾಗಿವೆ. ವರದಿಯಾಗದಿರುವ, ಣೋದಣಿಯಾಗದಿರುವ ಅನೆಕ ಪ್ರಕರಣಗಲಿವೆ.

ದಲಿತರ ಮೇಲಿನ ಅಪರಾಧಗಳ ಬಗ್ಗೆ ಮೊಕದ್ದಮೆಗಳನ್ನು ಹೂಡಲಾಗುತ್ತಿದೆ. ಆದರೆ ಅಲ್ಲಿ ಅಪರಾಧಿಗಳಿಗೆ ಶಿಕ್ಷೆಯಾಗುತ್ತಿರುವ ಪ್ರಮಾಣ ಬಹಳ ಕಡಿಮೆ. ಉದಾಹರಣೆಗೆ ಇಂಡಿಯನ್ ಪೀನಲ್ ಕೋಡ್ ಅಡಿಯಲ್ಲಿ ಮೊಕದ್ದಮೆಗಳಿಗೆ ಸಂಬಂಧಿಸಿದಂತೆ ವಿಧಿಸಲಾದ ಶಿಕ್ಷೆಯ ಪ್ರಮಾಣ ೨೦೦೧ರಲ್ಲಿ ಶೇ. ೪೦.೮೦ರಷ್ಟಿದ್ದರೆ ದಲಿತರ ಮೇಲಿನ ದೌರ್ಜನ್ಯ ಕುರಿತ ವಿಶೇಷ ಶಾಸನದ ಅಡಿಯಲ್ಲಿ ಅಪರಾಧಿಗಳಿಗೆ ವಿಧಿಸಲಾದ ಶಿಕ್ಷೆಯ ಪ್ರಮಾಣ ಕೇವಲ ಶೇ. ೩೬. ಮುಂದೆ ೨೦೦೯ರಲ್ಲಿ ಐ ಪಿ ಸಿ ಅಡಿಯಲ್ಲಿ ವಿಧಿಸಲಾದ ಶಿಕ್ಷೆಯ ಪ್ರಮಾಣ ಶೇ. ೪೧.೭ರಷ್ಟಕ್ಕೆ ಏರಿಕೆಯಾಗಿದ್ದರೆ ವಿಶೇಷ ಶಾಸನಗಳ ಅಡಿಯಲ್ಲಿ ನೀಡಲಾದ ಶಿಕ್ಷೆಯ ಪ್ರಮಾಣ ಶೇ. ೨೯.೬.ಕ್ಕಿಳಿದಿದೆ.

ಶಾಸನಗಳು ಬೇಕು. ಕಾನೂನುಗಳು ಅಗತ್ಯ. ಆದರೆ ಶಾಸನಗಳೇ ಎಲ್ಲವೂ ಅಲ್ಲ. ಸಮಾಜವನ್ನು ಕಾಡುತ್ತಿರುವ ವಿಕೃತಿಗಳನ್ನು ಮಟ್ಟಹಾಕಲು ನಾಗರಿಕ ಸಮಾಜವೂ ಪ್ರಯತ್ನ ನಡೆಸಬೇಕು. ಸಮಾಜಕ್ಕೆ ಸಮಾನತೆ ಬಗ್ಗೆ, ಸಾಮಾಜಿಕ ನ್ಯಾಯದ ಬಗ್ಗೆ, ಅಸ್ಪೃಶ್ಯತೆ ನಿವಾರಣೆ ಬಗ್ಗೆ ನಂಬಿಕೆ ಇಲ್ಲದಿದ್ದರೆ ಅವುಗಳನ್ನು ಕೇವಲ ಶಾಸನಗಳ ಮೂಲಕ ನಿವಾರಿಸಲು ಬರುವುದಿಲ್ಲ. ಶಾಸನಾತ್ಮಕ ಕ್ರಮಗಳಿಗೆ ಪೂರಕವಾಗಿ ಸಮಾಜವೂ ಪ್ರಯತ್ನ ನಡೆಸಿದರೆ ಚಾರಿತ್ರಿಕ ಅಸಮಾನತೆ ಮತ್ತು ಸಾಮಾಜಿಕ ಪ್ರತ್ಯೇಕತನವನ್ನು ನಿವಾರಿಸಬಹುದು.

ಪಾಲ್ ಫ್ರಿಯರಿ ಹೇಳುವಂತೆ 'ಶೋಷಣೆಗೆ ಒಳಗಾಗಿರುವ ದುಡಿಮೆಗಾರರು ಮೂಢರಾಗಿದ್ದರೆ ಮತ್ತು ಸೋಮಾರಿಗಳಾಗಿದ್ದರೆ ಅದು ಉಳ್ಳವರ ಮತ್ತು ಪ್ರತಿಷ್ಠಿತರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ದಬ್ಬಾಳಿಕೆಯ ಪರಿಣಾಮವಾಗಿದೆ' ಎಂಬ ಮಾತನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

### ೪.೬. ಪರಿಶಿಷ್ಟರ ಅಭಿವೃದ್ಧಿಯ ಮುಂದಿನ ದಾರಿ

ನಿಜ, ಪರಿಶಿಷ್ಟರ ಬದುಕು ಉತ್ತಮವಾಗುತ್ತಿದೆ. ಇದಕ್ಕೆ ಸರ್ಕಾರದ ಪರಿಶಿಷ್ಟ ಪರ ಕಾನೂನುಗಳು ಮತ್ತು ಸಂವಿಧಾನ ಒಂದು ಕಾರಣವಾದರೆ ಪರಿಶಿಷ್ಟರು ನಡೆಸುತ್ತಾ ಬಂದಿರುವ ಹೋರಾಟದ ಕಾಣಿಕೆಯನ್ನು ಇಲ್ಲಿ ನಾವು ಮರೆಯುವಂತಿಲ್ಲ. ಅಭಿವೃದ್ಧಿ ಅನ್ನುವುದು ನಿಂತ ನೀರಲ್ಲ. ಅದು ಚಲಿಸುತ್ತಿರುತ್ತದೆ. ಆದರೆ ಪರಿಶಿಷ್ಟರ ಅಭಿವೃದ್ಧಿ ನಡೆಯು ಶಿಷ್ಟರ ಅಭಿವೃದ್ಧಿ ನಡೆಗೆ ಸರಿಸಮನಾಗಿಲ್ಲ. ಅಲ್ಲಿ ಅಸಮಾನತೆಯಿದೆ, ತಾರತಮ್ಯವಿದೆ, ಶೋಷಣೆಯಿದೆ, ಶ್ರೇಣೀಕರಣವಿದೆ. ಶಿಷ್ಟರ ವರಮಾನದಲ್ಲಿ ಏರಿಕೆಯು ಯಾವ ನಡೆಯಲ್ಲಿ ನಡೆಯುತ್ತಿದೆಯೋ ಅದಕ್ಕಿಂತ ಮಂದ ನಡೆಯಲ್ಲಿ ಪರಿಶಿಷ್ಟರ ಬಡತನದ ನಿವಾರಣೆ ನಡೆಯುತ್ತಿದೆ. ಸಾಮಾಜಿಕ ನ್ಯಾಯವನ್ನು ಪಡೆಯುವುದು ಪರಿಶಿಷ್ಟರಿಗೆ ಸಾಧ್ಯವಾಗುತ್ತಿಲ್ಲ. ಇದನ್ನು ಸರಿಪಡಿಸಬೇಕಾದರೆ ಸಮಸ್ಯೆಯನ್ನು ಪ್ರಜ್ಞಾಪೂರ್ವಕವಾಗಿ

ಎದುರಿಸಬೇಕಾಗುತ್ತದೆ. ಅಭಿವೃದ್ಧಿ ಅನ್ನುವುದು ಅಖಂಡ ಪ್ರಕ್ರಿಯೆಯೇನಲ್ಲ. ಅದು ಸಮಾಜದ ಎಲ್ಲ ವರ್ಗಗಳಿಗೂ ತನ್ನಷ್ಟಕ್ಕೆ ಸಮಾನವಾಗಿ ಫಲಗಳನ್ನು ಒದಗಿಸುವುದಿಲ್ಲ.

ಪರಿಶಿಷ್ಟರಲ್ಲಿ ಸಾಕ್ಷರತೆಯ ಪ್ರಮಾಣ ಅಧಿಕವಾಗುತ್ತಿದೆ. ಅವರ ಶೈಕ್ಷಣಿಕ ಮಟ್ಟವು ಉತ್ತಮವಾಗುತ್ತಿದೆ. ಇಂದು ಅವರು ತಮ್ಮ ಹಕ್ಕನ್ನು, ಅಧಿಕಾರವನ್ನು ಸಂಘಟಿತರಾಗಿ ಒತ್ತಾಯಿಸುವ ಶಕ್ತಿಯನ್ನು ತೋರಿಸುತ್ತಿದ್ದಾರೆ. ರಾಜಕೀಯವಾಗಿ ಅವರನ್ನು ರಾಜಕೀಯ ಪಕ್ಷಗಳು ನಿರ್ಲಕ್ಷಿಸುವುದಕ್ಕೆ ಸಾಧ್ಯವಿಲ್ಲ. ವರಮಾನದ ಏರಿಕೆ, ಉತ್ಪಾದನೆಯಲ್ಲಿನ ಹೆಚ್ಚಳ, ಬಂಡವಾಳ ಹೂಡಿಕೆ ಮುಂತಾದವು ತಮ್ಮಷ್ಟಕ್ಕೆ ತಾವು ಉಳಿದವರ–ಪರಿಶಿಷ್ಟರ ಸಮಸ್ಯೆಗಳನ್ನು ನಿವಾರಿಸಿಬಿಡುತ್ತವೆ ಎಂಬುದು ಇಂದು ಹುಸಿಯಾಗಿದೆ. ಏರಿಕೆಯಾದ ವರಮಾನ ಸಮಾಜದಲ್ಲಿ ಕೆಳವರ್ಗಗಳನ್ನು ತನ್ನಷ್ಟಕ್ಕೆ ತಲುಪಿ ಬಿಡುತ್ತದೆ ಎಂಬ ಟ್ರಿಕಲ್ ಡೌನ್ ಅರ್ಥಶಾಸ್ತ್ರವು ಯಾವ ದೇಶದಲ್ಲೂ ಯಶಸ್ವಿಯಾಗಿಲ್ಲ ಎಂಬುದನ್ನು ಮತ್ತೆ ಮತ್ತೆ ಜೋಸೆಫ್ ಸ್ಟಿಗ್‌ಲಿಡ್ಜ್ ಪ್ರತಿಪಾದಿಸುತ್ತಿದ್ದಾರೆ.

ಆದ್ದರಿಂದ ನಮ್ಮ ಸಮಾಜದಲ್ಲಿ ದಲಿತರ ಅಭಿವೃದ್ಧಿಯನ್ನು ಎಲ್ಲರ ಅಭಿವೃದ್ಧಿಯಲ್ಲಿ ಕಂಡುಕೊಳ್ಳುವುದು ಸಾಧ್ಯವಿಲ್ಲ. ಎಲ್ಲರ ಅಭಿವೃದ್ಧಿ ಅನ್ನುವುದು ಸಮಾಜದಲ್ಲಿ ಉಳ್ಳವರ ಅಭಿವೃದ್ಧಿ ಯಾಗಿದೆ. ಉಳ್ಳವರು ತಮ್ಮ ಹಿತಾಸಕ್ತಿಗಳನ್ನು ಬಹಿರಂಗವಾಗಿ ಉಚ್ಚಸ್ವರದಲ್ಲಿ ಮಂಡಿಸಬಲ್ಲವರಾಗಿದ್ದಾರೆ ಮತ್ತು ರಾಜಕೀಯವಾಗಿ ಪ್ರಬಲ ಪ್ರತಿಭಟನೆಯನ್ನು ಮಾಡಬಲ್ಲವರಾಗಿದ್ದಾರೆ. ಈ ಕಾರಣದಿಂದಾಗಿ ಬಡವರ, ದುಸ್ಥಿತಿಯಲ್ಲಿರುವವರ, ಅಂಚಿನಲ್ಲಿರುವವರ, ದಲಿತರ ಹಿತಾಸಕ್ತಿಗಳು ಮೂಲೆಗುಂಪಾಗಿ ಬಿಡುತ್ತಿವೆ. ಸಾರ್ವಜನಿಕ ನೀತಿಗಳಲ್ಲಿ ಇವರ ಸಮಸ್ಯೆಗಳು ಆದ್ಯತೆಯನ್ನು ಪಡೆಯುವುದಿಲ್ಲ. ಸರ್ಕಾರದ ನೀತಿ ಕಾರ್ಯಕ್ರಮಗಳು ಉಳ್ಳವರ ಪರವಾಗಿರುತ್ತವೆ ವಿನಃ ಉಳಿದವರ ಪರವಾಗಿರುವುದಿಲ್ಲ.

ಇಂದು ಅಭಿವೃದ್ಧಿಯ ಅಖಂಡತೆಯ ಬಗ್ಗೆ ಮಾತನಾಡಲಾಗುತ್ತಿದೆ. ಈ ಅಖಂಡತೆ ಅನ್ನುವುದು ಪರಿಶಿಷ್ಟರಿಗೆ ಯಾವತ್ತೂ ಅಪಾಯಕಾರಿ ಸಂಗತಿಯಾಗಿದೆ. ಅಖಂಡತೆಯ ಹೆಸರಿನಲ್ಲಿ ಪರಿಶಿಷ್ಟರ ಹಿತಾಸಕ್ತಿಗಳನ್ನು ಮೂಲೆಗುಂಪು ಮಾಡಲಾಗುತ್ತದೆ. ದೇಶದ ಅಭಿವೃದ್ಧಿಯನ್ನು ದೇಶಪ್ರೇಮಕ್ಕೆ ಸಂವಾದಿಯನ್ನಾಗಿ ಮಾಡಲಾಗುತ್ತಿದೆ. ಅಖಿಲ ಭಾರತ ಪ್ರಧಾನಧಾರೆಯಲ್ಲಿ ದಲಿತರನ್ನು ಸಮ್ಮಿಲನಗೊಳಿಸುವ ಬಗ್ಗೆ ಮಾತನಾಡಲಾಗುತ್ತಿದೆ. ಹೀಗೆ ಮಾಡುವುದರಿಂದ ದಲಿತರು ತಮ್ಮ ಸಂವಿಧಾನಾತ್ಮಕ ಗುರುತನ್ನು ಕಳೆದುಕೊಂಡು ಬಿಡುತ್ತಾರೆ. ಈ ಅಖಂಡವಾದಿ, ಪ್ರಧಾನಧಾರೆ ಪರಿಭಾಷೆಯಿಂದ ದಲಿತರಿಗೆ ಯಾವುದೇ ಪ್ರಯೋಜನವಿಲ್ಲ. ದಲಿತರಾಗಿಯೇ ದಲಿತರು ತಮ್ಮ ಅಭಿವೃದ್ಧಿಯನ್ನು ಸಾಧಿಸಿಕೊಳ್ಳಬೇಕಾಗಿದೆ. ಇದು ಸಂವಿಧಾನಾತ್ಮಕ ಹಕ್ಕಾಗಿದೆ. ಅಖಂಡತೆ ಅನ್ನುವಲ್ಲಿ ದಲಿತರಿಗೆ ಸಂವಿಧಾನದಲ್ಲಿ ಪ್ರಾಪ್ತವಾಗಿರುವ ಹಕ್ಕುಗಳು ಇಲ್ಲವಾಗಿಬಿಡುತ್ತವೆ.

ನಿಜವಾಗಿ ನೋಡಿದರೆ ಅಭಿವೃದ್ಧಿ ಅನ್ನುವುದು ಜನರಿಗೆ ಸಂಬಂಧಿಸಿದ ಸಂಗತಿಯೇ ವಿನಃ ಅದು ವರಮಾನದ ಏರಿಕೆಗೆ, ಉತ್ಪಾದನೆಯಲ್ಲಿನ ಹೆಚ್ಚಳಕ್ಕೆ, ಬಂಡವಾಳ ಹೂಡಿಕೆಗೆ ಸಂಬಂಧಿಸಿದ ಸಂಗತಿಯಲ್ಲ. ಡಾ. ಬಿ.ಆರ್. ಅಂಬೇಡ್ಕರ್ ಅವರು ತಮ್ಮ 'ಕಾಸ್ಟ್, ಕ್ಲಾಸ್ ಆಂಡ್ ಡೆಮಾಕ್ರಸಿ'

ಪ್ರಬಂಧದಲ್ಲಿ 'ದೇಶದ ಸ್ವಾತಂತ್ರ್ಯ' ಮತ್ತು 'ಜನರ ಸ್ವಾತಂತ್ರ್ಯ'ಗಳ ನಡುವಿನ ಭಿನ್ನತೆ ಬಗ್ಗೆ ಮಾತನಾಡುತ್ತಾರೆ(ವಲೇರಿಯನ್ ರೋಡ್ರಿಗಸ್ (ಸಂ). ೨೦೦೨. ಪು. ೧೩೨). ಅಖಂಡತೆಯು ಅಭಿವೃದ್ಧಿಯ ಅಂತರ್ಗತ ಗುಣವೇನಲ್ಲ. ಅದು ಖಂಡ ಸ್ವರೂಪದಲ್ಲಿ ಸಂಭವಿಸುತ್ತದೆ. ಅಭಿವೃದ್ಧಿಯು ನಿರ್ವಾತದಲ್ಲಿ ಸಂಭವಿಸುವ ಪ್ರಕ್ರಿಯೆಯಲ್ಲ. ಅಭಿವೃದ್ಧಿಯು ಸಮಾಜದ ಎಲ್ಲ ವರ್ಗಗಳ ನಡುವೆ(ಉಳ್ಳವರು-ಉಳಿದವರು), ಎಲ್ಲ ಸಾಮಾಜಿಕ ಗುಂಪುಗಳ ನಡುವೆ(ಪ.ಜಾ, ಪ.ಪಂ. ಅಲ್ಪಸಂಖ್ಯಾತರು, ಒಬಿಸಿಗಳು, ಮಹಿಳೆಯರು ಮುಂತಾದ), ಎಲ್ಲ ಲಿಂಗಗಳ ನಡುವೆ(ಪುರುಷರು, ಮಹಿಳೆಯರು, ಮೂರನೆಯ ಲಿಂಗಿಗಳು), ಎಲ್ಲ ವೃತ್ತಿಗಳ ನಡುವೆ(ಕೃಷಿ, ದಿನಗೂಲಿಗಳು, ಸೇವಾ ವಲಯ ಮುಂತಾದ), ಎಲ್ಲ ಪ್ರದೇಶಗಳ ನಡುವೆ(ಹಿಂದುಳಿದ ಪ್ರದೇಶ, ಗುಡ್ಡಗಾಡು/ಬುಡಕಟ್ಟು ಪ್ರದೇಶ, ಒಣಭೂಮಿ ಪ್ರದೇಶಗಳು ಮುಂತಾದ) ಸಮಾನವಾಗಿ ಹರಡಿಕೊಳ್ಳುವುದಿಲ್ಲ.

ನಮ್ಮ ಸಮಾಜದಲ್ಲಿನ ಸಾಮಾಜಿಕ ಗುಂಪುಗಳನ್ನು ಆಧರಿಸಿಕೊಂಡು ಪ್ರಜ್ಞಾಪೂರ್ವಕ ಪ್ರಯತ್ನದ ಮೂಲಕ ಮಾತ್ರ ಅಸಮಾನತೆಯನ್ನು, ಶ್ರೇಣೀಕರಣವನ್ನು, ಸಾಮಾಜಿಕ ತಾರತಮ್ಯವನ್ನು, ಆರ್ಥಿಕ ಶೋಷಣೆಯನ್ನು, ಅಸ್ಪೃಶ್ಯತೆಯಂತಹ ವಿಕೃತಿಯನ್ನು ನಿವಾರಿಸುವುದು ಸಾಧ್ಯ. ಇಂಡಿಯಾದ ಅಭಿವೃದ್ಧಿಯನ್ನು ಕುರಿತಂತೆ ಜೀನ್ ಡ್ರೀಜ್ ಮತ್ತು ಅಮರ್ತ್ಯ ಸೇನ್ ಇತ್ತೀಚೆಗೆ ಪ್ರಕಟಿಸಿರುವ ಕೃತಿಯಲ್ಲಿ(೨೦೧೪) ನಮ್ಮ ಸಮಾಜದ ಸಂದರ್ಭದಲ್ಲಿ ಅಸಮಾನತೆ, ತಾರತಮ್ಯ, ಬಡತನ, ಹಸಿವು ಮುಂದುವರೆಯುತ್ತಿರುವುದಕ್ಕೆ 'ಜನರ ತಾಳ್ಮೆ'ಯನ್ನು ಒಂದು ಕಾರಣವಾಗಿ ಮಾಡಿ ಚರ್ಚಿಸುತ್ತಾರೆ(ನೋಡಿ: ಜೀನ್ ಡ್ರೀಜ್ ಮತ್ತು ಅಮರ್ತ್ಯ ಸೇನ್ ೨೦೧೪, **ಅನ್‌ಸರ್ಟನ್ ಗ್ಲೋರಿ: ಇಂಡಿಯ ಆಂಡ್ ಇಟ್ಸ್ ಕಾಂಟ್ರಡಿಕ್ಷನ್ಸ್**. ಅಧ್ಯಾಯ ೧೦. ದಿ ನೀಡ್ ಆಫ್ ಇಂಪೇಶನ್ಸ್, ಪೆನ್‌ಗ್ವಿನ್ ಬುಕ್ಸ್). 'ತಾಳ್ಮೆ ಅನ್ನುವುದು ಒಂದು ಬಗೆಯ ಅಸಹಾಯಕತೆಯೇ ವಿನಃ ಅದು ಸದ್ಗುಣವಲ್ಲ' ಎಂಬ ಹೇಳಿಕೆಯೊಂದನ್ನು ಉಲ್ಲೇಖಿಸುತ್ತಾ ಡ್ರೀಜ್ ಮತ್ತು ಸೇನ್ ತಮ್ಮ ಕೃತಿಯಲ್ಲಿ ತಾಳ್ಮೆಯು ನಮ್ಮ ಸಮಾಜವನ್ನು ಕಾಡುತ್ತಿರುವ ಸಮಸ್ಯೆಗಳನ್ನು ನಿವಾರಿಸುವುದರಲ್ಲಿ ಯಶಸ್ವಿಯಾಗಿಲ್ಲ ಎಂಬುದನ್ನು ದಾಖಲಿಸುತ್ತಾರೆ. ಅಸ್ಪೃಶ್ಯತೆಯನ್ನು ಅಭಿವೃದ್ಧಿಯಿಂದ ಅಥವಾ ವರಮಾನ ಏರಿಕೆಯಿಂದ ತೊಡೆದು ಹಾಕುವುದು ಅಸಾಧ್ಯ. ವಾಸ್ತವವಾಗಿ ಇಂದು ಆರ್ಥಿಕ ಬೆಳವಣಿಗೆಯು ತೀವ್ರಗತಿಯಲ್ಲಿ ನಡೆಯುತ್ತಿರುವ ದೇಶಗಳಲ್ಲಿ ಭಾರತ ಮುಂಚೂಣಿಯಲ್ಲಿದೆ. ಅಸ್ಪೃಶ್ಯತೆಯಿಂದಾಗಿ ಅನಕ್ಷರತೆ, ಶಿಕ್ಷಣ ಪಡೆಯುವುದರಲ್ಲಿನ ಅಸಮಾನತೆ, ವಸತಿ ರಹಿತ, ಅಸಹನೀಯ ವಾತವರಣದಲ್ಲಿ ಬದುಕುವುದು, ಬಡತನ, ಹಸಿವು, ವರಮಾನದ ಕೊರತೆ ಮುಂತಾದವುಗಳು ತೀವ್ರಗೊಳ್ಳುತ್ತಿವೆ. ಸಮೂಹ ಮಾಧ್ಯಮಗಳು, ರಾಜಕೀಯ ಪಕ್ಷಗಳು, ಸಾಮಾಜಿಕ ಸಂಸ್ಥೆಗಳು ಮುಂತಾದವು ಸಮಾಜದಲ್ಲಿನ ಉಳ್ಳವರ ಸಮಸ್ಯೆಗಳನ್ನೇ ಉಳಿದವರ ಸಮಸ್ಯೆಗಳು ಅನ್ನುವಂತೆ ಪ್ರತಿಪಾದಿಸುತ್ತಿವೆ. ಉದಾಹರಣೆಗೆ ಜಿ.ಎಸ್.ಟಿ.ಯನ್ನು (ಗೂಡ್ಸ್ ಆಂಡ್ ಸರ್ವೀಸಸ್ ಟ್ಯಾಕ್ಸ್) ಇಡೀ ದೇಶದ ಸಮಸ್ಯೆಯೆನ್ನುವಂತೆ, ಎಲ್ಲ ಜನರ ಸಮಸ್ಯೆಯೆನ್ನುವಂತೆ ಕಾರ್ಪೋರೇಟ್ ಕುಳಗಳು ಪ್ರತಿಪಾದಿಸುತ್ತವೆ. ಇದರಿಂದಾಗಿ ಉಳಿದವರ

ಸಮಸ್ಯೆಗಳು ಮೂಲೆಗುಂಪಾಗುತ್ತಿವೆ. ಎಲ್ಲಿಯವರೆಗೆ ಉಳ್ಳವರ ಹಿತಾಸಕ್ತಿಗಳು ಪಕ್ಕಕ್ಕೆ ಸರಿದು ಉಳಿದವರ ಸಮಸ್ಯೆಗಳು, ಅವರ ಹಿತಾಸಕ್ತಿಗಳು ಮುಖ್ಯವಾಗುವುದಿಲ್ಲವೋ, ಅವು ಮುಂಚೂಣಿಗೆ ಬರುವುದಿಲ್ಲವೋ ಅಲ್ಲಿಯವರೆಗೆ ಜಾತಿ ಸಂಬಂಧಿ ಅಸಮಾನತೆ, ಸಾಮಾಜಿಕ ಪ್ರತ್ಯೇಕತನ, ಆರ್ಥಿಕ ದುಸ್ಥಿತಿ ಮುಂತಾದವುಗಳನ್ನು ನಿವಾರಿಸಲು ಬರುವುದಿಲ್ಲ. ಅಸಮಾನತೆಯನ್ನು ಮುಖ್ಯ ಸಮಸ್ಯೆಯೆಂದು ಗುರುತಿಸುವ ಅಗತ್ಯವಿದೆ. ಹೀಗೆ ಗುರುತಿಸಿದ ಸಮಸ್ಯೆಗಳ ನಿವಾರಣೆಗೆ ಪ್ರಜ್ಞಾಪೂರ್ವಕ ಪ್ರಯತ್ನ ನಡೆಸಬೇಕು. ತಜ್ಞರು ಗುರುತಿಸಿರುವಂತೆ ಯಾವುದೇ ಅಭಿವೃದ್ಧಿ ಸೂಚಿಯನ್ನು ತೆಗೆದುಕೊಂಡರೂ ಅದು ಸಾಕ್ಷರತೆಯಿರಲಿ, ಆರೋಗ್ಯವಿರಲಿ, ಸಾಮಾಜಿಕ ಸ್ಥಾನಮಾನವಿರಲಿ, ಜೀವನಾಯುಷ್ಯವಿರಲಿ ಪರಿಶಿಷ್ಟರ ಸ್ಥಾನ ಕಟ್ಟಕಡೆಯದಾಗಿದೆ. ಇದನ್ನು ಪ್ರಸ್ತುತ ಅಧ್ಯಾಯದಲ್ಲಿ ಅಂಕಿಅಂಶಗಳ ಮೂಲಕ ದೃಢಪಡಿಸಲಾಗಿದೆ.

ಈ ಅಧ್ಯಾಯದಲ್ಲಿ ದಲಿತರು ಅನುಭವಿಸುತ್ತಿರುವ ಕೊರತೆ, ದಲಿತರಲ್ಲಿನ ಧಾರಣ ಸಾಮರ್ಥ್ಯಕ್ಕೆ ಸಂಬಂಧಿಸಿದ ಅಂತರಗಳು, ಅವರು ಎದುರಿಸುತ್ತಿರುವ ತಾರತಮ್ಯ, ಶಿಷ್ಟರು ಮತ್ತು ಪರಿಶಿಷ್ಟರ ನಡುವಿನ ಅಸಮಾನತೆ ಮುಂತಾದವುಗಳ ಬಗ್ಗೆ ಚರ್ಚೆ ಮಾಡಲಾಗಿದೆ. ಈ ಅಧ್ಯಾಯದ ಉದ್ದೇಶ ದಲಿತರ ವರ್ತಮಾನದ ದುಸ್ಥಿತಿ, ಅಸಮಾನತೆ, ಆರ್ಥಿಕ ದೌರ್ಬಲ್ಯ ಮುಂತಾದವುಗಳನ್ನು ಗುರುತಿಸುವುದಾಗಿದೆ. ಉದಾಹರಣೆಗೆ ೨೦೧೧-೨೦೧೨ರಲ್ಲಿ ಕರ್ನಾಟಕದಲ್ಲಿ ೧೮ರಿಂದ ೨೩ ವಯೋಮಾನದ ೨.೭೩ ಲಕ್ಷ ದಲಿತರು(೨.೦೫ ಲಕ್ಷ ಪ.ಜಾ ಮತ್ತು ೦.೬೮ ಲಕ್ಷ ಪ.ಪಂ) ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಅಧ್ಯಯನ ಮಾಡುತ್ತಿದ್ದರು. ಇಂದು ಅವರ ಸಂಖ್ಯೆಯು ಹೆಚ್ಚಾಗಿರಬಹುದು. ಇದೇನು ಸಣ್ಣ ಸಂಖ್ಯೆಯಲ್ಲ. ದಲಿತರ ಅನಕ್ಷರತೆ, ಶಾಲೆಯನ್ನು ಮಧ್ಯದಲ್ಲಿ ಬಿಡುವ ಮಕ್ಕಳು, ಕೂಲಿಯ ಅವಲಂಬನೆ ಮುಂತಾದವುಗಳ ಬಗ್ಗೆ ಹೆಚ್ಚು ಗಮನ ನೀಡುವುದಕ್ಕೆ ಪ್ರತಿಯಾಗಿ ಅವರಲ್ಲಿನ ಶಕ್ತಿ-ಸಾಮರ್ಥ್ಯಗಳ ಬಗ್ಗೆ ಗಮನ ನೀಡುವ ಅಗತ್ಯವಿದೆ. ನಮ್ಮಲ್ಲಿರುವ ಉನ್ನತ ಶಿಕ್ಷಣದಲ್ಲಿರುವ ೩ ಲಕ್ಷಕ್ಕೂ ಅಧಿಕ ದಲಿತರ ಸಶಕ್ತೀಕರಣದ ಬಗ್ಗೆ ಕಾರ್ಯಕ್ರಮಗಳನ್ನು ರೂಪಿಸುವ ಬಗ್ಗೆ ಗಮನ ನೀಡುವುದು ಅಪೇಕ್ಷಣೀಯ. ಇದನ್ನು ದಲಿತರ ಇತ್ಯಾತ್ಮಕ ಅಭಿವೃದ್ಧಿ ಕಾರ್ಯಕ್ರಮ ಎಂದು ಹೇಳಬಹುದು. ಸರ್ಕಾರದಿಂದ ವಿನಾಯಿತಿಗಳನ್ನು ಕೇಳುವುದು ಒಂದು ಬಗೆಯಾದರೆ, ದಲಿತರ ಸ್ವಸಾಮರ್ಥ್ಯವನ್ನು ಆಧರಿಸಿ ಅಭಿವೃದ್ಧಿಯನ್ನು ನಿರ್ವಹಿಸುವುದು ಮತ್ತೊಂದು ಬಗೆ.

### ೪.೭. ಈ ಅಧ್ಯಾಯದಲ್ಲಿ ಕಂಡುಬಂದ ದಲಿತ ಮತ್ತು ದಲಿತೇತರರ ನಡುವೆ ಅಭಿವೃದ್ಧಿ ಸಂಬಂಧಿಸಿದಂತೆ ವ್ಯತ್ಯಾಸಕ್ಕೆ ಕಾರಣಗಳು

ಈ ಅಧ್ಯಾಯದಲ್ಲಿ ವಿಶ್ಲೇಷಣೆ ಮಾಡಿರುವ ಸಂಗತಿಗಳ ಹಿನ್ನೆಲೆಯಲ್ಲಿ ಇದು ತಾತ್ಪರ್ಯ ಸ್ವರೂಪದ್ದು ಮತ್ತು ಈ ಅಧ್ಯಾಯದಲ್ಲಿ ಕಂಡುಬಂದ ದಲಿತ ಮತ್ತು ದಲಿತೇತರರ ನಡುವೆ ಅಭಿವೃದ್ಧಿ ಸಂಬಂಧಿಸಿದಂತೆ ವ್ಯತ್ಯಾಸಕ್ಕೆ ಕಾರಣಗಳನ್ನು ಮತ್ತು ಮುಂದೆ ಏನು ಮಾಡಬಹುದು ಎಂಬುದರ ಬಗ್ಗೆ ಕೆಲವು ಸಂಗತಿಗಳನ್ನು ಇಲ್ಲಿ ಮಂಡಿಸಲಾಗಿದೆ.

ಮೊದಲನೆಯದಾಗಿ ನಮ್ಮ ಸಮಾಜದಲ್ಲಿನ ಅಸಮಾನತೆಯು ಇತರೆ ದೇಶಗಳಲ್ಲಿನ ಅಸಮಾನತೆಯ ಬಗೆಯದ್ದಲ್ಲ. ಜಗತ್ತಿನಲ್ಲಿ ಅನೇಕ ದೇಶಗಳು ಅಸಮಾನತೆಗೆ ಅಂಟಿಕೊಂಡಿದ್ದ ಸಾಮಾಜಿಕ ಸಂಗತಿಗಳನ್ನು ನಿವಾರಿಸಿಕೊಳ್ಳುವುದರಲ್ಲಿ ಯಶಸ್ವಿಯಾಗಿವೆ. ಉದಾಹರಣೆಗೆ ಅಮೆರಿಕೆಯಲ್ಲಿನ ಕಪ್ಪು ಜನರ ಸಮಸ್ಯೆ, ದಕ್ಷಿಣ ಆಫ್ರಿಕದಲ್ಲಿನ ಅಪಾರ್ಥೇಡ್ ಸಮಸ್ಯೆ ಮುಂತಾದವು. ಅಲ್ಲಿ ಅಸಮಾನತೆಯು ಇಂದು ಹೆಚ್ಚು ಹೆಚ್ಚು ಆರ್ಥಿಕ ವಿಷಯಕ್ಕೆ, ವರ್ಗ ಸಂಬಂಧಗಳಿಗೆ ಸೀಮಿತಗೊಳ್ಳುತ್ತಿದೆ. ಆದರೆ ನಮ್ಮಲ್ಲಿ ಅದು ಹೆಚ್ಚು ಹೆಚ್ಚು ಸಾಮಾಜಿಕ ಚೌಕಟ್ಟಿನಲ್ಲಿ ಮುಂದುವರಿಯುತ್ತಿದೆ. ಪರಿಶಿಷ್ಟರ ಬದುಕು ಯಾವುದೇ ದೃಷ್ಟಿಯಿಂದ ಪರಿಗಣಿಸಿದರೂ ಸಮೃದ್ಧವಾಗಿಲ್ಲ. ಅದಕ್ಕಾಗಿ ಸಮಾಜ ಮತ್ತು ಸರ್ಕಾರ ಪ್ರಜ್ಞಾಪೂರ್ವಕವಾಗಿ ಪ್ರಯತ್ನಿಸುತ್ತಿಲ್ಲ.

ಎರಡನೆಯದಾಗಿ ಸಾಕ್ಷರತೆಗೆ ಸಂಬಂಧಿಸಿದ ಅಸಮಾನತೆಯನ್ನು ಮಾಪನ ಮಾಡುವುದಕ್ಕೆ ಸಂಬಂಧಿಸಿದಂತೆ ಸಮಸ್ಯೆಯಿದೆ. ಸಾಂಪ್ರದಾಯಿಕವಾಗಿ ನಡೆಸಿಕೊಂಡು ಬಂದಿರುವ ಸಾಕ್ಷರತೆಗೆ ಸಂಬಂಧಿಸಿದ ಅಸಮಾನತೆಯ ಮಾಪನಕ್ಕೆ ಪ್ರತಿಯಾಗಿ ಭಿನ್ನ ಕ್ರಮವನ್ನು ಇಲ್ಲಿ ಅನುಸರಿಸಲಾಗಿದೆ. ಸಾಮಾನ್ಯ ಸಾಕ್ಷರತಾ ಅಂತರವು ಸಾಮಾಜಿಕ ಸಾಕ್ಷರತಾ ಅಂತರಕ್ಕಿಂತ ಕಡಿಮೆಯಿದೆ.

ಮೂರನೆಯದಾಗಿ ಲಿಂಗ ಸಂಬಂಧಿ ಅಸಮಾನತೆಯನ್ನು ಪುರುಷರು ಮತ್ತು ಮಹಿಳೆಯರ ನಡುವಿನ ಅಸಮಾನತೆಯ ಜೊತೆಯಲ್ಲಿ ಶಿಷ್ಟ ಮಹಿಳೆಯರು ಮತ್ತು ಪರಿಶಿಷ್ಟ ಮಹಿಳೆಯರ ನಡುವಿನ ಅಸಮಾನತೆಯನ್ನು ಪರಿಗಣಿಸುವ ಅಗತ್ಯದ ಬಗ್ಗೆ ಇಲ್ಲಿ ಗಮನ ಸೆಳೆಯಲಾಗಿದೆ. ಜಾತಿ ಅಸಮಾನತೆಯು ವರ್ಗ ಅಸಮಾನತೆಗೆ ಹೇಗೆ ದಾರಿ ಮಾಡಿಕೊಡುತ್ತದೆ ಎಂಬುದನ್ನು ಇಲ್ಲಿ ಕಾಣಬಹುದು. ಲಿಂಗ ಅಸಮಾನತೆಯನ್ನು ಸಾಕ್ಷರತೆಗೆ ಮತ್ತು ದುಡಿಮೆಗೆ ಸಂಬಂಧಿಸಿದಂತೆ ಇಲ್ಲಿ ಚರ್ಚಿಸಲಾಗಿದೆ. ಜೀನ್ ಡ್ರೀಜ್ ಮತ್ತು ಅಮರ್ತ್ಯ ಸೇನ್ ಗುರುತಿಸಿರುವಂತೆ ಲಿಂಗ ಸಮಾನತೆ ಅನ್ನುವುದು ಕೇವಲ ಮಹಿಳೆಯರಿಗೆ ಸಂಬಂಧಿಸಿದ ಸಂಗತಿಯಲ್ಲ.

ನಾಲ್ಕನೆಯದಾಗಿ ದುಡಿಮೆಗಾರರ ಶಿಷ್ಟ ಮತ್ತು ಪರಿಶಿಷ್ಟ ಆಯಾಮವನ್ನು ತೋರಿಸಲಾಗಿದೆ. ಒಟ್ಟು ದುಡಿಮೆಗಾರರಲ್ಲಿ ಶಿಷ್ಟರ ಪ್ರಮಾಣ ಶೇ. ೭೪.೪೬ರಷ್ಟಿದ್ದರೆ ಪರಿಶಿಷ್ಟ ದುಡಿಮೆಗಾರರ ಪ್ರಮಾಣ ಶೇ. ೨೫.೫೪ರಷ್ಟಿದೆ. ಆದರೆ ಭೂಮಾಲಿಕರಲ್ಲಿ ಶಿಷ್ಟರ ಪ್ರಮಾಣ ಶೇ. ೭೯.೮೬ರಷ್ಟಿದ್ದರೆ ಪರಿಶಿಷ್ಟರ ಪ್ರಮಾಣ ಶೇ. ೨೦.೧೪ರಷ್ಟಿದೆ. ಇದಕ್ಕೆ ಪ್ರತಿಯಾಗಿ ಭೂರಹಿತ ದಿನಗೂಲಿ ದುಡಿಮೆಗಾರರಿಗೆ ಸಂಬಂಧಿಸಿದಂತೆ ಶಿಷ್ಟರ ಪ್ರಮಾಣ ಶೇ. ೫೮.೪೯ರಷ್ಟಿದ್ದರೆ ಪರಿಶಿಷ್ಟರ ಪ್ರಮಾಣ ಶೇ. ೪೧.೫೧ರಷ್ಟಿದೆ. ದುಡಿಮೆಗೆ ಸಂಬಂಧಿಸಿದಂತೆ ಹೆಚ್ಚು ಒತ್ತಡ ಪರಿಶಿಷ್ಟ ದುಡಿಮೆಗಾರರ ಮೇಲಿದೆ. ಪರಿಶ್ರಮ ಪರಿಶಿಷ್ಟರದ್ದು: ಫಲ ಮಾತ್ರ ಪ್ರತಿಷ್ಠಿತರ ಪಾಲು. ಇದು ಅಸಮಾನತೆ. ಚಾರಿತ್ರಿಕವಾಗಿ ಅನೂಚಾನವಾಗಿ ಮುಂದುವರಿದುಕೊಂಡು ಬರುತ್ತಿರುವ ಶಿಷ್ಟರು–ಪರಿಶಿಷ್ಟರುಗಳ ನಡುವಿನ ಅಸಮಾನತೆಯನ್ನು ನಿವಾರಿಸಲು ಸಮಾಜ ಮತ್ತು ಸರ್ಕಾರ ಪ್ರಜ್ಞಾಪೂರ್ವಕವಾಗಿ ಪ್ರಯತ್ನ ನಡೆಸ ಬೇಕಾಗುತ್ತದೆ. ಆದರೆ ಸರ್ಕಾರದ ಮಟ್ಟದಲ್ಲಿ, ತೋರಿಕೆಗಾದರೂ ದಲಿತರ ಬಗ್ಗೆ, ಕೆಳಜಾತಿ ಬಗ್ಗೆ, ಅಂಚಿನಲ್ಲಿರುವ

ಜನವರ್ಗದ ಬಗ್ಗೆ ಅನುಕಂಪೆಯ ಧೋರಣೆಯಿರುವುದನ್ನು ಕಾಣಬಹುದು. ಏಕೆಂದರೆ ದಲಿತ ವರ್ಗ, ಕೆಳಜಾತಿ ಮತ್ತು ಅಂಚಿನಲ್ಲಿರುವ ಜನವರ್ಗದ ಅಪಾರ ಸಂಖ್ಯೆಯ ಹಿನ್ನೆಲೆಯಲ್ಲಿ ಯಾವ ರಾಜಕೀಯ ಪಕ್ಷಗಳು ಅವರನ್ನು ನಿರ್ಲಕ್ಷಿಸಿ ಅವರಿಂದ ದೊರೆಯಬಹುದಾದ ರಾಜಕೀಯ (ಚುನಾವಣಾ) ಲಾಭವನ್ನು ಕಳೆದುಕೊಳ್ಳಲು ಸಿದ್ಧವಿರುವುದಿಲ್ಲ. ಸಾಮಾಜಿಕ ಸಮಾನತೆಯನ್ನು ಸಾಧಿಸಿಕೊಳ್ಳದಿದ್ದರೆ ಅಲ್ಲಿ ಪ್ರಜಾಪ್ರಭುತ್ವವು ಯಶಸ್ವಿಯಾಗುವುದಿಲ್ಲ. ಚುನಾವಣೆಗಳು ಕಾಲಕಾಲಕ್ಕೆ ನಡೆಯಬಹುದು. ಸಂವಿಧಾನಾತ್ಮಕ ನಿಯಮಗಳ ಪಾಲನೆಯಾಗುತ್ತಿರಬಹುದು. ಸಮಾಜದ ವಿವಿಧ ವರ್ಗಗಳಿಗೆ ರಾಜಕೀಯ ಪ್ರಾತಿನಿಧ್ಯ ನೀಡಿರಬಹುದು. ಮತದಾನದ ಹಕ್ಕನ್ನು ಎಲ್ಲರಿಗೂ ನೀಡಿರಬಹುದು. ಆದರೆ ಅದನ್ನು ಸ್ವತಂತ್ರವಾಗಿ ಮತ್ತು ವಿವೇಚನಾಯುತವಾಗಿ ಚಲಾಯಿಸುವ ಸಾಮರ್ಥ್ಯ ಜನರಿಗಿದೆಯೇ ಎಂಬ ಪ್ರಶ್ನೆಯನ್ನು ಇಲ್ಲಿ ಕೇಳಿಕೊಳ್ಳಬೇಕಾಗುತ್ತದೆ. ಇವೆಲ್ಲವೂ ನೇತ್ಯಾತ್ಮಕ ಹಕ್ಕುಗಳು. ಪರಿಶಿಷ್ಟರಿಗೆ ಬೇಕಾಗಿರುವುದು ಇತ್ಯಾತ್ಮಕ ಹಕ್ಕುಗಳು. ತಮ್ಮ ಬದುಕನ್ನು ತಾವು ಕಟ್ಟಿಕೊಳ್ಳಲು ಅವರು ಸಮರ್ಥರಾಗಿದ್ದಾರೆಯೇ? ಅವರು ತಮ್ಮ ಬಡತನವನ್ನು ನಿವಾರಿಸಿಕೊಳ್ಳಲು ಸಶಕ್ತರಾಗಿದ್ದಾರೆಯೇ? ಅನಕ್ಷರತೆಯನ್ನು ತೊಡೆಯಲು ಅವರಲ್ಲಿ ಸಾಮರ್ಥ್ಯವಿದೆಯೇ? ಇತ್ಯಾತ್ಮಕ ಹಕ್ಕುಗಳಲ್ಲಿ ಈ ಪ್ರಶ್ನೆಗಳು ಮುಖ್ಯವಾಗುತ್ತವೆ. ಅಸಮಾನತೆ ಅನ್ನುವುದು ಪ್ರಜಾಪ್ರಭುತ್ವವನ್ನು ದುರ್ಬಲಗೊಳಿಸಿ ಬಿಡುತ್ತದೆ. ನಮ್ಮ ಸಮಾಜದಲ್ಲಿ ಪ್ರಜಾಪ್ರಭುತ್ವದ ಸಾಮಾಜಿಕ ವ್ಯಾಪ್ತಿಯು ಸೀಮಿತವಾದುದಾಗಿದೆ. ವರಮಾನದ ಏರಿಕೆಯೊಡನೆ, ಉತ್ಪಾದನೆಯಲ್ಲಿನ ಹೆಚ್ಚಳದೊಂದಿಗೆ ಮತ್ತು ಬಂಡವಾಳ ಹೂಡಿಕೆಯು ವಿಸ್ತೃತಗೊಂಡಂತೆ ಅಸ್ಪೃಶ್ಯತೆ, ಅಸಮಾನತೆ, ಬಡತನ, ಹಸಿವು, ಲಿಂಗ ತಾರತಮ್ಯ ಮುಂತಾದವು ನಿವಾರಣೆಯಾಗಿ ಬಿಡುವುದಿಲ್ಲ. ಇವೆಲ್ಲ ಬಹು ಹಿಂದಿನಿಂದ ಮುಂದಿವರಿದುಕೊಂಡು ಬಂದಿವೆ. ಈ ವಿಷಯಗಳ ಬಗ್ಗೆ ನಾಗರಿಕ ಸಮಾಜ ಸದಾ ಜಾಗೃತವಾಗಿರಬೇಕು. ಇವೆಲ್ಲವನ್ನು ಶಾಸನಗಳ ಮೂಲಕ ತೊಡೆದು ಹಾಕುವುದು ಸಾಧ್ಯವಿಲ್ಲ. ಸ್ವಾತಂತ್ರ್ಯಪೂರ್ವ ಕಾಲದಿಂದಲೂ ದಲಿತರ ಮೇಲಿನ ದೌರ್ಜನ್ಯವನ್ನು ತಡೆಗಟ್ಟಲು ಶಾಸನಾತ್ಮಕ ಕ್ರಮಗಳನ್ನು ತೆಗೆದುಕೊಂಡು ಬರಲಾಗಿದೆ. ದಲಿತರ ಮೇಲಿನ ದೌರ್ಜನ್ಯವನ್ನು ತಡೆಯಲು ಜಾರಿಗೊಳಿಸಿದ ಶಾಸನಗಳೇನೋ ಸಾಕಷ್ಟಿವೆ. ಆದರೆ ದಲಿತರ ಮೇಲೆ ದೌರ್ಜನ್ಯ ನಡೆಯುತ್ತಲೇ ಇವೆ. ಉದಾಹರಣೆಗೆ ನ್ಯಾಷನಲ್ ಕ್ರೈಮ್ ರಿಕಾರ್ಡ್ಸ್ ಬ್ಯೂರೋದ ವರದಿ ಪ್ರಕಾರ ಭಾರತದಲ್ಲಿ ದಲಿತರ ಮೇಲೆ ನಡೆದ ದೌರ್ಜನ್ಯಗಳ ಸಂಖ್ಯೆ ೧೯೮೧ರಲ್ಲಿ ೧೪೩೬೮ರಷ್ಟಿತ್ತು. ಮುಂದೆ ಅದು ಹೆಚ್ಚುತ್ತಾ ಹೋಗಿದೆ.

**ಕೋಷ್ಟಕ ೪.೧೭. ಕರ್ನಾಟಕದಲ್ಲಿ ದಲಿತರು ಮತ್ತು ದಲಿತೇತರರ ನಡುವಿನ ಅಸಮಾನತೆಯ ಸಮಗ್ರ ನೋಟ ೨೦೧೧**

| ಕ್ರಸಂ. | ಸಮೃದ್ಧತೆಯ ಮತ್ತು ದುಸ್ಥಿತಿಯ ಸೂಚಿಗಳು | ಒಟ್ಟು | ದಲಿತೇತರರು | ದಲಿತರು |
|---|---|---|---|---|
| ೧ | ಒಟ್ಟು ಜನಸಂಖ್ಯೆ (ಲಕ್ಷಗಳಲ್ಲಿ) | ೬೧೧ | ೪೬೩.೭೪ (ಶೇ. ೭೫.೯೦) | ೧೪೭.೨೧ (ಶೇ. ೨೪.೧೦) |
| ೨ | ಒಟ್ಟು ಅಕ್ಷರಸ್ಥರು (ಲಕ್ಷಗಳಲ್ಲಿ) | ೪೦೬.೫ | ೩೨೪.೦೧ (ಶೇ. ೭೯.೭೧) | ೮೨.೪೬ (ಶೇ. ೨೦.೨೯) |
| ೩ | ಒಟ್ಟು ಸಾಕ್ಷರತಾ ಪ್ರಮಾಣ (ಶೇಕಡ) | ೭೫.೩೬ | ೭೮.೭೮ (ಶೇ. ೧೦೪.೫೩) | ೬೪.೩೮ (ಶೇ. ೮೫.೪೩) |
| ೪ | ಒಟ್ಟು ಅನಕ್ಷರಸ್ಥರು (ಲಕ್ಷಗಳಲ್ಲಿ) | ೧೩೨.೯ | ೮೭.೨೯ (ಶೇ. ೬೫.೭೦) | ೪೫.೫೮ (ಶೇ. ೩೪.೩೦) |
| ೫ | ಒಟ್ಟು ದುಡಿಮೆಗಾರರು (ಲಕ್ಷಗಳಲ್ಲಿ) | ೨೭೮.೭ | ೨೦೭.೫೪ (ಶೇ. ೭೪.೪೬) | ೭೧.೧೮ (ಶೇ. ೨೫.೫೪) |
| ೬ | ಒಟ್ಟು ಸಾಗುವಳಿದಾರರು/ಭೂಮಾಲೀಕರು (ಲಕ್ಷಗಳಲ್ಲಿ) | ೬೫.೮ | ೫೨.೫೫ (ಶೇ. ೭೯.೮೬) | ೧೩.೨೫ (ಶೇ. ೨೦.೧೪) |
| ೭ | ಒಟ್ಟು ಭೂರಹಿತ ದಿನಗೂಲಿ ದುಡಿಮೆಗಾರರು (ಲಕ್ಷಗಳಲ್ಲಿ) | ೭೧.೫೫ | ೪೧.೮೫ (ಶೇ. ೫೮.೪೯) | ೨೯.೭ –೪೧.೫೧ |
| ೮ | ಒಟ್ಟು ಕೃಷಿ ದುಡಿಮೆಗಾರರು (ಲಕ್ಷಗಳಲ್ಲಿ) | ೧೩೭.೪ | ೯೪.೪ (ಶೇ. ೬೮.೭೨) | ೪೨.೯೫ (ಶೇ. ೩೧.೨೮) |
| ೯ | ಒಟ್ಟು ಉಳುಮೆ ಮಾಡುವ ಭೂಹಿಡುವಳಿಗಳು (ಲಕ್ಷಗಳಲ್ಲಿ) | ೭೮.೨ | ೬೪.೩೩ (ಶೇ. ೮೨.೨೬) | ೧೩.೮೭ (ಶೇ. ೧೭.೭೪) |
| ೧೦ | ದುಡಿಮೆ ಸಹಭಾಗಿತ್ವ ಪ್ರಮಾಣ (ಶೇಕಡ) | ೪೫.೬೨ | ೪೪.೭೬ (ಶೇ. ೯೮.೧೧) | ೪೮.೩೪ (ಶೇ. ೧೦೫.೯೬) |
| ೧೧ | ಬಡತನ ರೇಖೆ ಕೆಳಗಿನ ಕುಟುಂಬ ಘಟಕಗಳು (ಶೇಕಡ) | ೨೦.೮ | ೧೩.೬ (ಶೇ. ೬೫.೩೮) | ೩೧.೮ (ಶೇ. ೧೫೨.೮೮) |

**ಮೂಲ:** ಈ ಕೋಷ್ಟಕವನ್ನು ಅಧ್ಯಾಯದಲ್ಲಿನ ಬೇರೆ ಬೇರೆ ಭಾಗದಲ್ಲಿ ನೀಡಿರುವ ವಿವರಗಳಿಂದ ಪಡೆದ ಅಂಕಿಗಳನ್ನು ಆಧರಿಸಿ ರೂಪಿಸಲಾಗಿದೆ. ಇಲ್ಲಿ ಸಂಬಂಧಿಸಿದ ಸೂಚಿಯ ವಿವರಕ್ಕೆ ಸಂಬಂಧಿಸಿದ ಪ್ರಬಂಧದ ಒಳಗಿನ ಕೊಷ್ಟಕವನ್ನು ನೋಡಬಹುದು. ಈ ಕೋಷ್ಟಕದ ಉದ್ದೇಶವೆಂದರೆ ದಲಿತರು ಮತ್ತು ದಲಿತೇತರರ ನಡುವಿನ ಅಸಮಾನತೆಯ ಒಂದು ಸಮಗ್ರ ಚಿತ್ರಣವನ್ನು ಒಂದು ಕಡೆ ನೀಡುವುದಾಗಿದೆ.

## ೪.೮. ಉಪಸಂಹಾರ

ಪ್ರಸ್ತುತ ಅಧ್ಯಾಯದಲ್ಲಿ ದಲಿತ ಮತ್ತು ದಲಿತೇತರ ನಡುವೆ ಅಭಿವೃದ್ಧಿ ಸಂಬಂಧಿಸಿದಂತೆ ವ್ಯತ್ಯಾಸಕ್ಕೆ ಕಾರಣಗಳನ್ನು ತಿಳಿಯಲಾಯಿತು. ದಲಿತರ ಭೂಮಿಯ ಪ್ರಶ್ನೆ, ಸಾಕ್ಷರತೆಯ ಪ್ರಶ್ನೆ ಹೀಗೆ ಹತ್ತು ಹಲವಾರು ಅಭಿವೃದ್ಧಿ ಸಂಬಂಧಿಸಿದ ಪ್ರಶ್ನೆಗಳನ್ನು ಕೇಳಿಕೊಳ್ಳಲಾಯಿತು. ಆದರೆ ದಲಿತರಲ್ಲಿನ ಅಸಮಾನತೆಯನ್ನು ಸೂಚಿಸುವ ಅಂಕಿಅಂಶಗಳು ನಮಗೆ ಎದ್ದು ಕಾಣುತ್ತದೆ.

ಕೋಷ್ಟಕ ೪.೧೭ರಲ್ಲಿ ಕಂಡುಬರುವಂತೆ ಒಟ್ಟು ಜನಸಂಖ್ಯೆಯಲ್ಲಿ ದಲಿತೇತರರು ಎಷ್ಟು ಪಾಲು ಪಡೆದಿದ್ದಾರೋ ಅದಕ್ಕಿಂತ ಹೆಚ್ಚಿನ ಪಾಲನ್ನು ಸಮಾಜ ಸಾಧಿಸಿಕೊಂಡಿರುವ ಸಮೃದ್ಧತೆ ಸೂಚಿಗಳಲ್ಲಿ ಅವರು ಪಡೆದಿದ್ದರೆ (ಕ್ರ.ಸಂ. ೨, ೫, ೬, ೮ ಮತ್ತು ೯) ದಲಿತರು ಮಾತ್ರ ಒಟ್ಟು ಜನಸಂಖ್ಯೆಯಲ್ಲಿ ಎಷ್ಟು ಪಾಲು ಪಡೆದಿದ್ದಾರೋ ಅದಕ್ಕಿಂತ ಕಡಿಮೆ ಪಾಲನ್ನು ಅವರು ಸಮೃದ್ಧತೆಯ ಸೂಚಿಗಳಲ್ಲಿ ಪಡೆದಿದ್ದಾರೆ (ಕ್ರ.ಸಂ. ೨, ೫, ೬, ೮  ಮತ್ತು ೯). ಇದಕ್ಕೆ ಪ್ರತಿಯಾಗಿ ಒಟ್ಟು ಜನಸಂಖ್ಯೆಯಲ್ಲಿ ದಲಿತೇತರರು ಎಷ್ಟು ಪಾಲು ಪಡೆದಿದ್ದಾರೋ ಅದಕ್ಕಿಂತ ಕಡಿಮೆ ಪಾಲನ್ನು ದುಸ್ಥಿತಿ ಸೂಚಿಗಳಲ್ಲಿ ಪಡೆದಿದ್ದರೆ (ಕ್ರ.ಸಂ. ೪ ಮತ್ತು ೭) ದಲಿತರು ಮಾತ್ರ ಒಟ್ಟು ಜನಸಂಖ್ಯೆಯಲ್ಲಿ ಎಷ್ಟು ಪಾಲು ಪಡೆದಿದ್ದಾರೋ ಅದಕ್ಕಿಂತ ಹೆಚ್ಚು ಪಾಲನ್ನು ದುಸ್ಥಿತಿ ಸೂಚಿಗಳಲ್ಲಿ ಪಡೆದಿದ್ದಾರೆ (ಕ್ರ.ಸಂ. ೪ ಮತ್ತು ೭). ಉಳಿದ ಮೂರು ಸೂಚಿಗಳಿಗೆ (ಕ್ರ.ಸಂ. ೩, ೧೦ ಮತ್ತು ೧೧) ಸಂಬಂಧಿಸಿದಂತೆಯೂ ದಲಿತ ಮತ್ತು ದಲಿತೇತರರ ನಡುವಿನ ಅಸಮಾನತೆಯ ಚಿತ್ರ ಭಿನ್ನವಾಗಿಲ್ಲ. ಒಟ್ಟು ರಾಜ್ಯವು ಯಾವ ಮಟ್ಟವನ್ನು ಸಂಬಂಧಿಸಿದ ಸೂಚಿಯಲ್ಲಿ ಪಡೆದಿದೆಯೋ ಅದಕ್ಕಿಂತ ಕಡಿಮೆ ಪಾಲನ್ನು ಶೇಕಡವಾರು ಸಾಕ್ಷರತೆ ಪ್ರಮಾಣದಲ್ಲಿ ದಲಿತರು ಪಡೆದಿದ್ದರೆ(ಕ್ರ.ಸಂ.೩) ದುಡಿಮೆ ಸಹಭಾಗಿತ್ವ(ಕ್ರ.ಸಂ.೧೦) ಮತ್ತು ಬಡತನ ರೇಖೆಗೆ(ಕ್ರ.ಸಂ. ೧೧) ಸಂಬಂಧಿಸಿದಂತೆ ದಲಿತೇತರರ ಪಾಲು ಶೇಕಡವಾರು ಕಡಿಮೆಯಿದೆ ಮತ್ತು ದಲಿತರ ಪಾಲು ಅಧಿಕವಾಗಿದೆ. ಅಂದರೆ ದುಸ್ಥಿತಿಗೆ ಸಂಬಂಧಿಸಿದ ಸಂಗತಿಯಾದರೆ ಅದರ ಹೊರೆ ದಲಿತರ ಮೇಲೆ ಅಧಿಕವಾಗಿದೆ. ಇದಕ್ಕೆ ಪ್ರತಿಯಾಗಿ ಸಮೃದ್ಧಿಗೆ ಸಂಬಂಧಿಸಿದ ಸೂಚಿಯಾದರೆ ಅದರಲ್ಲಿ ದಲಿತೇತರ ಪಾಲು ಸಾಪೇಕ್ಷವಾಗಿ ಅಧಿಕವಾಗಿದೆ. ಉದಾಹರಣೆಗೆ ಬಡತನರೇಖೆಗೆ ಸಂಬಂಧಿಸಿದಂತೆ ದಲಿತರ ಪ್ರಮಾಣ ರಾಜ್ಯ ಸರಾಸರಿಗಿಂತ ಒಂದೂವರೆ ಪಟ್ಟು ಅಧಿಕವಾಗಿದೆ. ದಲಿತೇತರರಿಗೆ ಸಂಬಂಧಿಸಿದಂತೆ ಬಡತನರೇಖೆ ಕೆಳಗೆ ಜೀವಿಸುವವರ ಪ್ರಮಾಣ ರಾಜ್ಯ ಸರಾಸರಿಯ ಮೂರನೆಯ ಎರಡರಷ್ಟಿದೆ. ಅದೇ ರೀತಿ ಸಾಕ್ಷರತೆಯಲ್ಲಿ ದಲಿತೇತರರ ಸಾಕ್ಷರತಾ ಪ್ರಮಾಣ ಒಟ್ಟು ಸಾಕ್ಷರತಾ ಪ್ರಮಾಣಕ್ಕಿಂತ ಅಧಿಕವಾಗಿದ್ದರೆ ದಲಿತರ ಸಾಕ್ಷರತಾ ಪ್ರಮಾಣ ಕಡಿಮೆಯಿದೆ.

ಪರಿಶಿಷ್ಟರ ಅಭಿವೃದ್ಧಿ ಅನ್ನುವುದು ಅನುಕಂಪದ ಸಂಗತಿಯಾಗಬಾರದು. ಅಧಿಕಾರ ಸಂಬಂಧಗಳಲ್ಲಿ ಮತ್ತು ಸಂಪನ್ಮೂಲಗಳ ಮಾಲೀಕತ್ವದಲ್ಲಿ ಬದಲಾವಣೆಗಳನ್ನು ತರದೆ ಸಮಾನತೆಯನ್ನು ಸಾಧಿಸಿಕೊಳ್ಳುವುದು ಅಸಾಧ್ಯ. ಆರ್ಥಿಕ ಸಂಗತಿಗಳು ಮುಖ್ಯ ನಿಜ. ಅದರ ಜೊತೆಗೆ ಸಮಸ್ಯೆಯ ಇತರ ಆಯಾಮಗಳನ್ನು ಪರಿಗಣಿಸಬೇಕಾಗುತ್ತದೆ. ದಲಿತರ ಸಂದರ್ಭದಲ್ಲಿ ನಾವು ಕೇವಲ ಆರ್ಥಿಕ ಬದಲಾವಣೆಗಳ ಬಗ್ಗೆ ಗಮನ ನೀಡಿದರೆ ಸಾಕಾಗುವುದಿಲ್ಲ. ದಲಿತರ ಅಭಿವೃದ್ಧಿ ಅನ್ನುವುದು ಕೇವಲ ವರಮಾನಕ್ಕೆ, ಜಿಡಿಪಿಯ ಬೆಳವಣಿಗೆಗೆ, ಬಂಡವಾಳ ಹೂಡಿಕೆಗೆ ಸಂಬಂಧಿಸಿದ ಸಂಗತಿಯಲ್ಲ. ಅದು ಮೂಲಭೂತವಾಗಿ ಸಾಮಾಜಿಕವಾದುದು. ಇಂದು ಸಾಮಾಜಿಕವಾಗಿಯೂ ಅಧಿಕಾರ ಸಂಬಂಧಗಳಲ್ಲಿ ಬದಲಾವಣೆಗಳಾಗಬೇಕು. ಇದೆಲ್ಲ ತನ್ನಷ್ಟಕ್ಕೆ ತಾನೆ ನಡೆಯುವ ಸಂಗತಿಯಲ್ಲ. ದಲಿತರ ಅಭಿವೃದ್ಧಿ ಅನ್ನುವುದು ಹಂಗಿನ ಸಂಗತಿಯಲ್ಲ. ಅದು ಹಕ್ಕಿನ ಸಂಗತಿ. ಅದು ಅನುಕಂಪದ

ಸಂಗತಿಯಲ್ಲ. ಈ ಅಧ್ಯಾಯದಲ್ಲಿ ದಲಿತರ ಸಂವಿಧಾನಾತ್ಮಕ ಭದ್ರತೆ ಮತ್ತು ರಕ್ಷಣೆಗಳ ಬಗ್ಗೆಯೂ ಚರ್ಚೆ ಮಾಡಲಾಗಿದೆ. ಅಂದಮೇಲೆ ದಲಿತರ ಮಾನವ ಅಭಿವೃದ್ಧಿಯು ಕೇವಲ ಮಾನವ ಹಕ್ಕು ಮಾತ್ರವಲ್ಲ. ಅದು ಸಂವಿಧಾನಾತ್ಮಕ ಹಕ್ಕು. ಸಮಾಜ ಸೇವೆಯ ಸಂಗತಿಯನ್ನು ಉದ್ಧೀಪನಗೊಳಿಸುವ ಮೂಲಕ ದಲಿತರ ಅಭಿವೃದ್ಧಿಯನ್ನು ಸಾಧಿಸಿಕೊಳ್ಳಲು ಬರುವುದಿಲ್ಲ. ಅಲ್ಲಿ ಸಂಘರ್ಷವಿದೆ. ಅಭಿವೃದ್ಧಿ ಅನ್ನುವುದು 'ಅಯ್ಯೋ ಪಾಪ' ಅನ್ನುವ ಉದ್ಗಾರದ ಸಂಗತಿಯಲ್ಲ. ಸಮಾಜದ ವಿವಿಧ ಸಾಮಾಜಿಕ ಗುಂಪುಗಳ, ಸಾಮಾಜಿಕವಾಗಿ ಅಂಚಿನಲ್ಲಿರುವ ಜನವರ್ಗದ ವಿಮೋಚನೆಯ ಪ್ರಶ್ನೆ ಇಲ್ಲಿ ಮೂಲೆಗುಂಪಾಗಿಬಿಟ್ಟಿದೆ. ದೇಶದ ವಿಮೋಚನೆಯಾದರೆ ಜನರ ವಿಮೋಚನೆಯಾಗುತ್ತದೆ ಅನ್ನುವುದು ಸರಿಯಲ್ಲ. ಹಾಗೆ ಅದು ನಡೆಯುವುದಿಲ್ಲ. ದೇಶ ಅನ್ನುವುದು ಅನೇಕ ಜಾತಿ, ವರ್ಗಗಳ ಸಮೂಹ. ತಾತ್ವಿಕವಾಗಿ ದೇಶವನ್ನು ಒಂದು ಅಖಂಡ ಘಟಕವಾಗಿ ಪರಿಭಾವಿಸಿಕೊಳ್ಳಬಹುದು. ಆದರೆ ಸಾಮಾಜಿಕವಾಗಿ ಅದನ್ನು ಅನೇಕ ವರ್ಗ–ಜಾತಿಗಳ ಸಮೂಹ ಎಂದು ಖಂಡ ಸ್ವರೂಪದಲ್ಲಿ ಅರ್ಥ ಮಾಡಿಕೊಳ್ಳದೆ ಬೇರೆ ಮಾರ್ಗವಿಲ್ಲ. ದೇಶದ ವಿಮೋಚನೆಯಾಗಿಬಿಟ್ಟರೆ ಜನರ, ಅದರಲ್ಲೂ ದಲಿತರ, ಮಹಿಳೆಯರ ವಿಮೋಚನೆಯೂ ಆಗುತ್ತದೆ ಎಂಬುದು ಕೇವಲ ಭ್ರಮೆ.

---

**ಟಿಪ್ಪಣಿ:** ಶಿಷ್ಟ ಮತ್ತು ಪರಿಶಿಷ್ಟ ಪರಿಭಾವನೆಗಳಿಗೆ ವಿವರಣೆ ಅಗತ್ಯ. ಅವು ಕೇವಲ ಶಬ್ದಗಳಲ್ಲ. ಅವು ಪಾರಿಭಾಷಿಕ ಪರಿಭಾವನೆಗಳು. ಅವುಗಳ ಶಬ್ದಕೋಶದ ಅರ್ಥ ಸೀಮಿತವಾದುದು. ಇವೆರಡು ವೈದಿಕ ಪರಿಭಾಷೆಗೆ ಸೇರಿದ ನುಡಿಗಳಾಗಿವೆ. ಈ ಹಿನ್ನೆಲೆಯಲ್ಲಿಯೇ ಅವುಗಳ ಅರ್ಥ ವ್ಯಾಪ್ತಿಯನ್ನು ಅರಿತುಕೊಳ್ಳಬೇಕು. ಶಿಷ್ಟ ಅನ್ನುವುದನ್ನು ವಿವಿಧ ರೀತಿಯಲ್ಲಿ ನಿರ್ವಚಿಸಲಾಗಿದೆ. ಆದರೆ ಪರಿಶಿಷ್ಟ ಅನ್ನುವುದಕ್ಕೆ ಹೆಚ್ಚಿನ ವಿವರಣೆ ಧರ್ಮ ಗ್ರಂಥಗಳಲ್ಲಿ ದೊರೆಯುವುದಿಲ್ಲ. ಇಲ್ಲಿ ಶಿಷ್ಟ ಅನ್ನುವ ಪರಿಭಾವನೆಯನ್ನು ವೈದಿಕ ಶಾಸ್ತ್ರದಲ್ಲಿ ಹೇಗೆ ಪರಿಭಾವಿಸಿಕೊಳ್ಳಲಾಗಿದೆ ಎಂಬುದನ್ನು ಸ್ಥೂಲವಾಗಿ ವಿವರಿಸಲಾಗಿದೆ. ವೈದಿಕ ಸಮಾಜವನ್ನು ಸಂರಕ್ಷಿಸುವ ಮತ್ತು ಬ್ರಾಹ್ಮಣ ಧರ್ಮವನ್ನು ಪರಮೋಚ್ಛ ಸ್ಥಾನದಲ್ಲಿ ಮುಂದುವರಿಯುವಂತೆ ಮಾಡುವ ಜವಾಬ್ದಾರಿಯನ್ನು ನಿರ್ವಹಿಸುವವರು ಶಿಷ್ಟರು. 'ಶಿಷ್ಟ' ನುಡಿಯಲ್ಲಿ ಶೀಲ ಅನ್ನುವುದು ಅಂತರ್ಗತಗೊಂಡಿದೆ. ಶಿಷ್ಟಾಚಾರ ಅನ್ನುವ ನುಡಿಗೆ ಮೂಲ ಶಿಷ್ಟ. ಶಿಷ್ಟರು ಅಂದರೆ ವಿವೇಕಿಗಳು ಅನ್ನುವ ಅರ್ಥವಿದೆ. ಮೋಹ, ಮೋಸ, ಮೌಢ್ಯಗಳಿಂದ ಮುಕ್ತರಾಗಿರುವವರು ಶಿಷ್ಟರು. ನಾಲ್ಕು ವೇದಗಳು, ಇತಿಹಾಸ ಮತ್ತು ಪುರಾಣಗಳ ಬಗ್ಗೆ ಜ್ಞಾನ ಇರುವವರು ಶಿಷ್ಟರು. ಬಯಕೆ/ಆಸೆಯಿಂದ ಮುಕ್ತರಾದವರು ಶಿಷ್ಟರು. ಬ್ರಾಹ್ಮಣರನ್ನು ಶಿಷ್ಟರು ಎಂದು ಸಂಬೋಧಿಸಲಾಗುತ್ತದೆ. ನಾಲ್ಕು ವರ್ಣಗಳಲ್ಲಿ ಮೊದಲ ಮೂರು ವರ್ಣಗಳು ಶಿಷ್ಟವಾದರೆ ನಾಲ್ಕನೆಯ ವರ್ಣದವರು ಶೂದ್ರರು. ಅತಿಶೂದ್ರರನ್ನು ಪರಿಶಿಷ್ಟರು ಎಂದು ವರ್ಗೀಕರಿಸಿರುವುದನ್ನು ಇಲ್ಲಿ ಕಾಣಬಹುದು(ವಿವರಗಳಿಗೆ ನೋಡಿ: ಮೋಹನ್ ಲಾಲ್. 'ಎನ್‌ಸೈಕ್ಲೋಪೀಡಿಯಾ ಆಫ್ ಇಂಡಿಯನ್ ಲಿಟರೇಚರ್: ಸಸೋ ಟು ಜೋರ್‌ಘಾಟ್'. ಸಾಹಿತ್ಯ ಅಕಾಡಮಿ, ನವದೆಹಲಿ. ೧೯೯೨). ಡಾ. ಬಿ.ಆರ್. ಅಂಬೇಡ್ಕರ್ ಅವರು ತಮ್ಮ 'ರಿಡಲ್ಸ್ ಇನ್ ಹಿಂದೂಯಿಸಮ್' ಕೃತಿಯಲ್ಲಿ ಇದರ ಬಗ್ಗೆ ಚರ್ಚೆ ಮಾಡಿದ್ದಾರೆ. ಶಿಷ್ಟರು ಅನ್ನುವುದಕ್ಕೆ ವಿರುದ್ಧವಾಗಿ ಪರಿಶಿಷ್ಟರು ಅನ್ನುವುದನ್ನು ತಿಳಿದುಕೊಳ್ಳಬಹುದು. ಶಬ್ದಕೋಶದಲ್ಲಿ ಪರಿಶಿಷ್ಟ ಅನ್ನುವುದಕ್ಕೆ ಪುಸ್ತಕದಲ್ಲಿ ಉಳಿದ ಅಂಶಗಳನ್ನು ಕೊನೆಗೆ ಸೇರಿಸಿದ ಭಾಗ; ಅನುಬಂಧ ಎಂದು ಅರ್ಥ ನೀಡಲಾಗಿದೆ. ಅಂದರೆ ಸಮಾಜದಲ್ಲಿನ ಪ್ರಧಾನಧಾರೆಗೆ ಅನುಬಂಧ ಪರಿಶಿಷ್ಟರು. ಇವರಿಗೆ ವೇದಗಳನ್ನು ಅಧ್ಯಯನ ಮಾಡುವ ಹಕ್ಕು ಇರುವುದಿಲ್ಲ.

ಶಿಷ್ಟಾಚಾರ ಮತ್ತು ಸದಾಚಾರ ಇಲ್ಲದವರು ಎಂಬ ಕೀಳಾಗಿ ಪರಿಶಿಷ್ಟರನ್ನು ಕಾಣಲಾಗುತ್ತದೆ. ನಮ್ಮ ದೇಶದಲ್ಲಿನ ಧರ್ಮದ ಮೂಲದಲ್ಲಿಯೇ ಅಸಮಾನತೆಯು ನಿಯಮವೆನ್ನುವಂತೆ ಅಂತರ್ಗತಗೊಂಡಿದೆ. ಸರಳವಾಗಿ ಹೇಳುವುದಾದರೆ ಶಿಷ್ಟ ಅನ್ನುವುದು ಪ್ರಧಾನವೆಂತಲೂ, ಪರಿಶಿಷ್ಟರು ಅನ್ನುವುದನ್ನು ಅಧೀನ ಅಂತಲೂ ಅರ್ಥ ಮಾಡಿಕೊಳ್ಳಬಹುದು. ಸಮಾಜದಲ್ಲಿ ಶಿಷ್ಟರು ಕೇಂದ್ರವಾದರೆ ಪರಿಶಿಷ್ಟರು ಪರಿಧಿ.

ಅಧ್ಯಾಯ ಐದು

# ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಮತ್ತು ಅದರ ಫಲಿತಗಳು

ಪ್ರಸ್ತಾವನೆ

ಮಾನವ ಅಭಿವೃದ್ಧಿ ಮತ್ತು ದಲಿತ ಮಾನವ ಅಭಿವೃದ್ಧಿ

ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳ ಒಂದು ಸ್ಥೂಲ ಪರಿಚಯ

ಜಿಲ್ಲಾ ಸಂಯುಕ್ತ ದಲಿತ ಮಾನವ ಅಭಿವೃದ್ಧಿ ಸೂಚಿ(ಸಿ.ಡಿ.ಡಿ.ಐ)

ದಲಿತರ ಅಭಿವೃದ್ಧಿ ಹಕ್ಕಿನ ಪ್ರಶ್ನೆಗಳು

ಉಪಸಂಹಾರ

ಅಧ್ಯಾಯ ಐದು

# ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಮತ್ತು ಅದರ ಫಲಿತಗಳು

## ೫.೧. ಪ್ರಸ್ತಾವನೆ

ಈ ಹಿಂದಿನ ಅಧ್ಯಾಯಗಳಲ್ಲಿ ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಅಧ್ಯಯನಗಳ ಜೊತೆಗೆ ದಲಿತ ಮಾನವ ಅಭಿವೃದ್ಧಿ ಅಧ್ಯಯನಗಳ ಆಯಾಮಗಳನ್ನು ಚರ್ಚಿಸಲಾಗಿದೆ. ದಲಿತ ಮತ್ತು ದಲಿತೇತರ ನಡುವೆ ಅಭಿವೃದ್ಧಿಗೆ ಸಂಬಂಧಿಸಿದಂತೆ ವ್ಯತ್ಯಾಸಕ್ಕೆ ಕಾರಣಗಳನ್ನು ವಿವರಿಸಲಾಯಿತು. ಆದರೆ ಮಾನವ ಅಭಿವೃದ್ಧಿ ಮತ್ತು ದಲಿತ ಮಾನವ ಅಭಿವೃದ್ಧಿ ವ್ಯತ್ಯಾಸಗಳನ್ನು, ದಲಿತರ ಮುಂದಿನ ದಾರಿ, ದಲಿತರ ಅಭಿವೃದ್ಧಿ ಹಕ್ಕಿನ ಪ್ರಶ್ನೆಗಳ ಬಗ್ಗೆ ತಿಳಿದುಕೊಳ್ಳುವುದು ಅತ್ಯಗತ್ಯವಾಗಿದೆ. ದಲಿತರು ಸಮಾಜದ ಅವಿಭಾಜ್ಯ ಭಾಗವಾಗಿದ್ದಾರೆ. ಆದರೆ ಅವರು ಅದೇ ಸಮಯದಲ್ಲಿ ಸಾಮಾಜಿಕ ಪ್ರತ್ಯೇಕತೆಯನ್ನು ಅನುಭವಿಸುತ್ತಿದ್ದಾರೆ. ಇದು ವಿಚಿತ್ರವಾದ ಸನ್ನಿವೇಶವಾಗಿದೆ. ಭಾರತೀಯ ಆರ್ಥಿಕ ಅಭಿವೃದ್ಧಿಯ ವಿಶೇಷತೆಯೇನೆಂದರೆ ಅದರ ಫಲಗಳಿಂದ ದಲಿತರು ವಂಚಿತರಾಗಿರುವುದು. ಮಾನವ ಅಭಿವೃದ್ಧಿ ಸೂಚಿಯು ಪ್ರಾದೇಶಿಕ ಅಭಿವೃದ್ಧಿಯನ್ನು ಅಳೆಯುತ್ತದೆ ಮತ್ತು ರಚನಾತ್ಮಕ ವಿಷಯಗಳ ಜೊತೆಗೆ ವ್ಯವಹರಿಸುತ್ತದೆ. ಮಾನವ ಅಭಿವೃದ್ಧಿ ಸೂಚಿಯು ಸಾಮಾಜಿಕ ಸೂಚ್ಯಂಕಗಳನ್ನು ಮತ್ತು ಐತಿಹಾಸಿಕ ಸಾಮಾಜಿಕ ಸಮಸ್ಯೆಗಳನ್ನು ಒಳಗೊಂಡಿರುವುದಿಲ್ಲ. ಅದಕ್ಕೆ ದಲಿತರ ಅಭಿವೃದ್ಧಿ ಸೂಚಿಗಳನ್ನು ಅಳತೆ ಮಾಡಲು ಪ್ರತ್ಯೇಕವಾದ ಸೂಚಿಯ ಅಗತ್ಯವಿದೆ. ಅದನ್ನು ಕರ್ನಾಟಕವು ತನ್ನ ಮಾನವ ಅಭಿವೃದ್ಧಿಗಳಲ್ಲಿ ಪ್ರತ್ಯೇಕವಾದ ಹತ್ತು ಸೂಚಿಗಳನ್ನು ಅಭಿವೃದ್ಧಿಪಡಿಸಿದೆ ಅದನ್ನು ಈ ಅಧ್ಯಾಯದಲ್ಲಿ ಬಳಸಲಾಗಿದೆ. ಇವುಗಳನ್ನು ಬಳಸಿಕೊಂಡು ಶೇ. ೧೦೦ಕ್ಕೆ ಲೆಕ್ಕ ಹಾಕಿ ಫಲಿತಗಳನ್ನು ಹೊರತರಲಾಗಿದೆ. ಪ್ರಸ್ತುತ ದಲಿತರ ಅಭಿವೃದ್ಧಿ ಪ್ರಮಾಣ ತಿಳಿಯುವುದು ಹಾಗೂ ದಲಿತರ ಹಕ್ಕಿನ ಪ್ರಶ್ನೆಗಳು ಏನು ಎಂಬುದು ಮುಖ್ಯವಾಗುತ್ತದೆ. ಪ್ರಸ್ತುತ ಅಧ್ಯಾಯವು ಕರ್ನಾಟಕದ ೩೦ ಜಿಲ್ಲೆಗಳ ಸಂಯುಕ್ತ ದಲಿತ ಮಾನವ ಅಭಿವೃದ್ಧಿ ಸೂಚಿಗಳನ್ನು ಬಳಸಿಕೊಂಡು ಆನುಷಂಗಿಕ ಅಧ್ಯಯನ ನಡೆಸಲಾಗಿದೆ. ಇದು ಒಂದು ತುಲಾನಾತ್ಮಕ ಅಧ್ಯಯನವಾಗಿರುವುದರಿಂದ ಸಂಶೋಧನಾ ಚೌಕಟ್ಟಿನಲ್ಲಿ, ಲಭ್ಯವಾಗಿರುವ ಅಂಕಿಅಂಶಗಳ ಮುಖಾಂತರ ಫಲಿತಗಳನ್ನು ಹೊರತೆಗೆಯಲಾಗಿದೆ.

### ೫.೨. ಮಾನವ ಅಭಿವೃದ್ಧಿ ಮತ್ತು ದಲಿತ ಮಾನವ ಅಭಿವೃದ್ಧಿ

ಪ್ರಸ್ತುತ ಬದುಕುತ್ತಿರುವವರ ಮುಂದೆ ಬರುವ ತಲೆಮಾರಿನ ಜನರನ್ನು ಒಳಗೊಳ್ಳುವ ಅಭಿವೃದ್ಧಿಯ ಪ್ರಶ್ನೆಯನ್ನು ಮುಖ್ಯವಾಗಿ ಅಂತರ್ಗತ ಮಾಡಿಕೊಂಡಿರುವ ಮಾನವ ಅಭಿವೃದ್ಧಿ ಕುರಿತ ವಿಚಾರಗಳು ಮೆಹಬೂಬ್-ಉಲ್-ಹಕ್, ಅಮರ್ತ್ಯ ಸೇನ್, ಜೀನ್ ಡ್ರೀಜ್ ಮುಂತಾದವರು ಬರಹಗಳಲ್ಲಿ ಹಾಗೂ ಯು.ಎನ್.ಡಿ.ಪಿ.ಯ ಮಾನವ ಅಭಿವೃದ್ಧಿ ವರದಿಗಳಲ್ಲಿ, ಭಾರತ, ಪಾಕಿಸ್ತಾನ ಮುಂತಾದ ದೇಶಗಳು ಪ್ರಕಟಿಸಿರುವ ಮಾನವ ಅಭಿವೃದ್ಧಿ ವರದಿಗಳಲ್ಲಿ ಸ್ಪಷ್ಟ ರೂಪಗಳನ್ನು ಪಡೆದುಕೊಳ್ಳುತ್ತಿವೆ. ಇದರಿಂದ ಮಾನವ ಅಭಿವೃದ್ಧಿ ಪರಿಭಾವನೆ ಹೊಸದಾಗಿ ಹಾಗು ಪ್ರಥಮಬಾರಿಗೆ ಶೋಧಿಸಿದ ಸಿದ್ಧಾಂತವೆಂದು ಭಾವಿಸಬೇಕಾಗಿಲ್ಲ. ಏಕೆಂದರೆ ಮಾನವ ಅಭಿವೃದ್ಧಿ ಅನುಷ್ಠಾನದ ಅಗತ್ಯವನ್ನು ಇಂದು ಸಾರಿಸಾರಿ ಹೇಳಲಾಗುತ್ತಿದೆ.

೧. ಜನರ ನಿರೀಕ್ಷಿತ ಆಯಸ್ಸನ್ನು ಆಧರಿಸಿದ ಜೀವನಾಯುಷ್ಯ.

೨. ವಯಸ್ಕರ ಸಾಕ್ಷರತೆ, ಪದವಿ ಮತ್ತು ಉನ್ನತ ಶಿಕ್ಷಣದ ದಾಖಲಾತಿಗಳನ್ನು ಒಳಗೊಂಡ ಶೈಕ್ಷಣಿಕ ಸಾಧನೆ.

೩. ನೈಜ ಒಟ್ಟು ಆಂತರಿಕ ಉತ್ಪನ್ನವನ್ನು ಆಧರಿಸಿದ ಜೀವನ ಮಟ್ಟ.

ಇವು ಮಾನವ ಅಭಿವೃದ್ಧಿಯಲ್ಲಿನ ಮುಖ್ಯಸೂಚಿಗಳು. ಇದರೊಂದಿಗೆ ಯು.ಎನ್.ಡಿ.ಪಿ.ಯು ಎರಡು ಲಿಂಗಸಂಬಂಧಿ ಸೂಚ್ಯಂಕಗಳನ್ನು ರೂಪಿಸಿದೆ.

೧. ಲಿಂಗ ಸಂಬಂಧಿ ಅಭಿವೃದ್ಧಿ ಸೂಚ್ಯಂಕ

೨. ಲಿಂಗ ಸಂಬಂಧಿ ಸಶಕ್ತೀಕರಣ ಮಾಪನ

ಇವುಗಳನ್ನು ಸಂಯುಕ್ತಗೊಳಿಸಿ ಇಂದು ಸ್ವಾತಂತ್ರ್ಯ ಅಭಿವೃದ್ಧಿಯೆಂಬ ಸಮಗ್ರ ಅಭಿವೃದ್ಧಿ ಮೀಮಾಂಸೆಯನ್ನು ಸೇನ್ ಅಭಿವೃದ್ಧಿಪಡಿಸುತ್ತಿರುವಂತೆ ಕಾಣುತ್ತಿದೆ. ಅವರ ಬರಹಗಳಲ್ಲಿ ಧಾರಣಾ ಸಾಮರ್ಥ್ಯವೆಂಬ ಮಾತಿನ ಜಾಗದಲ್ಲಿ ಇಂದು ಸ್ವಾತಂತ್ರ್ಯವೆಂಬ ನುಡಿ ಬಂದು ಕುಳಿತುಕೊಳ್ಳುತ್ತಿದೆ. ಅವರು ಇಂದು ಸ್ವಾತಂತ್ರ್ಯವು ಅಭಿವೃದ್ಧಿಯ ಪ್ರಧಾನ ಸಾಧನವೆಂದೂ ಮತ್ತು ಪ್ರಾಥಮಿಕ ಗುರಿಯೆಂದು ಪ್ರತಿಪಾದಿಸುತ್ತಿದ್ದಾರೆ.

#### ೫.೨.೧. ದಲಿತ ಮಾನವ ಅಭಿವೃದ್ಧಿ ಸೂಚಿ

ಮಾನವ ಅಭಿವೃದ್ಧಿ ಸೂಚಿಯಲ್ಲಿ ಪರಿಗಣಿಸುವ ಅಂಶಗಳಿಗೂ ದಲಿತ ಮಾನವ ಅಭಿವೃದ್ಧಿಯಲ್ಲಿ ಬಳಸುವ ಸೂಚಿಗಳಿಗೂ ವ್ಯತ್ಯಾಸವಿದೆ. ಏಕೆಂದರೆ ಮಾನವ ಅಭಿವೃದ್ಧಿಯು ಇಡೀ ಮನುಕುಲದ ಅಭಿವೃದ್ಧಿ ಸಂಗತಿಯನ್ನು ಏಕರೂಪವಾಗಿ ನೋಡುತ್ತದೆ ಮತ್ತು ಸಾಮಾಜಿಕ ಸ್ತರ ಸಂಗತಿಗಳನ್ನು ಅದು ಪರಿಗಣಿಸುವುದಿಲ್ಲ. ಜಾತಿ ಮತ್ತು ಅಸ್ಪೃಶ್ಯತೆಗಳೊಂದಿಗೆ ಜೋತುಕೊಂಡಿರುವ ಅಸಾಮರ್ಥ್ಯಗಳನ್ನು ಸೃಷ್ಟಿಸುವ ಸಂಗತಿಗಳನ್ನು ಮಾನವ ಅಭಿವೃದ್ಧಿ ಸೂಚಿ ಪರಿಗಣಿಸಿಯೇ ಇಲ್ಲ. ಆದುದರಿಂದ

ಮಾನವ ಅಭಿವೃದ್ಧಿ ಸೂಚಿ ಯಥಾರೂಪದಲ್ಲಿ ಅಥವಾ ಈಗ ಇರುವ ರೂಪದಲ್ಲಿ ಬಳಸಿದರೆ ದಲಿತರ ಅಥವಾ ಪಿರಮಿಡ್ ಬುಡದಲ್ಲಿರುವವರ ಅಭಿವೃದ್ಧಿಯನ್ನು ಮಾಪನ ಮಾಡಲು ಸಾಧ್ಯವಿಲ್ಲ. ಈ ಎಲ್ಲದರ ಹಿನ್ನೆಲೆಯಲ್ಲಿ ದಲಿತರ ಅಭಿವೃದ್ಧಿಯನ್ನು ಮಾಪನ ಮಾಡಲು ಪ್ರತ್ಯೇಕ ಸೂಚಿಯನ್ನು ಕಟ್ಟುವ ಅನಿವಾರ್ಯತೆ ಇದೆಯೆನ್ನವುದು ನನ್ನ ವಾದ. ದಲಿತರ ಅಭಿವೃದ್ಧಿಯನ್ನು ಮಾಪನ ಮಾಡುವ ಇಂಡೆಕ್ಸ್‌ನ್ನು ಮಾನವ ಅಭಿವೃದ್ಧಿ ಸೂಚಿಯಲ್ಲಿರುವ ಕೊರತೆಗಳನ್ನು ತುಂಬುವ ಜೊತೆಗೆ ರಾಜಕೀಯ ಅಂಶವನ್ನು ಒಳಗೊಂಡರೆ ಇನ್ನೂ ಹೆಚ್ಚು ಪರಿಣಾಮಕಾರಿಯಾಗುತ್ತದೆ. ಹೀಗೆ ದಲಿತ ಅಭಿವೃದ್ಧಿಯ ಒಟ್ಟು ಆರು ಆಯಾಮಗಳನ್ನು ಒಳಗೊಳ್ಳಲು, ತಾರತಮ್ಯ, ಸ್ವಾತಂತ್ರ್ಯ, ಜೀವನಮಟ್ಟ, ಲಿಂಗಸಂಬಂಧಿ ಸಮಸ್ಯೆ ವರಮಾನ ಮತ್ತು ಬಡತನಕ್ಕೆ ಪ್ರತಿಯಾಗಿ ಅದು ಬಡತನವನ್ನು ಮಾಪನ ಮಾಡಲು ಸೂಚ್ಯಂಕವನ್ನು ರೂಪಿಸಿದೆ. ಇವೆಲ್ಲವೂ ಪ್ರತಿ ತಲಾ ಒಟ್ಟು ದೇಶಿಯ ಉತ್ಪನ್ನಕ್ಕಿಂತ ವಿಸ್ತೃತ ನೆಲೆಯಲ್ಲಿ ಅಭಿವೃದ್ಧಿಯನ್ನು ಮಾಪನ ಮಾಡುತ್ತವೆ. ಇವೆಲ್ಲವೂ ಅಮರ್ತ್ಯ ಸೇನ್‌ರ ಸ್ವಾತಂತ್ರ್ಯವಾಗಿ ಅಭಿವೃದ್ಧಿಯೆಂಬ ವೈಚಾರಿಕ ನೆಲೆಯಿಂದ ಉದ್ಭವಿಸಿದ ಪರಿಭಾವನೆಗಳಾಗಿವೆ

ಮಾನವ ಅಭಿವೃದ್ಧಿ ಪರಿಕಲ್ಪನೆಯು ವ್ಯವಸ್ಥಿತವಾಗಿ ವಿಕಾಸಗೊಳ್ಳುತ್ತಾ ನಡೆದಿರುವ ಒಂದು ಧಾರೆಯಾಗಿದೆ. ಈ ವಿಕಾಸದ ಹಾದಿಯಲ್ಲಿ ಅಭಿವೃದ್ಧಿಯ ಮಾಪನಗಳು ಮಾತ್ರ ಬದಲಾಗುತ್ತಿಲ್ಲ. ಅಭಿವೃದ್ಧಿಯ ಅರ್ಥ ವ್ಯಾಪ್ತಿಯು ವಿಸ್ತೃತಗೊಳ್ಳುತ್ತಿದೆ. ಅದು ಈಗ ಲಿಂಗ ಸಂಬಂಧಿ ಆಯಾಮ, ಮಾನವ ಹಕ್ಕುಗಳ ಆಯಾಮ, ಧಾರಣಾ ಸಾಮರ್ಥ್ಯದ ಆಯಾಮ, ಜನತಾಂತ್ರಿಕ ಸ್ವಾತಂತ್ರ್ಯದ ಆಯಾಮವನ್ನು ಪಡೆದುಕೊಳ್ಳುತ್ತಿದೆ. ಉದಾಹರಣೆಗೆ ಸೇನ್‌ರ ಧಾರಣಾ ಸಾಮರ್ಥ್ಯ ಪರಿಕಲ್ಪನೆಯು ೧೯೮೦ರಿಂದಲೂ ವಿಕಾಸಗೊಳ್ಳುತ್ತಲೇ ನಡೆದಿದೆ. ಮೊದಲು ಅದನ್ನು ಕಲ್ಯಾಣ ಅರ್ಥಶಾಸ್ತ್ರದ ನೆಲೆಯಲ್ಲಿ ರೂಪಿಸಲಾಯಿತು. ವಿವಿಧ ಹಂತಗಳನ್ನು ಹಾದು ಬಂದು ಸ್ವಾತಂತ್ರ್ಯವಾಗಿ ಅಭಿವೃದ್ಧಿ ಎನ್ನುವಲ್ಲಿಗೆ ಬಂದು ನಿಂತಿದೆ. ಡೇನ್ ಗ್ಯಾನ್ ಫಿಲ್ ಮತ್ತು ಐರನಿವಾರ್ ಸ್ವವೆರನ್ (೨೦೦೬:೧೫೮)ರ ಪ್ರಕಾರ ಇತ್ಯಾತ್ಮಕ ಸ್ವಾತಂತ್ರ್ಯ ಮತ್ತು ಪ್ರತಿ ತಲಾ ಒಟ್ಟು ಆಂತರಿಕ ಉತ್ಪನ್ನಕ್ಕೆ ಪ್ರತಿಯಾದ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಹಾಗೂ ಮೂಲ ಸೌಕರ್ಯಗಳ ಲಭ್ಯಗಳನ್ನು ಗಮನದಲ್ಲಿಟ್ಟುಕೊಂಡು ದಲಿತ ಮಾನವ ಅಭಿವೃದ್ಧಿ ಸೂಚಿಯನ್ನು ಕಟ್ಟಲಾಗಿದೆ. ದಲಿತ ಮಾನವ ಅಭಿವೃದ್ಧಿ ಸೂಚಿ ಕೆಲವು ಸೂಚಿಗಳನ್ನು ಒಳಗೊಂಡಿದೆ. ಸಾಂಸ್ಥಿಕ ಒಳಗೊಳ್ಳುವಿಕೆ ಸೂಚ್ಯಂಕ, ಸಾಮಾಜಿಕ ಒಳಗೊಳ್ಳುವಿಕೆ ಸೂಚ್ಯಂಕ, ತಾರತಮ್ಯ ಅನುಭವದ ಸೂಚ್ಯಂಕ, ತಾರತಮ್ಯದ ವಿರುದ್ಧ ಪ್ರತಿಭಟನೆ ಸೂಚ್ಯಂಕ, ಸಂಘರ್ಷ ಪರಿಹಾರದ ಸೂಚ್ಯಂಕ, ಸ್ವಾತಂತ್ರ್ಯ ಅನುಭವದ ಸೂಚ್ಯಂಕ, ಜೀವನ ಮಟ್ಟ ಸೂಚ್ಯಂಕ, ದಲಿತ ಅಭಿವೃದ್ಧಿಯ ಲಿಂಗ ಸಂಬಂಧಿ ಸೂಚ್ಯಂಕ, ಮೂಲ ಸೌಲಭ್ಯಗಳ ಲಭ್ಯತೆಯ ಸೂಚ್ಯಂಕ, ಶೈಕ್ಷಣಿಕ ಸೌಲಭ್ಯಗಳ ಲಭ್ಯತೆಯ ಸೂಚ್ಯಂಕ. ಹೀಗೆ ಅಧ್ಯಯನದಲ್ಲಿ ೧೦ ಸೂಚಿಗಳನ್ನು ವ್ಯಕ್ತಪಡಿಸಲಾಗುತ್ತದೆ.

**೫.೩. ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳ ಒಂದು ಸ್ಥೂಲ ಪರಿಚಯ**

ಪ್ರಸ್ತುತ ಸಂಶೋಧನಾ ಅಧ್ಯಯನವು ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಅಧ್ಯಯನವಾಗಿದೆ. ಈ ಹಿಂದಿನ ಅಧ್ಯಯನಗಳಲ್ಲಿ ಮಾನವ ಅಭಿವೃದ್ಧಿ ಸಂಗತಿಗಳನ್ನು ಕೂಲಂಕಷವಾಗಿ ಚರ್ಚಿಸಲಾಗಿದೆ ಮತ್ತು ಉದ್ದೇಶಗಳ ಅನುಗುಣವಾಗಿ ಅಧ್ಯಯನ ಕಟ್ಟಿಕೊಡಲಾಗಿದೆ. ಈ ಅಧ್ಯಯದಲ್ಲಿ ದಲಿತ ಮಾನವ ಅಭಿವೃದ್ಧಿಯನ್ನು ಕೂಲಂಕುಷವಾಗಿ ಅಧ್ಯಯನ ನಡೆಸುವುದು ಮುಖ್ಯವಾಗುತ್ತದೆ. ಆಯ್ದುಕೊಂಡ ಅಧ್ಯಯನ ವಿಷಯವನ್ನು ತಿಳಿಸುವ ಸಲುವಾಗಿ ಇಲ್ಲಿ ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳ ಮಾನವ ಅಭಿವೃದ್ಧಿಯನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ ಮತ್ತು ಈ ಭಾಗಗಳ ಜಿಲ್ಲೆಯ ದಲಿತ ಅಭಿವೃದ್ಧಿ ಸೂಚ್ಯಂಕಗಳನ್ನು ಇಲ್ಲಿ ಪ್ರಧಾನವಾಗಿ ಚರ್ಚಿಸಲಾಗಿದೆ. ಕರ್ನಾಟಕದ ದಲಿತ ಮಾನವ ಅಭಿವೃದ್ಧಿಯನ್ನು ತಿಳಿಯಲು ಸಂಶೋಧನೆಯಲ್ಲಿ ಇಡೀ ಕರ್ನಾಟಕದ ಜಿಲ್ಲೆಗಳನ್ನು ಒಟ್ಟಾರೆಯಾಗಿ ಅಧ್ಯಯನ ಮಾಡಲು ಸಾಧ್ಯವಿಲ್ಲದ ಕಾರಣ ಇಲ್ಲಿ ಕರ್ನಾಟಕ ಸರ್ಕಾರ ಪ್ರಕಟಿಸಿರುವ ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಯನ್ನು ಬಳಸಲಾಗಿದೆ.

ದಾವಣಗೆರೆ ಮತ್ತು ಚಿತ್ರದುರ್ಗ ಒಂದು ಕಾಲದಲ್ಲಿ ಚಿತ್ರದುರ್ಗ ಜಿಲ್ಲೆಯಾಗಿತ್ತು. ಅದರೆ ವಿಭಜನೆಯಿಂದ ಎರಡು ಜಿಲ್ಲೆಗಳಾದವು ಚಿತ್ರದುರ್ಗ ಜಿಲ್ಲೆಯಲ್ಲಿ ಚಿತ್ರದುರ್ಗ, ಹೊಸದುರ್ಗ, ಹೊಳ್ಳಕೆರೆ, ಹಿರಿಯೂರು, ಚಳ್ಳಗೆರೆ ಮತ್ತು ಮೊಳಕಾಲ್ಮೂರು ಒಟ್ಟು ಆರು ತಾಲ್ಲೂಕಗಳು ಆಗಿ ಚಿತ್ರದುರ್ಗ ಜಿಲ್ಲೆಯಾಯಿತು. ಈ ಭಾಗದಲ್ಲಿ ಮಳೆಯ ಆಶ್ರಯದಲ್ಲಿ ಬದುಕುವುಂಟು. ಹೊಸದುರ್ಗ ಮತ್ತು ಹಿರಿಯೂರು ಕೆಲವು ಭಾಗದಲ್ಲಿ ಭಾಗಶಃ ಕೃತರ ನೀರಿನ ಆಶ್ರಯವುಂಟು. ಉಳಿದ ತಾಲ್ಲೂಗಳಲ್ಲಿ ಬಹುತೇಕ ಮಳೆಯಾಶ್ರಿತ ಜೀವನವಾಗಿದ್ದು ಮಾನವ ಅಭಿವೃದ್ಧಿ ಹೆಚ್ಚು ಒತ್ತು ನೀಡಲಾಯಿತು. ಇಲ್ಲಿ ಬಿಸುಲುಕಾಲ, ಕಡು ಬಿಸಿಲುಕಾಲ ಮತ್ತು ಹಿಂಗಾರು ಮಳೆಯ ಬದುಕಿನ ಆಶ್ರಯ ತಾಣವಾಗಿದೆ. ಅಂಥಹ ಜನರ ಬದುಕಿನ ಕಡೆಗೆ ಒತ್ತು ನೀಡಲಾಯಿತು.

ದಾವಣಗೆರೆ ಜಿಲ್ಲೆಯಲ್ಲಿ ದಾವಣಗೆರೆ, ಚನ್ನಗಿರಿ ಹೊನ್ನಾಳಿ, ಹರಿಹರ, ಹರಪನಹಳ್ಳಿ ಮತ್ತು ಜಗಳೂರು ತಾಲ್ಲೂಗಳಿಂದ ಜಿಲ್ಲೆಯಾಗಿದ್ದು, ದಾವಣಗೆರೆ ಮತ್ತು ಹರಿಹರ ತಾಲ್ಲೂಕ್ ಭದ್ರೆಯ ನೀರಿನ ಆಶ್ರಯದ ಒಕ್ಕಲುತನವುಂಟು ಚನ್ನಗಿರಿ ಮತ್ತು ಹೊನ್ನಾಳಿ ಮಲೆನಾಡಿನ ಸೆರಗು ಆಗಿರುವುದರಿಂದ ಅಡಿಕೆ ತೋಟಗಳು ನೆಲೆಗೊಂಡಿದ್ದು ಅಲ್ಲಿ ಜನರ ಆರ್ಥಿಕ ಪರಿಸ್ಥಿತಿ ಉತ್ತಮ ವಾಗಿರುತ್ತದೆ. ಹರಪನಹಳ್ಳಿ ಮತ್ತು ಜಗಳೂರಿನ ಆರ್ಥಿಕವಾಹಿ ದುಸ್ಥಿತಿಯನ್ನು ಹೊಂದಿವೆ. ಅದರಲ್ಲೂ ಜಗಳೂರು ತಾಲ್ಲೂಕಿನ ಮಾತ್ರ ಗಣನೆಗೆ ತಂದು ಇದ್ದು ಇಡೀ ದಾವಣಗೆರೆ ಆರ್ಥಿಕ ಪರಿಸ್ಥಿತಿ ಹಕ್ಕಿನೋಟವನ್ನು ಪ್ರಸ್ತಾಪಿಸಿದ್ದು ಜಗಳೂರು ತಾಲ್ಲೂಕಿನ ಮಾನವ ಅಭಿವೃದ್ಧಿ ಸೂಚ್ಯಾಂಕದ ಕಡೆಗೆ ಗಮನ ನೀಡಿರುವುದು ಸಂಶೋಧನೆಯ ಉದ್ದೇಶವಾಗಿದೆ ಎಂಬುದಾಗಿ ಈ ಸಂದರ್ಭದಲ್ಲಿ ಸಾದರ ಪಡಿಸಲಾಗಿದೆ.

ಚಿತ್ರದುರ್ಗ ಜಿಲ್ಲೆ ಮತ್ತು ದಾವಣಗೆರೆ ಜಿಲ್ಲೆಯ ಭೌಗೋಳಿಕ ಸನ್ನಿವೇಶ ಭಿನ್ನವಾಗಿರುತ್ತದೆ. ಚಿತ್ರದುರ್ಗ ಜಿಲ್ಲೆ ನಾಲ್ಕು ತಾಲೂಕುಗಳಲ್ಲಿ ತಳ ಸಮುದಾಯಗಳ ಮತ್ತು ಬುಡಕಟ್ಟು ಸಂಪ್ರಾಯದ ಜನರು ವಾಸಿಸುತ್ತಿದ್ದು ಆರ್ಥಿಕ-ಸಾಮಾಜಿಕ ಸನ್ನಿವೇಶ ಬೇರೆ ಸ್ವರೂಪದ್ದು ಆಗಿರುತ್ತದೆ. ದಾವಣಗೆರೆ ಜಿಲ್ಲೆಯ ಬಹುತೇಕ ತಾಲ್ಲೂಕಗಳಲ್ಲಿ ಸಾಮಾಜಿಕ ಮೇಲುಸ್ತರದಲ್ಲಿರುವ ಸಮುದಾಯದವರಾಗಿದ್ದು ಅವರ ಆರ್ಥಿಕ ಸ್ಥಿತಿಗತಿ ಉತ್ತಮವಾಗಿರುವುದರ ಜೊತೆಗೆ ನೈಸರ್ಗಿ ಮೂಲ ಮತ್ತು ನೀರಾವರಿಯ ಅನುಕೂಲವಿರುತ್ತದೆ. ಎಂಬುದಾಗಿ ಎರಡು ಜಿಲ್ಲೆ ಗ್ರಾಮಗಳನ್ನು ಪರಿಶೀಲಿಸಿದಾಗ ಮನವರಿಕೆ ಯಾಗಿರುತ್ತದೆ. ಈ ಉದ್ದೇಶಕ್ಕೆ ಮಧ್ಯ ಕರ್ನಾಟಕದ ಎರಡು ಜಿಲ್ಲೆಗಳನ್ನು ಅಧ್ಯಯನದಲ್ಲಿ ಬಳಸಿಕೊಂಡಿರುತ್ತೇನೆ. ಮಾನವ ಅಭಿವೃದ್ಧಿ ಮತ್ತು ದಲಿತ ಅಭಿವೃದ್ಧಿಯ ಸಂದತಿಗಳು ದೊರೆಯುತ್ತದೆ.

ಕರ್ನಾಟಕ ರಾಜ್ಯದಲ್ಲಿ ಜೆ.ಹೆಚ್. ಪಟೇಲ್‌ರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದಾಗ ಬಳ್ಳಾರಿ-ಶಿವಮೊಗ್ಗ ಜಿಲ್ಲೆಯ ಕೆಲವು ತಾಲೂಕುಗಳನ್ನು ಸೇರ್ಪಡೆಗೊಳಿಸಿ ಚಿತ್ರದುರ್ಗ ಜಿಲ್ಲೆಯನ್ನು ಎರಡು ಭಾಗವಾಗಿ ಮಾಡಲಾಯಿತು. ಹೊಸದಾಗಿ ದಾವಣಗೆರೆ ಜಿಲ್ಲೆ ನಿರ್ಮಾಣವಾಯಿತು. ಜೊತೆಗೆ ಯಥಾಪ್ರಕಾರ ಚಿತ್ರದುರ್ಗ ಜಿಲ್ಲೆ ಉಳಿಯಿತು. ಅಂದಿನಿಂದ ಇಂದಿನವರೆಗೂ ಭೂಮಾಲೀಕ ಸಮುದಾಯಗಳ ಜೊತೆಗೆ ಪರಿಶಿಷ್ಟ ಜಾತಿಯ ಮಾದಿಗರು, ಲಂಬಾಣಿಗಳು, ಬೋವಿ ಮತ್ತು ಪರಿಶಿಷ್ಟ ಪಂಗಡದ ನಾಯಕ ಸಮುದಾಯದವರು ಅಲ್ಪಸ್ವಲ್ಪ ಭೂಮಿಯನ್ನು ಹೊಂದಿರುತ್ತಾರೆ. ಭೂಮಾಲೀಕ ಸಮುದಾಯಗಳ ಜನರು ದಾವಣಗೆರೆಯಲ್ಲೇ ಉಳಿದರು. ಅವರ ಅಧೀನದಲ್ಲಿ ಭೂಮಿ, ಕೈಗಾರಿಕೆ, ವ್ಯಾಪಾರ-ವಾಣ್ಯಜ್ಯಕ್ಕೆ ಇವತ್ತಿಗೂ ದಾವಣಗೆರೆ ಜಿಲ್ಲೆ ಸುಪ್ರಸಿದ್ದವಾಗಿದೆ. ಒಂದು ಕಾಲದಲ್ಲಿ ಅವಳಿ ನಗರಗಳಾದ ದಾವಣಗೆರೆ-ಹರಿಹರ ಕಾರ್ಖಾನೆಗಳಿಂದ ಮತ್ತು ಕಾರ್ಮಿಕರಿಂದ ತುಂಬಿ ತುಳುಕುತ್ತಿತ್ತು. ದಾವಣಗೆರೆಯಲ್ಲಿ ಬಟ್ಟೆ ತಯಾರಿಸುವ ಗಿರಣಿಗಳಿದ್ದ ಕಾರಣಕ್ಕೆ ಅದನ್ನು ರಾಜ್ಯದ ಮ್ಯಾಂಚೇಸ್ಟರ್‌ಯೆಂದು ಕರೆಯಲಾಗುತ್ತಿತ್ತು. ಕಾಲ ಗತಿಸಿದಂತೆ ಕಾರ್ಖಾನೆಗಳ ಮಾಲೀಕರು ಮತ್ತು ಕಾರ್ಮಿಕರ ಮಧ್ಯೆ ವಿವಾದಗಳು ಉಂಟಾದ ಕಾರಣಗಳಿಂದ ಶಾಶ್ವತವಾಗಿ ಲಾಕ್‌ಔಟ್ ಆದವು. ಜೊತೆಗೆ ರೋಗಗ್ರಸ್ಥ ಕೈಗಾರಿಕೆಗಳಾಗಿ ಮುಚ್ಚಲ್ಪಟ್ಟವು. ಇಂತಹ ಇತಿಹಾಸ ಹೊಂದಿದ ದಾವಣಗೆರೆಯು ಶಿಕ್ಷಣ ಕ್ಷೇತ್ರದಲ್ಲಿ ಅದರಲ್ಲಿಯೂ ವೈದ್ಯಕೀಯ-ತಾಂತ್ರಿಕ ಕಾಲೇಜುಗಳ ಸ್ಥಾಪನೆಯಿಂದ ಇಡೀ ದೇಶದಲ್ಲಿಯೇ ಒಂದು ಮುಖ್ಯವಾದ ನಗರವಾಗಿದೆ. ಇತ್ತೀಚಿನ ದಶಕಗಳಲ್ಲಿ ಸಾಂಪ್ರದಾಯಿಕ ಶಿಕ್ಷಣದ ವಿಶ್ವವಿದ್ಯಾಲಯವೇ ಅಸ್ತಿತ್ವಕ್ಕೆ ಬಂದಿದೆ. ರೈಲು ಮತ್ತು ರಸ್ತೆ ಸಾರಿಗೆ ಗಣನೀಯವಾಗಿ ಅಭಿವೃದ್ಧಿ ಹೊಂದಿದೆ. ವ್ಯಾಪಾರಕ್ಕೆ ಹೇಳಿಮಾಡಿಕೊಂಡಂಥ ಅಗ್ಗದ ರೈಲುಸಾರಿಗೆ ಇಡೀ ದೇಶವನ್ನು ಸಂಪರ್ಕಿಸುವಂಥ ಅನುಕೂಲವಿದೆ. ನಾಲ್ಕು ಪಥದ ೪ರ ರಾಷ್ಟ್ರೀಯ ಹೆದ್ದಾರಿಯು ಹಾದುಹೋಗಿದೆ. ದಾವಣಗೆರೆಯಲ್ಲಿ ಭದ್ರ ಜಲಾಶಯದ ನೀರಿನ ಸಂಪರ್ಕ ಮತ್ತು ಶಾಂತಿಸಾಗರ ಜಲಾಶಯದ ನೀರಿನ ಆಶ್ರಯವಿರುವುದರಿಂದ ಕೃಷಿ ಸ್ಥಿತಿ ಉತ್ತಮ ಗತಿಯಲ್ಲಿ ಇದೆ. ಒಟ್ಟಾರೆ ದಾವಣಗೆರೆ ಜಿಲ್ಲೆಯ ಚನ್ನಗಿರಿ, ಹರಿಹರ ತಾಲೂಕುಗಳ ಬಹುಭಾಗ ನೀರಾವರಿ ಸೌಕರ್ಯ ಹೊಂದಿದೆ. ಜೊತೆಗೆ ತುಂಗ-ಭದ್ರ ನದಿ ಹರಿದು ಹೋಗುವುದರಿಂದ ನದಿ ತೀರದ ಬಹುತೇಕ ರೈತರು ಲಿಫ್ಟ್ ಇರಿಗೇಷನ್ ಅನುಕೂಲಗಳನ್ನು ಕೂಡ ಹೊಂದಿರುತ್ತಾರೆ.

ಹಳೆಯ ಹೆಸರಿನ ಚಿತ್ರದುರ್ಗ ಜಿಲ್ಲೆ ಹೆಚ್ಚು ಆದಾಯ ಕಾಣದ ಜಿಲ್ಲೆಯಾಗಿದೆ. ಚಿತ್ರದುರ್ಗ, ಹೊಳಲ್ಕರೆ, ಚಳ್ಳಕೆರೆ, ಹೊಸದುರ್ಗ, ಹಿರಿಯೂರು ಮತ್ತು ಮೊಳಕಾಲ್ಮೂರು ಈ ೬ ತಾಲೂಕುಗಳು ಸದಾಕಾಲ ಬರ ಬಡತನದಿಂದ ಆರ್ಥಿಕವಾಗಿ ನಲುಗುತ್ತಿವೆ. ಹೊಸದುರ್ಗ, ಹೊಳಲ್ಕರೆ, ಹಿರಿಯೂರು ೩ ತಾಲೂಕುಗಳು ಮಳೆಯ ಆಶ್ರಯದ ಮೂಲಕ ಸ್ವಲ್ಪ ಚೇತರಿಕೆ ಕಂಡಿವೆ. ಉಳಿದ ೩ ತಾಲೂಕುಗಳು ಕೃಷಿಯಲ್ಲಿ ಬಲಹೀನವಾಗಿವೆ. ಮಳೆ ಬಂದರೆ ಶೇಂಗ; ಬರದಿದ್ದರೆ ಬರೇ ಬಯಲು. ಇಂತಹ ದುಸ್ಥಿತಿಯಲ್ಲಿ ಜನರ ಜೀವನ ನಿಂತುಕೊಂಡಿದೆ. ವಾಣಿವಿಲಾಸ ಸಾಗರವಿದ್ದರೂ ಸಕಾಲಕ್ಕೆ ಮಳೆ ಬಾರದಕಾರಣ ಬಂದ ನೀರನ್ನೇ ಕುಡಿಯಲು ಬಳಸುತ್ತಾರೆ. ವ್ಯವಸಾಯಕ್ಕೆ ಕಷ್ಟವಾಗಿದೆ ಜಿಲ್ಲೆಯ ಗಡಿ ಅಂಚಿನಲ್ಲಿ ರಂಗಯ್ಯನದುರ್ಗ ಜಲಾಶಯವಿದ್ದರೂ ಶಾಶ್ವತ ನೀರಾಗಿಲ್ಲ. ಕೋಟೆ–ಕೊತ್ತಲುಗಳು, ಪ್ರಭಾವಿತವಾದ ೨ ಮಠಗಳಾದ ಶ್ರೀ ಮುರುಘಮಠ ಮತ್ತು ತರಳಬಾಳು ಸಿರಿಗರೆಯ ಬೃಹನ್ಮಠ, ನುರಿತ ರಾಜಕಾರಣಿ ಹಾಗೂ ಸಂವಿಧಾನದ ಸದಸ್ಯರಾದ ರಾಜ್ಯದ ಮಾಜಿ ಮುಖ್ಯಮಂತ್ರಿ ಸಿದ್ಧವನಹಳ್ಳಿ ನಿಜಲಿಂಗಪ್ಪ, ಹಿರಿಯ ರಾಜಕಾರಣಿಗಾಳದ ಭೀಮಪ್ಪನಾಯಕ್, ಹೋ.ಚಿ.ಬೋರಯ್ಯ, ಕೆ.ಹೆಚ್. ರಂಗನಾಥ್, ಡಿ.ಮಂಜುನಾಥ್ ಇವರೆಲ್ಲಿ ಬಾಳಿ–ಬದುಕಿ–ಅಧಿಕಾರ ಮಾಡಿದ್ದರೂ ಬರದಿಂದ ಮುಕ್ತವಾಗಿಲ್ಲ. ಪ.ಪಂ. ನಾಯಕರು, ಪ.ಜಾ. ಮಾದಿಗರು, ಗೊಲ್ಲರು, ಕುರುಬರು ಮತ್ತು ಕುಂಚಿಟಿಗರು ಇರುವ ಜಿಲ್ಲೆಯಲ್ಲಿ ಅವರ ಕೈಯಲ್ಲಿ ಭೂಮಿ ಇಲ್ಲ, ಇದ್ದರು ತುಂಡು ಭೂಮಿಗಳಾಗಿವೆ. ಕೈಗಾರಿಕೆ–ವ್ಯಾಪಾರ–ವಾಣಿಜ್ಯದಲ್ಲಿ ಪ್ರಗತಿ ಹೊಂದಿಲ್ಲ. ಜನರು ಜೀವನ ನಿರ್ವಹಣೆಗಾಗಿ ದೊಡ್ಡ ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಕಾಫಿ–ಟೀ(ಚಿಕ್ಕಮಗಳೂರು) ತೋಟಗಳಿಗೆ ಕೆಲಸ ಮಾಡಲು ವಲಸೆ ಹೋಗುತ್ತಾರೆ, ಗಣಿ ಕೆಲಸಗಳಿಗೆ ಬಳ್ಳಾರಿ–ಕಾರವಾರಗಳ ಕಡೆಗೆ ಕೂಲಿಗೆ ತೆರಳುತ್ತಿದ್ದಾರೆ. ಇತ್ತೀಚಿನ ಕೆಲವು ವರ್ಷಗಳಿಂದ ಜನಪರ ಹೋರಾಟಗಾರರು, ಮಠಾಧೀಶರು ಮತ್ತು ರಾಜಕಾರಣಿಗಳ ಹೋರಾಟದಿಂದ ರಾಜ್ಯವನ್ನು ಆಳಿದ ೬ ಮುಖ್ಯಮಂತ್ರಿಗಳ ಪ್ರಯತ್ನ ಫಲದಿಂದ ಮೇಲ್ದಂಡೆ ಭದ್ರ ಯೋಜನೆ ಅನುಷ್ಠಾನದಲ್ಲಿದೆ ಸಾಕಷ್ಟು ಕೆಲಸ ನಡೆದಿದ್ದು ೨೦೧೮ಲಕ್ಕೆ ನೀರು ಬರುವ ಭರವಸೆಯಿದ್ದು ಈ ಭಾಗದ ಜನರ ಅಭಿವೃದ್ಧಿಗೆ ಮುನ್ನುಡಿ ಬರೆಯಬಹುದು.

ಒಟ್ಟಾರೆಯಾಗಿ ದಾವಣಗೆರೆ–ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ಅಂಶವನ್ನು ಪರಾಮರ್ಶೆ ಮಾಡಿದರೆ ದಾವಣಗೆರೆ ಜಿಲ್ಲೆ ಅಭಿವೃದ್ಧಿಗೆ ಕಾರಣವಾದರೆ ಸಾಂಪ್ರದಾಯಕವಾಗಿ ಚಿತ್ರದುರ್ಗ ಜಿಲ್ಲೆ ಬರದ ನಾಡಾಗಿಯೇ ಮುಂದುವರೆದಿದೆ. ಚಿತ್ರದುರ್ಗ ಜಿಲ್ಲೆಯ ಕೆಲವು ತಾಲೂಕುಗಳನ್ನು ಡಾ. ಡಿ.ಎಂ. ನಂಜುಡಪ್ಪನವರು ಪ್ರಾದೇಶಿಕ ಅಸಮತೋಲನವನ್ನು ಗುರುತಿಸಿ ಶಿಫಾರಸ್ಸು ಮಾಡಿದ್ದಾರೆಂಬ ಅಂಶವು ಕೂಡ ಮುಖ್ಯವಾಗಿದೆ.

ಒಂದು ಸ್ಮಾರ್ಟ್ ಸಿಟಿ ಎಂದು ಘೋಷಣೆಯಾಗಿರುವ ದಾವಣಗೆರೆ ನಗರ/ಜಿಲ್ಲೆ ಮತ್ತು ಐತಿಹಾಸಿಕ ನಗರವೆಂದು ಪ್ರಖ್ಯಾತಿ ಹೊಂದಿರುವ ಚಿತ್ರದುರ್ಗ ನಗರ/ಜಿಲ್ಲೆ.ಇವೆರಡು ನಗರಗಳು ಮಧ್ಯ ಕರ್ನಾಟಕ ಭಾಗವಾಗಿದ್ದು ಚಿತ್ರದುರ್ಗ ಬಯಲುಸೀಮೆಯ ಹೆಬ್ಬಾಗಿಲು ಆಗಿದೆ. ಈ

ಬಯಲು ಸೀಮೆ ನಗರಗಳು ಇಂದು ಹೆಚ್ಚು ಚರ್ಚೆಯಲ್ಲಿವೆ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕಗಳ ಅಧ್ಯಯನ ಉದ್ದೇಶದಿಂದ ದಾವಣಗೆರೆ ಮತ್ತು ಚಿತ್ರದುರ್ಗ ಸಿ.ಡಿ.ಡಿ.ಐ.(ಸಂಯಕ್ತ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ)ಗಳ ಒಂದು ಸ್ಥೂಲ ಪರಿಚಯವನ್ನು ತಿಳಿಯುವುದು ಅವಶ್ಯಕವಾಗಿದೆ. ಮತ್ತು ಅಧ್ಯಯನದಲ್ಲಿ ಕರ್ನಾಟಕದ ಎಲ್ಲಾ ಜಿಲ್ಲಾ (೩೦) ಮಾನವ ಅಭಿವೃದ್ಧಿಯನ್ನು ಒಮ್ಮೆಲೆ ತಿಳಿಯಲು ಸಾಧ್ಯವಾಗುವುದಿಲ್ಲ. ಹಾಗಾಗಿ ಅಧ್ಯಯನ ಅನುಕೂಲಕ್ಕಾಗಿ ಈ ೨ ಜಿಲ್ಲೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಏಕೆಂದರೆ ಜಿಲ್ಲೆಗಳ ವಿಭಜನೆ ಪೂರ್ವದಲ್ಲಿ ಚಿತ್ರದುರ್ಗ-ದಾವಣಗೆರೆ ಒಂದಾಗಿದ್ದಾಗ ಚಿತ್ರದುರ್ಗ ಜಿಲ್ಲೆ ಅಭಿವೃದ್ಧಿ ಹೊಂದಿತ್ತು. ವಿಭಜನೆ ನಂತರ ೨ ಪ್ರತ್ಯೇಕ ಜಿಲ್ಲೆಯಾದಾಗ ನಿಜಕ್ಕೂ ಚಿತ್ರದುರ್ಗ ಜಿಲ್ಲೆ ಆರ್ಥಿಕ ಮುಗ್ಗಟ್ಟಿಗೆ ಒಳಗಾಯಿತು. ಇದನ್ನು ಅರಿಯಲು ಆರ್ಥಿಕ ಸಮೀಕ್ಷೆ ಮೂಲಕ ತುಲಾನಾತ್ಮಕ ಅಧ್ಯಯನಕ್ಕೆ ಪ್ರಾಮುಖ್ಯತೆ ಕೊಡುವ ಘನ ಉದ್ದೇಶದಿಂದ ಈ ೨ ಜಿಲ್ಲೆಗಳಲ್ಲಿ ಇರಬಹುದಾದ ದಲಿತ ಮಾನವ ಅಭಿವೃದ್ಧಿಗೆ ಹೆಚ್ಚು ಮಹತ್ವ ನೀಡಲಾಗಿದೆ. ೨೦೧೫ರಲ್ಲಿ ಪ್ರಕಟವಾದ ಕರ್ನಾಟಕ "ಜಿಲ್ಲಾ ವಿವಿಧ ಮಾನವ ಅಭಿವೃದ್ಧಿ ವರದಿ-೨೦೧೪ "ಯನ್ನು ಕರ್ನಾಟಕ ಸರ್ಕಾರ  ಪ್ರತಿ ಜಿಲ್ಲಾ ಪಂಚಾಯತ್ & ಲೀಡ್ ಏಜೆನ್ಸಿ ಪ್ರಕಟವಾಗಿರುವ ವರದಿಗಳಲ್ಲಿನ  ಕೆಲವು ತಥ್ಯ ಈ ಕೆಳಗಿನಂತಿದೆ.

**೫.೩.೧. ಚಿತ್ರದುರ್ಗ ಜಿಲ್ಲೆಯ ದಲಿತರ ಸ್ಥಾನಮಾನ(ಚಿತ್ರಣ)**

ಚಿತ್ರದುರ್ಗ ಜಿಲ್ಲೆಯ ಪರಿಶಿಷ್ಟ ಜಾತಿ ಶೇ. ೨೩.೪೫ ರಷ್ಟಿದ್ದು, ಪರಿಶಿಷ್ಟ ಪಂಗಡ ಶೇ. ೧೮.೨೩ ಮತ್ತು ಇತರರು ಶೇಕಡ ೫೮.೩೨ ಇದ್ದಾರೆ. ತಾಲ್ಲೂಕುವಾರು ಜನಸಂಖ್ಯೆ ವರ್ಗೀಕರಿಸುವಾಗ ಪರಿಶಿಷ್ಟ ಜಾತಿ ಅತಿ ಹೆಚ್ಚಿನ ಜನಸಂಖ್ಯೆ ಹೊಳಲ್ಕೆರೆ ತಾಲ್ಲೂಕಿನಲ್ಲಿ ಶೇಕಡ ೨೭.೩೭ರಷ್ಟು ಇರುವುದನ್ನು ಕಾಣುತ್ತೇವೆ. ನಂತರ ಶೇಕಡ ೨೫.೦೭ರಷ್ಟು ಹಿರಿಯೂರಿನಲ್ಲಿ, ಶೇಕಡ ೨೩.೯೫ರಷ್ಟು ಚಿತ್ರದುರ್ಗದಲ್ಲಿ, ಶೇಕಡ ೨೨.೬೬ರಷ್ಟು ಚಳ್ಳಕೆರೆಯಲ್ಲಿ, ಶೇಕಡ ೨೦.೫೩ರಷ್ಟು ಹೊಸದುರ್ಗದಲ್ಲಿ ಮತ್ತು ಶೇಕಡ ೧೯.೭೮ರಷ್ಟು ಮೊಳಕಾಲ್ಮೂರಿನಲ್ಲಿ ಕಂಡುಬರುತ್ತದೆ.

**ಚಿತ್ರದುರ್ಗ ಜಿಲ್ಲೆಯ ದಲಿತರ ಗ್ರಾಮೀಣ ನಗರ ಸಾಕ್ಷರತೆಯ ಚಿತ್ರಣ**

೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯ ಪ.ಜಾತಿ ಸಾಕ್ಷರತೆಯ ಪ್ರಮಾಣ ಶೇ ೫೮.೬೦ ರಷ್ಟಿದ್ದು, ಪುರುಷರು ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣ ಕ್ರಮವಾಗಿ ಶೇ. ೮೯.೩೭ ಮತ್ತು ಶೇ. ೪೭.೮೯ರಷ್ಟಿದೆ. ಗ್ರಾಮೀಣ ಪ.ಜಾತಿಯ ಪುರುಷರ ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣ ಕ್ರಮವಾಗಿ ಶೇ. ೬೬.೦೮ ಮತ್ತು ಶೇ. ೪೩.೦೩ ಇದ್ದರೆ. ನಗರ ಪ್ರದೇಶದ ಪುರುಷ ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣ ಕ್ರಮವಾಗಿ ಶೇ. ೭೭.೨೧ ಮತ್ತು ೫೯.೧೯ ಇದ್ದು, ನಗರ ಸಾಕ್ಷರತಾ ಪ್ರಮಾಣ ಗ್ರಾಮೀಣ ಸಾಕ್ಷರತಾ ಪ್ರಮಾಣಕ್ಕಿಂತ ಹೆಚ್ಚಾಗಿರುವುದು ಕಂಡುಬರುತ್ತದೆ.

**ಸಾಮಾಜಿಕ ಗುಂಪುಗಳಲ್ಲಿನ ಮಹಿಳೆಯರಲ್ಲಿನ ಆರೋಗ್ಯದ ಅರಿವು ಮತ್ತು ಸಾಂಸ್ಥಿಕ ಪ್ರಸವಗಳ ದರ**

ಜಿಲ್ಲೆಯಲ್ಲಿನ ಸಾಮಾನ್ಯ ಗುಂಪುಗಳಾದ ಪ.ಜಾತಿಗಳಲ್ಲಿ ಶೇ. ೨೭.೧೭ರಷ್ಟು, ಪ.ಪಂಗಡಗಳಲ್ಲಿ

ಶೇ. ೨೦.೬೭ ಮತ್ತು ಇತರೆ ಸಮುದಾಯಗಳಲ್ಲಿ ಶೇ ೫೨.೧೬ರಷ್ಟು ಪ್ರಸವಗಳು ಆರೋಗ್ಯ ಕೇಂದ್ರಗಳಲ್ಲಿ ಆಗಿವೆ. ಪ.ಜಾತಿ ಸಮುದಾಯದ ಮಹಿಳೆಯರಿಗೆ ಸಂಬಂಧಿಸಿದಂತೆ ಚಿತ್ರದುರ್ಗ ಶೇ. ೧೫.೪೮ರಷ್ಟು ಮಹಿಳೆಯರು ಆರೋಗ್ಯ ಕೇಂದ್ರಗಳಲ್ಲಿ ಮಗುವಿಗೆ ಜನ್ಮ ನೀಡಿದ್ದಾರೆ. ಇತರೆ ಸಾಮಾನ್ಯ ಗುಂಪುಗಳಿಗೆ ಸಂಬಂಧಿಸಿದಂತೆ ಚಿತ್ರದುರ್ಗ ತಾಲ್ಲೂಕಿನಲ್ಲಿ ಅತಿ ಹೆಚ್ಚು ಅಂದರೆ ಶೇ. ೬೧.೬೮ರಷ್ಟು ಸಾಂಸ್ಥಿಕ ಪ್ರಸವಗಳಾಗಿವೆ.

ಶಿಶು ಮರಣ ಮತ್ತು ತಾಯಿ ಮರಣ ದರಗಳನ್ನು ಕಡಿಮೆ ಮಾಡಲು ಪ್ರಸವಗಳು ಆರೋಗ್ಯ ಕೇಂದ್ರಗಳಲ್ಲಿ ನುರಿತ ತರಬೇತಿ ಪಡೆದ ಆರೋಗ್ಯ ಕಾರ್ಯಕರ್ತರ ಸಹಾಯದಿಂದಲೇ ನಡೆಯಬೇಕೆಂದು ಸರ್ಕಾರ ಅನೇಕ ಆರೋಗ್ಯ ಕ್ರಮಗಳನ್ನು ಕೈಗೊಂಡಿದ್ದರೂ ಪ.ಜಾತಿ ಮತ್ತು ಪ.ಪಂಗಡಗಳಲ್ಲಿ ಕಡಿಮೆ ಪ್ರಸವಗಳು ಆರೋಗ್ಯ ಕೇಂದ್ರಗಳಲ್ಲಿ ನಡೆಯುವಂತೆ ಸಮುದಾಯದ ಜನರಲ್ಲಿ ಹೆಚ್ಚಿನ ಅರಿವು ಮೂಡಿಸುವ ಅಗತ್ಯವಿದೆ.

**ಸಾಮಾಜಿಕ ಗುಂಪುಗಳಲ್ಲಿ ೧೦ಕ್ಕಿಂತ ಹೆಚ್ಚು ಹೆಕ್ಟೇರುಗಳ ಭೂಹಿಡುವಳಿ ಹೊಂದಿರುವ ದೊಡ್ಡ ರೈತರು**

ಸಾಮಾಜಿಕ ಗುಂಪಿನ ಇತರೆ ವರ್ಗದಡಿಯಲ್ಲಿ ೧೦ ಹೆಕ್ಟೇರುಗಳಿಗಿಂತ ಹೆಚ್ಚಿನ ಅಂದರೆ ಶೇ. ೮೦ರಷ್ಟು ಭೂಮಾಲೀಕರಿದ್ದಾರೆ. ಪ.ಜಾತಿಗಳಿಗೆ ಸಂಬಂಧಿಸಿದಂತೆ ಶೇ. ೪ರಷ್ಟು ರೈತರು ಮಾತ್ರ ೧೦ ಹೆಕ್ಟೇರು ಭೂಪ್ರದೇಶ ಒಡೆತನವನ್ನು ಹೊಂದಿದ್ದಾರೆ. ಆದರೆ ಪ.ಪಂಗಡಗಳಲ್ಲಿ ೧೦ ಹೆಕ್ಟೇರ್‌ಗಿಂತ ಹೆಚ್ಚಿನ ಭೂಪ್ರದೇಶವನ್ನು ಹೊಂದಿರುವ ಶೇ. ೧೫ಕ್ಕಿಂತ ಹೆಚ್ಚಿನ ಮಂದಿ ಪ್ರಸ್ತುತದಲ್ಲಿದ್ದು, ಇವರು ಪ.ಜಾತಿಗಳಿಗಿಂತ ಉತ್ತಮ ಸ್ಥಿತಿಯಲ್ಲಿದ್ದಾರೆ. ಇತರೆ ಜಾತಿಗಳು ಶೇ. ೮೧ರಷ್ಟು ಭೂಪ್ರದೇಶವನ್ನು ಹೊಂದಿದ್ದಾರೆ.

**ಸಾಮಾಜಿಕ ಗುಂಪುಗಳಲ್ಲಿ ವಸತಿರಹಿತ ಸಂಖ್ಯೆ**

ಜಿಲ್ಲೆಯಲ್ಲಿನ ವಸತಿ ರಹಿತರ ಪೈಕಿ, ಪ.ಜಾತಿ. ಶೇ. ೩೦.೨೮ರಷ್ಟಿದ್ದಾರೆ. ಪ.ಪಂಗಡಗಳು ಶೇ. ೨೨.೦೯ರಷ್ಟಿದ್ದು, ಇತರೆ ಸಮುದಾಯಗಳು ಶೇ. ೪೬.೮೨ರಷ್ಟಿವೆ. ಇತರೆ ಸಮುದಾಯಗಳು ಸುಮಾರು ಅರ್ಧದಷ್ಟು ಜನರು ಅಂದರೆ ಶೇ. ೪೬.೮೨ರಷ್ಟು ವಸತಿ ರಹಿತರಾಗಿದ್ದು, ಹೆಚ್ಚಿನ ನಿರಾಕರಣೆಯನ್ನು ಅನುಭವಿಸುತ್ತಿದ್ದಾರೆ ಎನ್ನಬಹುದು. ಇತರೆ ಸಮುದಾಯಗಳ ಪೈಕಿ ಅತಿ ಹೆಚ್ಚು. ಹೊಸದುರ್ಗ ತಾಲ್ಲೂಕಿನಲ್ಲಿ ಶೇ. ೬೮.೭೬ ನಂತರದ ಸಂಖ್ಯೆ ಹಿರಿಯೂರು ತಾಲ್ಲೂಕಿನಲ್ಲಿ ಶೇ. ೬೪.೯೮ ಕಂಡುಬರುತ್ತದೆ. ಇತರೆ ಸಮುದಾಯಗಳ ಪೈಕಿ ಅರ್ಧಕ್ಕೂ ಹೆಚ್ಚಿನ ಮಂದಿ ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬರುತ್ತಾರೆ.

**೫.೩.೨. ದಾವಣಗೆರೆ ಜಿಲ್ಲೆಯ ದಲಿತರ ಆರ್ಥಿಕ ಸ್ಥಾನಮಾನ (ಚಿತ್ರಣ)**

ಜಿಲ್ಲೆಯಲ್ಲಿಯ ಎಸ್‌ಸಿ ಮತ್ತು ಎಸ್‌ಟಿಗಳ ಜನಸಂಖ್ಯಾ ವಿವರ ರಾಷ್ಟ್ರದಲ್ಲಿ ಪರಿಶಿಷ್ಟ ಜಾತಿಯ ಜನರ ಒಟ್ಟು ಜನಸಂಖ್ಯೆಯು ಶೇ. ೧೬.೬ ಪ್ರಮಾಣ ಹೊಂದಿದೆ. ಕರ್ನಾಟಕದಲ್ಲಿ ಶೇ. ೧೭.೧ ಮತ್ತು ದಾವಣಗೆರೆ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆಯು ಒಟ್ಟು ಜನಸಂಖ್ಯೆಯಲ್ಲಿ ಶೇ.

೨೦.೧೮ರಷ್ಟು (ಜನಗಣತಿ ೨೦೧೧)ಇದೆ. ಕಳೆದ ದಶಕದಲ್ಲಿ ಎಸ್.ಸಿ. ಜನಸಂಖ್ಯೆಯಲ್ಲಿ ಶೇ. ೧೭.೮೨ರಷ್ಟು ಪ್ರಮಾಣ ವೃದ್ಧಿಯಾಗಿದ್ದು ಅದರಲ್ಲಿ ನಗರ ಪ್ರದೇಶದಲ್ಲಿ ಶೇ.೩೨.೮೯ ಜನಸಂಖ್ಯೆ ಹೆಚ್ಚಳಗೊಂಡಿದೆ. ಆದರೆ ಸಾಮಾನ್ಯ ಜನಸಂಖ್ಯೆಯು ಶೇ. ೮.೬೩ ವೃದ್ಧಿ ಕಂಡರೆ ಅದರಲ್ಲಿ ಶೇ. ೧೧.೯೮ರಷ್ಟು ನಗರ ವಲಯದಲ್ಲಿ ಹೆಚ್ಚಳವಾಗಿದೆ. ಜಿಲ್ಲೆಯಲ್ಲಿ ಶೇ. ೧೧.೯೮ರಷ್ಟು ಎಸ್‌ಟಿ ಜನಸಂಖ್ಯೆಯ ಪ್ರಮಾಣವಿದ್ದರೆ, ಶೇ. ೧೧.೬ರಷ್ಟು ಜನಸಂಖ್ಯೆಯು ವೃದ್ಧಿ ಕಂಡಿದೆ. ಈ ಸಮುದಾಯಗಳನ್ನು ಸಾಂಪ್ರದಾಯಿಕ ಮತ್ತು ಆರ್ಥಿಕವಾಗಿ ಮಾತ್ರವಲ್ಲದೆ, ಸಾಂಸ್ಕೃತಿಕ ಜೀವನ ರಚನೆಯಿಂದ ಮತ್ತು ರಾಜಕೀಯ ಅಧಿಕಾರದಿಂದ ವ್ಯವಸ್ಥಿತವಾಗಿ ಹೊರಗಿಡಲಾಗಿತ್ತು. ಉತ್ತಮ ಜೀವನ ಶೈಲಿಯ ಅವಕಾಶಗಳನ್ನು ಅರಸುತ್ತಾ ದಲಿತ ಸಮುದಾಯಗಳು ನಗರದೆಡೆಗೆ ವಲಸೆ ಹೋಗಿರುವುದರಿಂದ ನಗರ ವಲಯಗಳಲ್ಲಿ ಈ ಸಮುದಾಯಗಳ ಭಾರಿ ಪ್ರಮಾಣದ ಜನಸಂಖ್ಯಾ ಏರಿಕೆಗೆ ಮುಖ್ಯ ಕಾರಣವಾಗಿರಬಹುದು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ, ಇತರೆ ಹಿಂದುಳಿದ ಜಾತಿಯ ಜನರು ತಮ್ಮನ್ನು ತೊಡಗಿಸಿ ಕೊಂಡಿರುವುದು ಕಂಡು ಬರುತ್ತದೆ.

ಎಸ್.ಟಿ. ಮತ್ತು ಒ.ಬಿ.ಸಿ. ಸಮುದಾಯ ಜನರು ಗ್ರಾಮೀಣ ವಲಯದ ಕೃಷಿ ಮೂಲಕ ಸ್ವಉದ್ಯೋಗದಲ್ಲಿ ತೊಡಗಿರುವ ಪ್ರಮಾಣಕ್ಕಿಂತ ಶೇ. ೨೦.೨ ಕಡಿಮೆ ಪ್ರಮಾಣದಲ್ಲಿ ಎಸ್.ಸಿ. ಸಮುದಾಯ ತೊಡಗಿದ್ದಾರೆ. ಕೃಷಿಯೇತರ ಕ್ಷೇತ್ರದಲ್ಲಿ ಸ್ವ-ಉದ್ಯೋಗದಲ್ಲಿ ಎಸ್.ಟಿ. ಪ್ರಮಾಣಕ್ಕಿಂತ ಎಸ್.ಸಿ. ಸಮುದಾಯ ಪ್ರಮಾಣವು ಹೆಚ್ಚಾಗಿರುವುದು ಕಂಡು ಬರುತ್ತದೆ(ಎಸ್.ಸಿ. ಶೇ. ೧೪.೧ ಮತ್ತು ಎಸ್.ಟಿ. ಶೇ. ೬.೪) ಕೃಷಿ ಮತ್ತು ಕೃಷಿಯೇತರ ಕ್ಷೇತ್ರದಲ್ಲಿ ದಿನಗೂಲಿ ಕಾರ್ಮಿಕರ ಪ್ರಮಾಣದಲ್ಲಿ ಎಸ್‌ಸಿ ಜನಾಂಗವು ಶೇ. ೫೪ರಷ್ಟು ಬಹುಪಾಲು ಹೊಂದಿದೆ. ಎಸ್‌ಸಿ ಜನಾಂಗದ ಬಹುತೇಕ ಕೃಷಿಕರು ಕಡಿಮೆ ಭೂಮಿಯಲ್ಲಿ (ಸರಾಸರಿ ೧.೩೭ ಹೆಕ್ಟೇರ್ ಹಿಡುವಳಿ ಭೂಮಿ ಮಾತ್ರ) ಹಿಡುವಳಿ ಮಾಡುತ್ತಿದ್ದಾರೆ. ಆದ್ದರಿಂದ ಅವರು ಅರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಪ್ರಗತಿ ಹೊಂದಲು ಅವಕಾಶ ಆಗುತ್ತಿಲ್ಲ. ಹಿಡುವಳಿ ಭೂಮಿ ಹೊಂದಿದ ಒಟ್ಟು ೩೬,೬೭೭ ಎಸ್.ಸಿ. ರೈತರಲ್ಲಿ, ೧೮೮೪೭ರಷ್ಟು (ಶೇ. ೫೧ರಷ್ಟು) ಎಸ್.ಸಿ. ರೈತರು ಸಣ್ಣ ಪ್ರಮಾಣದ ಹಿಡುವಳಿ ಭೂಮಿ (ಒಂದು ಹೆಕ್ಟೆರ್‌ಗಿಂತ ಕಡಿಮೆ) ಹೊಂದಿದ್ದಾರೆ. ಎಸ್.ಟಿ. ಸಮುದಾಯ ಒಟ್ಟು ಜನಸಂಖ್ಯೆಯಲ್ಲಿ ಶೇ. ೪೮ರಷ್ಟು ಸಣ್ಣ ರೈತರಿದ್ದು, ಉಳಿದ ಸಮುದಾಯದವರು ಶೇ. ೪೭ರಷ್ಟು ಇದ್ದಾರೆ. ಹೆಚ್ಚಿನ ಪ್ರಮಾಣದಲ್ಲಿ ಅಂದರೆ ಶೇ. ೮೩ರಷ್ಟು ಇವರು ಹೊಂದಿದ ಭೂಮಿಯು ನೀರಾವರಿ ರಹಿತವಾಗಿರುವ ಕಾರಣ ಈ ಸಮುದಾಯ ಆರ್ಥಿಕ ಸಂಕಷ್ಟ ಎದುರಿಸುತ್ತಿದೆ.(ಎಚ್‌ಡಿಆರ್ ಕರ್ನಾಟಕ ೨೦೦೬).

ನಗರ ಪ್ರದೇಶದಲ್ಲಿ ಅಂದಾಜು ಶೇ. ೨೯ರಷ್ಟು ಎಸ್‌ಸಿ ಸಮುದಾಯ ಜನರು ಸ್ವಉದ್ಯೋಗ ಹೊಂದಿದ್ದಾರೆ. ಆದರೆ ಅವರಲ್ಲಿ ಬಹುಪಾಲು (ಶೇ. ೪೧.೧) ಜನರು ಸಾಮಾನ್ಯ ನಿಯಮಿತ ಸಂಬಳದ ಕೆಲಸಗಾರರಾಗಿದ್ದಾರೆ. ಹಿಂದುಳಿದ ಜಾತಿಗಳಿಗೆ ಸರ್ಕಾರದ ಹುದ್ದೆಗಳಲ್ಲಿ ಮೀಸಲಾತಿ

ಅನುಕೂಲದಾಯಕವಾಗಿದೆ. ಆದರೂ ಕೂಡ ಶೇ. ೨೨ರಷ್ಟು ಎಸ್.ಸಿ. ಮತ್ತು ೧೭ ಎಸ್.ಟಿ. ಸಮುದಾಯ ದೇಶದ ವಿವಿಧ ನಗರಗಳಲ್ಲಿ ಸಾಮಾನ್ಯ ನಿರಂತರ/ಹಂಗಾಮಿ ಕಾರ್ಮಿಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

**೫.೩.೩. ಚಿತ್ರದುರ್ಗ ಜಿಲ್ಲೆಯ ಸಂಯುಕ್ತ ದಲಿತ ಅಭಿವೃದ್ಧಿ ಸೂಚ್ಯಂಕ (ಸಿಡಿಡಿಐ)**

ಈ ಅಧ್ಯಯನವನ್ನು ಹೊಳಲ್ಕೆರೆ ತಾಲ್ಲೂಕಿನ ಮೂರು ಗ್ರಾಮಗಳಲ್ಲಿ ನಡೆಸಲಾಗಿದ್ದು, ಸಿಡಿಡಿಐಗೆ ತೀರ್ಮಾನಿಸಲಾಗಿರುವ ಸೂಚಕಗಳನ್ನು ಒಳಗೊಂಡಂತೆ ಅಧ್ಯಯನದ ಫಲಿತಾಂಶಗಳನ್ನು ಇಲ್ಲಿ ನೀಡಲಾಗಿದೆ.

**ಅಧ್ಯಯನ ಗ್ರಾಮಗಳಲ್ಲಿ ಮಾದರಿ ವಿವರಣೆ**

ಬಳ್ಳಾರಿಹಟ್ಟಿ–೩೩ ಬಿದರಕೆರೆ–೩೦ ಗುಂಡಸಮುದ್ರ–೩೭ ಗ್ರಾಮಗಳು ಆಯ್ಕೆ ಮಾಡಲಾದ ಗ್ರಾಮಗಳು– ಬಳ್ಳಾರಿ ಹಟ್ಟಿ, ಬಿದರಕೆರೆ ಮತ್ತು ಗುಂಡಾಸಮುದ್ರ, ೧೦೦ ದಲಿತ ಕುಟುಂಬಗಳ ಪ್ರತಿಕ್ರಿಯಾರ್ಥಿಗಳನ್ನು ಸಂದರ್ಶನಕ್ಕೆ ಆಯ್ಕೆ ಮಾಡಿ ಪ್ರಶ್ನಾವಳಿಯ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಬಳ್ಳಾರಿಹಟ್ಟಿಯಿಂದ ೩೩, ಬಿದರಕೆರೆಯಿಂದ ೩೦ ಮತ್ತು ಗುಂಡಾಸಮುದ್ರದಿಂದ ೩೭ ಮಂದಿಯನ್ನು ಮಾದರಿಯಾಗಿ ಆಯ್ಕೆ ಮಾಡಲಾಗಿದೆ. ಈ ಆಯ್ಕೆಯಲ್ಲಿ ಎಚ್‌ಡಿಆರ್ ಸೂಚಕಗಳಲ್ಲಿ ನೀಡಲಾಗಿರುವ ಮಾನದಂಡಗಳನ್ನು ಅಕ್ಷರಶಃ ಅನ್ವಯಿಸಿಕೊಳ್ಳಲಾಗಿದೆ.

**ದಲಿತರ ಸಾಮಾಜಿಕ ಸೇರ್ಪಡೆ**

ಈ ಸಮೀಕ್ಷೆಯಲ್ಲಿ ಭಾಗವಹಿಸಿದ ದಲಿತರಿಗೆ ದಲಿತೇತರರೊಂದಿಗಿನ ಸಾಮಾಜಿಕ ಸೇರ್ಪಡೆಯಲ್ಲಿನ ನಕಾರತ್ಮಕ ಅಸಮಾನತೆಯ ಆಚರಣೆಗಳಿಗೆ ಸಂಬಂಧಿಸಿದಂತೆ ೫ ಪ್ರಶ್ನೆಗಳನ್ನು ಕೇಳಲಾಗಿದ್ದು, ಹೌದು/ಇಲ್ಲ ಎಂಬ ಉತ್ತರಗಳನ್ನು ಅವರಿಂದ ಅಪೇಕ್ಷಿಸಲಾಗಿತ್ತು. ದಲಿತ ಪ್ರತಿನಿಧಿಗಳ ಉತ್ತರಗಳನ್ನು ಗಮನಿಸಿದಾಗ, ಸಾಮಾಜಿಕ ಬಹಿಷ್ಕಾರ ಆಚರಣೆಯು ಹಾಗೆಯೇ ಮುಂದುವರಿದಿದ್ದು ಮತ್ತು ಯಾವುದಾದರೂ ಇದ್ದಲ್ಲಿ, ದಲಿತೇತರರಲ್ಲಿ ಗೌಣವಾದ ಬದಲಾವಣೆಗಳು ಕಂಡುಬಂದಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ದಲಿತರಿಗೆ ಇತರ ಸಮುದಾಯಗಳರವರ ವಾಸಸ್ಥಳಕ್ಕೆ ಮುಕ್ತವಾಗಿ ಪ್ರವೇಶ (ಹೌದು ಶೇ. ೧, ಇಲ್ಲ ಶೇ. ೯೯), ಅಂತೆಯೇ ದಲಿತೇತರರು ದಲಿತರನ್ನು ಗೌರವಯುತವಾಗಿ ನಡೆಸಿಕೊಳ್ಳುವುದು ಕೇವಲ ಶೇ. ೨೫ರಷ್ಟು ಸಂದರ್ಭಗಳಲ್ಲಿ ಮಾತ್ರವೇ ಆಗಿದ್ದು, ಈ ಜಿಲ್ಲೆಯಲ್ಲಿ ಮಹತ್ತರ ಬದಲಾವಣೆಗಳು ಘಟಿಸಬೇಕಿದೆ.

ಆದರೂ ಸಹ ಸಾಮಾಜಿಕ ಸೇರ್ಪಡೆಯಲ್ಲಿ ಇತರ ಅಂಶಗಳನ್ನು ಗಮನಿಸಿದಾಗ ನಕರಾತ್ಮಕ ಅಸಮಾನತೆಯ ಧೋರಣೆ ಕಂಡುಬರುತ್ತದೆ. ಕೇವಲ ಶೇ. ೧೬ರಷ್ಟು ದಲಿತರು ದಲಿತೇತರರು ನಡೆಸುವ ಎಲ್ಲಾ ಹಬ್ಬ–ಹರಿದಿನಗಳಲ್ಲಿ ಭಾಗವಹಿಸುತ್ತಾರಾದರೂ, ಶೇ. ೮೪ರಷ್ಟು ಮಂದಿ ದೂರವೇ ಉಳಿದಿದ್ದಾರೆ. ಚಿತ್ರದುರ್ಗ ಜಿಲ್ಲೆಯ ದಲಿತರ ಪೈಕಿ ಕೇವಲ ಶೇ. ೨ರಷ್ಟು ಮಂದಿ ದೇವಸ್ಥಾನಗಳಲ್ಲಿ ತಮಗೆ ದಲಿತೇತರರಂತೆ ಪ್ರವೇಶ ನೀಡಲಾಗುತ್ತದೆ ಎಂದು ಹೇಳಿದರೆ, ಶೇ. ೯೮ರಷ್ಟು ಮಂದಿ

ಇದಕ್ಕೆ ನಕರಾತ್ಮಕ ಉತ್ತರ ನೀಡಿದ್ದಾರೆ. ಕೇವಲ ಶೇ. ೫ಕ್ಕಿಂತ ಕಡಿಮೆ ಪ್ರಮಾಣದ ದಲಿತರು ತಾವು ಹೋಗುವ ಹೋಟೆಲುಗಳಲ್ಲಿ ತಮಗೆ ದಲಿತೇತರರರಂತೆಯೇ ಮನ್ನಣೆ ನೀಡಲಾಗುತ್ತದೆ ಎಂದು ಒಪ್ಪಿದರೆ, ಉಳಿದ ಶೇ. ೯೫ರಷ್ಟು ಮಂದಿ ಇದಕ್ಕೆ ನಕರಾತ್ಮಕ ಉತ್ತರ ನೀಡಿದ್ದಾರೆ. ಹೀಗಾಗಿ ಸಾಮಾಜಿಕ ಸೇರ್ಪಡೆಯು ಚಿತ್ರದುರ್ಗ ಜಿಲ್ಲೆಯ ದಲಿತರಿಗೆ ಸಂಬಂಧಿಸಿದಂತೆ ಇನ್ನೂ ಕನ್ನಡಿಯೊಳಗಿನ ಗಂಟೇ ಆಗಿದೆ. ಉತ್ತಮತೆಯೆಡೆಗೆ ಮತ್ತು ಧನಾತ್ಮಕತೆಯಡೆಗೆ ಬದಲಾಗುತ್ತಿರುವ ಸೂಚನೆಗಳು ಇದ್ದರೂ ಸಹ, ಅವು ಹೆಚ್ಚಾಗಿಲ್ಲವೆನ್ನಬಹುದು.

**ತಾರತಮ್ಯ ಧೋರಣೆಯ ಪರಿಭಾವನೆ**

ತಾರತಮ್ಯ ಧೋರಣೆಯು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ, ಎರಡೂ ಸ್ತರಗಳಲ್ಲಿ ಬಹಿಷ್ಕಾರಕ್ಕಿಂತ ಭೀಕರವಾಗಿದೆ. ಇಲ್ಲಿನ ವಿವಿಧ ಕ್ಷೇತ್ರಗಳಲ್ಲಿ ಆಚರಿಸುತ್ತಿರುವ ತಾರತಮ್ಯ ಧೋರಣೆಯ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳಲು ಕೇಳಿದಾಗ ನಮ್ಮ ಸಮೀಕ್ಷೆಯ ಭಾಗೀದಾರರು ಗ್ರಾಮದಲ್ಲಿನ ದಲಿತೇತರರು ಬಳಸುವ ಎಲ್ಲಾ ಕುಡಿಯುವ ನೀರಿನ ಮೂಲ ನಮಗೆ ಲಭ್ಯತೆ ಇಲ್ಲ ಎಂದು ಹೇಳುತ್ತಾರೆ. ಶೇ. ೪೪ರಷ್ಟು ಮಂದಿ ಲಭ್ಯತೆ ಇದೆ ಎಂದು ಹೇಳಿದರೆ, ಶೇ. ೫೬ರಷ್ಟು ಮಂದಿ ಲಭ್ಯತೆ ಇಲ್ಲವೆಂದು ಹೇಳುತ್ತಾರೆ. ಅವರ ಮಕ್ಕಳನ್ನು ಶಾಲೆಗಳಲ್ಲಿನ ಆಸನಗಳು, ಬಿಸಿಯೂಟಕ್ಕೆ ತಟ್ಟೆಗಳು, ಪಠ್ಯ ಮತ್ತು ಪಠ್ಯೇತರ ಚಟುವಟಿಕೆಗಳಾದ ನಾಟ್ಯ, ಹಾಡು, ನಾಟಕ ಮತ್ತು ಭಾಷಣ ಕಲೆಗಳಲ್ಲಿ ಅವಕಾಶ ನೀಡುವಿಕೆಗೆ ಸಂಬಂಧಿಸಿದಂತೆ, ದಲಿತೇತರರ ಮಕ್ಕಳಿಗೆ ಸಮಾನವಾಗಿ ಕಾಣಲಾಗುತ್ತದೆಯೇ ಎಂಬ ಪ್ರಶ್ನೆಗೆ ಶೇ. ೪೯ರಷ್ಟು ನಕರಾತ್ಮಕವಾಗಿ ಉತ್ತರಿಸಿದರೆ, ಶೇ. ೫೧ ಸಕರಾತ್ಮಕವಾಗಿ ಉತ್ತರಿಸಿ, ಈ ಎಲ್ಲಾ ಚಟುವಟಿಕೆಗಳಲ್ಲಿ ತಮ್ಮ ಮಕ್ಕಳನ್ನು ಸಮಾನವಾಗಿ ಕಾಣುತ್ತಾರೆ ಎಂದು ಉತ್ತರಿಸುತ್ತಾರೆ

ಮನೆಗೆ ಆರೋಗ್ಯ ಕಾರ್ಯಕರ್ತರ ಭೇಟಿಯ ಸಂಖ್ಯೆ, ಔಷಧಗಳ ವಿತರಣೆ, ಹೆಚ್ಚುವರಿ ತಪಾಸಣೆಗಳಿಗಾಗಿ ಕೋರಿಕೆ, ತುರ್ತು ಸೇವೆಗಳು ಮತ್ತು ಸೌಲಭ್ಯಗಳನ್ನು ನೀಡುವ ವಿಷಯಗಳಲ್ಲಿ ಆರೋಗ್ಯ ಕಾರ್ಯಕರ್ತರು ನಿಮ್ಮನ್ನು ಮತ್ತು ದಲಿತೇತರರನ್ನು ಯಾವ ರೀತಿಯಲ್ಲಿ ಕಾಣುತ್ತಾರೆ ಎಂಬ ಪ್ರಶ್ನೆಗೆ ಇಂತಹುದೇ ಪರಿಭಾವನೆ ವ್ಯಕ್ತವಾಗಿದ್ದು, ಶೇ. ೪೯ರಷ್ಟು ಮಂದಿ ಸಕರಾತ್ಮಕವಾಗಿ ಉತ್ತರಿಸಿದರೆ, ಶೇ. ೫೧ರಷ್ಟು ಮಂದಿ ನಕರಾತ್ಮಕವಾಗಿ ಉತ್ತರಿಸಿದ್ದಾರೆ.

ವ್ಯಕ್ತಿಗಳನ್ನು ಹೋಟೆಲುಗಳಲ್ಲಿ, ಮಂದಿರದಲ್ಲಿ, ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಕ್ರಮಗಳಲ್ಲಿ ಪ್ರವೇಶ, ಆಹ್ವಾನ, ಆಸನ ವ್ಯವಸ್ಥೆ (ಸಮಾನ ಅಥವಾ ಪ್ರತ್ಯೇಕ), ತಟ್ಟೆಗಳು ಅಥವಾ ಲೋಟಗಳು, ಬಡಿಸಲಾದ ಆಹಾರ ಮತ್ತು ಬಳಸಲಾದ ತಟ್ಟೆಗಳು ಮತ್ತು ಲೋಟಗಳ ತ್ಯಾಜ್ಯಕ್ಕೆ ಸಂಬಂಧಿಸಿದಂತೆ ಸಂಗ್ರಾಹ್ಯ ಪರಿಭಾವನೆಯು ಒಟ್ಟಾರೆಯಾಗಿ ನಕರಾತ್ಮಕವಾಗಿದ್ದು (ಶೇ. ೯೨), ಕೇವಲ ಒಂದೆರಡು ಸಂದರ್ಭಗಳಲ್ಲಿ ಮಾತ್ರ ಸಕರಾತ್ಮಕವಾಗಿ (ಶೇ.೮) ಉತ್ತರಿಸಿದ್ದಾರೆ.

**ತಾರತಮ್ಯ ಧೋರಣೆಯ ವಿರುದ್ಧ ವಿರೋಧ**

ತಾರತಮ್ಯದ ಧೋರಣೆಗಳನ್ನು ಯಾವುದೇ ಮಾನವೀಯ ದೃಷ್ಟಿಕೋನದಲ್ಲಿ ನೋಡುವುದಾದರೂ, ಇದು ಅಕ್ಷಮ್ಯವಾಗುತ್ತದೆ ಮತ್ತು ಇದರ ಬಗ್ಗೆ ಸುಮ್ಮನಿರುವುದನ್ನು 'ಗೌಣವೆಂದು ಭಾವಿಸುವುದು' ಮತ್ತು ದಲಿತೇತರರು ಇದಕ್ಕೆ 'ದ್ವೇಷ ಸಾಧಿಸಬಹುದು' ಮತ್ತು ತೀವ್ರತೆ ಅಥವಾ ಉಗ್ರ ಪ್ರತಿಭಟನೆ ಮಾಡಬಹುದು. ಮಿತಿಮೀರಿದ ರೀತಿಯಲ್ಲಿ ಸುದೀರ್ಘ ಅವಧಿಯವರೆಗೆ ತುಳಿತಕ್ಕೊಳಗಾದ ಒಂದು ಸಮುದಾಯವು ಯಾವುದೇ ಸ್ವರೂಪದಲ್ಲಿ ವಿರೋಧ ವ್ಯಕ್ತಪಡಿಸುತ್ತದೆಯೆಂಬುದು ನಿರೀಕ್ಷಿತವೇ ಆಗಿದೆ. ಚಿತ್ರದುರ್ಗ ಜಿಲ್ಲೆಯ ದಲಿತರು ನಮ್ಮ ಪ್ರಶ್ನಾವಳಿಗಳಿಗೆ ನೀಡಿರುವ ಉತ್ತರವನ್ನು ಗಮನಿಸಿದರೆ ಅನೇಕ ರೀತಿಯ ತಾರತಮ್ಯಗಳಿರುವುದು  ಕಂಡುಬರುತ್ತವೆ. ಉದಾಹರಣೆಗೆ, ನೀರಿನ ತಾರತಮ್ಯ (ಕೇವಲ ಶೇ. ೭ರಷ್ಟು ವಿರೋಧ ವ್ಯಕ್ತಪಡಿಸಿದರೆ, ಶೇ. ೯೩ರಷ್ಟು ಜನ ವಿರೋಧಿಸದೇ ಇದ್ದಾರೆ), ಶೈಕ್ಷಣಿಕ ತಾರತಮ್ಯ (ಶೇ. ೨ರಷ್ಟು ಮಂದಿ ವಿರೋಧ ವ್ಯಕ್ತಪಡಿಸಿದರೆ, ಶೇ. ೯೮ರಷ್ಟು ಮಂದಿ ವಿರೋಧಿಸದೇ ಇದ್ದಾರೆ, ಆರೋಗ್ಯ ತಾರತಮ್ಯ ಶೇ. ೨ರಷ್ಟು ಮಂದಿ ವಿರೋಧಿಸಿದರೆ, ಉಳಿದ ಶೇ. ೯೮ರಷ್ಟು ಮಂದಿ ವಿರೋಧಿಸಿರುವುದಿಲ್ಲ, ಸಾಮಾಜಿಕ ತಾರತಮ್ಯ ಶೇ. ೬ರಷ್ಟು ವಿರೋಧಿಸಿದರೆ, ಶೇ. ೯೪ರಷ್ಟು ವಿರೋಧಿಸಿರುವುದಿಲ್ಲ ಮತ್ತು ಆರ್ಥಿಕ ತಾರತಮ್ಯ ಶೇ. ೭ರಷ್ಟು ವಿರೋಧಿಸಿದರೆ, ಶೇ. ೯೩ರಷ್ಟು ವಿರೋಧಿಸಿರುವುದಿಲ್ಲ.

ವಾಸ್ತವವಾಗಿ ದಲಿತರ ನಿಷ್ಕ್ರಿಯತೆಯು ಎದ್ದು ಕಾಣುತ್ತದೆ. ಮೂಲಭೂತ ಹಕ್ಕುಗಳ ಉಲ್ಲಂಘನೆಗೆ ಸಂಬಂಧಿಸಿದಂತಹ ಸಾಮಾಜಿಕ ಚಟುವಟಿಕೆಗಳಿಂದ ಹೆಚ್ಚಿನ ನಿರೀಕ್ಷಣೆಗಳಿವೆ. ತಾರತಮ್ಯದಂತಹ ನಕರಾತ್ಮಕ ಆಚರಣೆಗಳಿಗೆ ಸಂಬಂಧಿಸಿದಂತೆ, ಸಾಮಾಜಿಕ-ಆರ್ಥಿಕ ಮತ್ತು ನ್ಯಾಯಿಕ ವೃತ್ತಗಳಲ್ಲಿನ ಪರಿಸ್ಥಿತಿಗಳೂ ಸಹ ವಿಷಾದನೀಯವಾಗಿದೆ. ಅಂದರೆ ಇಲ್ಲಿ ಕಳಕಳಿಯೇ ಇಲ್ಲದ, ನಿಷ್ಪ್ರತಿಕ್ರಿಯೆಯ ನ್ಯಾಯಿಕ ವ್ಯವಸ್ಥೆ ಆಚರಣೆಯಲ್ಲಿದೆ.

**ಸಂಘರ್ಷಣೆಗಳಿಗೆ ಪರಿಹಾರದ ದೃಷ್ಟಿಕೋನ**

ಇಲ್ಲಿ ಸಮಸ್ಯೆಗಳ ಪರಿಹಾರವೆಂದರೆ ತಾರತಮ್ಯದಂತಹ, ಅದರಲ್ಲೂ ವಿಶೇಷವಾಗಿ ಕುಡಿಯುವ ನೀರು, ಆರೋಗ್ಯ, ಶಿಕ್ಷಣ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳಿಗಳಿಗೆ ಸಂಬಂಧಿಸಿದಂತಹ ನಕರಾತ್ಮಕ ಆಚರಣೆಗಳಿಗೆ ಸಮರ್ಪಕವಾದ ಪರಿಹಾರ ಕಂಡುಕೊಳ್ಳುವುದು. ಮಾದರಿಯಾಗಿ ಆಯ್ಕೆ ಮಾಡಲಾದ ಗ್ರಾಮಗಳಲ್ಲಿನ ದಲಿತರ ನೀರಿನ ತಾರತಮ್ಯ, ಆರೋಗ್ಯ ತಾರತಮ್ಯ ಮತ್ತು ಶೈಕ್ಷಣಿಕ ತಾರತಮ್ಯಗಳನ್ನು ಮೂರನೆಯ ಒಂದು ಭಾಗದಷ್ಟು, ಸಂಧರ್ಭಗಳಲ್ಲಿ ಸಮರ್ಪಕವಾಗಿ ಪರಿಹರಿಸಲಾಗಿದೆ. (ಶೇ.೩೨, ಶೇ. ೩೧೨, ಮತ್ತು ಶೇ. ೩೧ ಕ್ರಮವಾಗಿ ನೀರು ಆರೋಗ್ಯ ಮತ್ತು ಶಿಕ್ಷಣ) ಎಂದು ಹೇಳುತ್ತಾರೆ. ಆದರೂ ಸಹ ಬಹುಪಾಲು ಜನರಿಗೆ ಇದು ಸಮಪರ್ಕವಾಗಿ ಪರಿಹಾರವಾದಂತಿಲ್ಲ. ನಕರಾತ್ಮಕ ಆಚರಣೆಗಳು, ಸೇವೆಗಳು, ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ವಲಯಗಳಲ್ಲಿ ಇಂದಿಗೂ ಪ್ರಚಲಿತದಲ್ಲಿದ್ದು, ಕೆಲವೊಂದು ಸಂದರ್ಭಗಳಲ್ಲಿ ಅವುಗಳನ್ನು

ಪೂರಕವಾಗಿ ಪರಿಹರಿಸಲಾಗಿದೆ. ಏಕೆಂದರೆ ಸ್ಥಳೀಯ ಜನರು ಮಾನವೀಯ ಸಂಬಂಧಗಳ ವಲಯಗಳಲ್ಲಿ ಬದಲಾಗುತ್ತಿರುವ ಸ್ಥಿತಿಗತಿಗಳಿಗೆ ಅನುಗುಣವಾಗಿ ಕಲಿಯುತ್ತಿದ್ದಾರೆ.

**ಸ್ವಾತಂತ್ರ್ಯದ ಪರಿಗ್ರಹಣೆ**

ವೈಯಕ್ತಿಕ ಸ್ವಾತಂತ್ರಕ್ಕೆ ಸಂಬಂಧಿಸಿದಂತೆ ಗ್ರಾಮದಲ್ಲಿನ ಎಲ್ಲಾ ರೀತಿಯ ಉದ್ಯೋಗಗಳನ್ನು ಪಡೆದುಕೊಳ್ಳುವಲ್ಲಿ ಸಮರ್ಥರಾಗಿದ್ದಾರೆ. ಶೇ. ೭೨ರಷ್ಟು ಮಂದಿಗೆ ಎಲ್ಲಾ ರೀತಿ ಉದ್ಯೋಗಗಳು ದೊರಕುತ್ತಿಲ್ಲವಾದರೂ, ಈ ಸಮೀಕ್ಷೆಯಲ್ಲಿ ಭಾಗವಹಿಸಿದ ಶೇ. ೨೮ ಮಂದಿಗೆ ಎಲ್ಲಾ ರೀತಿಯ ಉದ್ಯೋಗಗಳೂ ದೊರಕುತ್ತಿವೆ ಎಂದು ತಿಳಿದುಬಂದಿದೆ. ಗ್ರಾಮಕ್ಕೆ ಕಾರ್ಮಿಕರ ಅವಶ್ಯಕತೆ ಹೆಚ್ಚಾಗಿದ್ದು, ಅವರಿಲ್ಲದೇ ಅನೇಕ ದಲಿತೇತರರು ಯಾವುದೇ ರೀತಿಯ ಉತ್ತಮ ಕೆಲಸವನ್ನು ನಡೆಸಲು ಸಾಧ್ಯವೇ ಇಲ್ಲ ಎಂಬ ಕಹಿಸತ್ಯವನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಶೇ. ೩೯ರಷ್ಟು ದಲಿತರು ತಾವು ಗ್ರಾಮದಲ್ಲಿ ನಡೆಯುವ ಎಲ್ಲಾ ರೀತಿಯ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಬೇಕೆಂದು ಭಾವಿಸುತ್ತುರಾದರೂ, ಶೇ. ೬೧ರಷ್ಟು ದಲಿತರು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುವುದೇ ಇಲ್ಲ. ಶೇ. ೪೯ರಷ್ಟು ಮಂದಿ ತಾವು ಗ್ರಾಮದಲ್ಲಿ ಎಲ್ಲಿ ಬೇಕೆಂದರಲ್ಲಿ ಸಂಚರಿಸುವಂತಿಲ್ಲ ಎಂದು ಹೇಳಿದರೆ, ಕೇವಲ ಶೇ. ೫೧ರಷ್ಟು ಮಂದಿ ಅವರು ಎಲ್ಲೆಡೆಯಲ್ಲಿಯೂ ಓಡಾಡಬಹುದೆಂದು ಹೇಳುತ್ತಾರೆ. ಅಸ್ಪೃಶ್ಯ ಪ.ಜಾತಿಗಳು ಎಲ್ಲೆಂದರಲ್ಲಿ, ವಿಶೇಷವಾಗಿ ಗೊಲ್ರಹಟ್ಟಿ ಗ್ರಾಮಗಳಲ್ಲಿ ಓಡಾಡುವಂತಿಲ್ಲ. ಮತ್ತು ಇದನ್ನು ಸಾಮಾಜಿಕ ಕೆಡುಕೆಂದು ಪರಿಗಣಿಸಲಾಗಿದೆ. ಶೇ. ೪೭ ರಷ್ಟು ದಲಿತರನ್ನೊಳಗೊಂಡ ಪ್ರತಿಭಟನೆ ನಡೆಯಿತಾದರೂ, ಉಳಿದ ಶೇ. ೫೩ರಷ್ಟು ಮಂದಿ ಇಂತಹ ತಾರತಮ್ಯದ ವಿರುದ್ಧ ಪ್ರತಿಭಟನೆ ನಡೆಸುವುದಿಲ್ಲ. ಶೇ. ೫೪ರಷ್ಟು ಪ್ರತಿಕ್ರಿಯಕಾರರು ಅನ್ಯಾಯದ ವಿರುದ್ಧ ಪ್ರಶ್ನಿಸುವುದಿಲ್ಲವೆಂದು ಹೇಳಿದರೆ ಶೇ. ೪೬ರಷ್ಟು ಮಂದಿ ಪ್ರತಿಭಟಿಸುತ್ತೇವೆಂದು ಹೇಳಿದ್ದಾರೆ. ಇಲ್ಲಿ ಮತ್ತೊಮ್ಮೆ ಪ್ರಾಬಲ್ಯತೆ ಅವಲಂಬಿನೆಯ ಸಂಬಂಧವು ಕಾರ್ಯಶೀಲವಾಗಿದೆಯೆಂದು ಹೇಳಬಹುದು. ಅಂದರೆ ಕೆಲವೇ ಕೆಲವು ಆಚರಣೆಗಳಿಗೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಿದ್ಧತೆ ನಡೆಸಿಕೊಳ್ಳುವ ಸಂದರ್ಭದಲ್ಲಿ ದಲಿತೇತರರು, ಶ್ರಮ ಮತ್ತು ಕೌಶಲ್ಯಕ್ಕೆ ದಲಿತರನ್ನು ಅವಲಂಬಿಸಿದ್ದಾರೆ. ಒಟ್ಟಾರೆಯಾಗಿ ಹೇಳುವುದಾದರೆ, ಇಂದಿಗೂ ಸಹ ಬಹುಪಾಲು ಜನರಿಗೆ ಗ್ರಾಮೀಣ ಪರಿಭಾಷೆಯಲ್ಲಿ ತಮ್ಮ ವೈಯಕ್ತಿಕ ಸ್ವಾತಂತ್ರ್ಯವನ್ನು ಸಾಧಿಸಲು ಸಾಧ್ಯವಾಗಿಲ್ಲ.

**ದಲಿತರ ಅಭಿವೃದ್ಧಿಯಲ್ಲಿನ ಲಿಂಗ ಆಯಾಮಗಳು**

ದಲಿತರ ಅಭಿವೃದ್ಧಿಗೆ ಸಂಬಂಧಿಸಿದಂತಹ ಲಿಂಗ ಆಯಾಮ ಕುರಿತಂತೆ ಗಮನಿಸುವುದಾದರೆ, ಮಹಿಳೆಯರು ಗರ್ಭಾವಸ್ಥೆಯಲ್ಲಿರುವಾಗ, ಪ್ರಸವಪೂರ್ವ ಮತ್ತು ಪ್ರಸವ ನಂತರ ಎಷ್ಟರಮಟ್ಟಿಗೆ ವಿಶ್ರಾಂತಿಯನ್ನು ಪಡೆಯುತ್ತಾರೆ. ಶಿಶುವಿನ ಜನನ ಎಲ್ಲಿ ನಡೆಯುತ್ತದೆ ಮತ್ತು ಆರೋಗ್ಯ ತಪಾಸಕರು/ ಸಹಾಯಕರು ತಿಂಗಳಿನಲ್ಲಿ ಎಷ್ಟು ಬಾರಿ ಅವರನ್ನು ಪರಿಶೀಲಿಸುತ್ತಾರೆ, ದಲಿತ ಮಹಿಳೆಯರಿಗೆ ಗರ್ಭಾವಸ್ಥೆಯಲ್ಲಿನ ಆರೋಗ್ಯಕ್ಕೆ ಪೂರಕವಾದ ಯಾವ ರೀತಿಯ ಸಹಕಾರ ಸಿಗುತ್ತದೆ ಮತ್ತು

ಅವರಿಗೆ ದಿನಕ್ಕೆ ಎಷ್ಟು ಲೀಟರ್ ನೀರು ಸಿಗುತ್ತದೆ ಎಂಬ ಅಂಶಗಳನ್ನು ಒಳಗೊಂಡಿದೆ. ಹೀಗಾಗಿ ಈ ದೃಷ್ಟಿಕೋನವು ಒಂದು ರೀತಿಯಲ್ಲಿ ಅವಶ್ಯಕಗಳ ಲಭ್ಯತೆ ಸಂಬಂಧಿಸಿದೆ. (ಕೋಷ್ಟಕ ೯.೯) ಬಹುಪಾಲು ಗರ್ಭಿಣಿ ಮಹಿಳೆಯರು (ಶೇ. ೫೯) ಪ್ರಸವದ ಮೊದಲು ೩ ತಿಂಗಳಿಗಿಂತ ಕಡಿಮೆ ಅವಧಿಗೆ ವಿಶ್ರಾಂತಿ ಪಡೆದುಕೊಳ್ಳುತ್ತಾರೆ. ಶೇ. ೨೦ರಷ್ಟು ಮಹಿಳೆಯರು ೩ ತಿಂಗಳ ವಿಶ್ರಾಂತಿ ತೆಗೆದುಕೊಳ್ಳುತ್ತಾರೆ ಮತ್ತು ಶೇ. ೨೧ರಷ್ಟು ಮಂದಿ ೩ ತಿಂಗಳಿಗಿಂತ ಹೆಚ್ಚಿನ ಅವಧಿಗೆ ವಿಶ್ರಾಂತಿ ತೆಗೆದುಕೊಳ್ಳುತ್ತಾರೆ. ಸಹಜವಾಗಿಯೇ ಜೀವನ ನಡೆಸಲು ಮತ್ತು ಕುಟುಂಬದ ಆಹಾರ ಭದ್ರತೆಯನ್ನು ಕಾಯ್ದುಕೊಳ್ಳಲು ದಲಿತ ಮಹಿಳೆಯರಿಗೆ ತಮ್ಮ ಗರ್ಭಾವಸ್ಥೆಯ ಕಡೆಯ ದಿನಗಳಲ್ಲಿಯೂ ಸಹ ದುಡಿಯುವುದು ಅನಿವಾರ್ಯವಾಗುತ್ತದೆ. ಇದೇ ಕಾರಣಗಳಿಗಾಗಿ ಅವರು ಪ್ರಸವದ ನಂತರದ ಬಾಣಂತನದ ಅವಧಿಯನ್ನೂ ಕಡಿಮೆ ಮಾಡಿಕೊಳ್ಳಬೇಕಾಗುತ್ತದೆ. ಶೇ. ೫೭ರಷ್ಟು ಹೆಚ್ಚಿನ ಸಂಖ್ಯೆ ದಲಿತ ಮಹಿಳೆಯರು ೩ ತಿಂಗಳಿಗಿಂತ ಕಡಿಮೆ ಅವಧಿಯ ಬಾಣಂತನ ವಿಶ್ರಾಂತಿ ಪಡೆಯುತ್ತಾರೆ. ಅಂದರೆ, ಶೇ. ೨೦ರಷ್ಟು ಮಂದಿ ೩ ತಿಂಗಳ ಬಾಣಂತನ ನಡೆಸುವುದಾಗಿ ಹೇಳಿರುತ್ತಾರೆ. ಮತ್ತು ಶೇ. ೨೩ರಷ್ಟು ಮಂದಿ ೩ ತಿಂಗಳಿಗಿಂತ ಹೆಚ್ಚಿನ ಅವಧಿಗೆ ಬಾಣಂತನದ ಆರೈಕೆ ಪಡೆದುಕೊಳ್ಳುತ್ತೇವೆಂದು ಹೇಳಿರುತ್ತಾರೆ. ಇತ್ತೀಚೆಗೆ ಆಸ್ಪತ್ರೆಗಳಲ್ಲಿ ಪ್ರಸವ ನಡೆಯುವುದು ಸಾಮಾನ್ಯ ಶೇ. ೮೦ರಷ್ಟು ಮಂದಿ ಆಸ್ಪತ್ರೆಯಲ್ಲಿ ಪ್ರಸವ ನಡೆಯುತ್ತದೆಂದು ಹೇಳಿದರೆ, ಉಳಿದ ಶೇ. ೨೦ರಷ್ಟು ಮಂದಿ ಮನೆಯಲ್ಲಿ ಪ್ರಸವವಾಯಿತ್ತೆಂದು ಹೇಳುತ್ತಾರೆ.

ಆರೋಗ್ಯ ಸಹಾಯಕರು ತಿಂಗಳಿನಲ್ಲಿ ಎಷ್ಟು ಬಾರಿ ಇಂತಹ ಮಹಿಳೆಯರನ್ನು ತಪಾಸಣೆ ಮಾಡಲು ಬರುತ್ತಾರೆ. ಎಂಬ ಪ್ರಶ್ನೆಗೆ ಯಾವುದೇ ಮಹಿಳೆಯೂ ಉತ್ತರಿಸಿಲ್ಲ ಇದರಿಂದ ಆರೋಗ್ಯ ಸಹಾಯಕರು ಭೇಟಿಗೆ ಬರುವುದೇ ಇಲ್ಲ ಎಂಬ ಅಂಶವನ್ನು ಪ್ರಾಯಶಃ ಸೂಚಿಸುತ್ತದೆ. ಗರ್ಭಿಣಿಯರಿಗೆ ಸಂಬಂಧಿಸಿದ ಆರೋಗ್ಯ ಬೆಂಬಲವನ್ನು ಪಡೆದುಕೊಳ್ಳುತ್ತೀರಾ? ಎಂಬ ಪ್ರಶ್ನೆಗೆ ಶೇ. ೩೨ರಷ್ಟು ಮಂದಿ ಇಂತಹ ಬೆಂಬಲ ದೊರಕುತ್ತದೆಯೆಂದು ಹೇಳಿದರೆ, ಉಳಿದ ಶೇ. ೬೮ರಷ್ಟು ಮಂದಿ ನಕರಾತ್ಮಕವಾಗಿ ಉತ್ತರಿಸಿರುತ್ತಾರೆ.

**ಕೋಷ್ಟಕ ೫.೧. ದಲಿತ ಅಭಿವೃದ್ಧಿಯಲ್ಲಿನ ಲಿಂಗ ಆಯಾಮಗಳು**

| ಲಿಂಗ ಮತ್ತು ದಲಿತರ ಅಭಿವೃದ್ಧಿ | ೩ ತಿಂಗಳು | ೩ ತಿಂಗಳು | ೩ ತಿಂಗಳು | | |
|---|---|---|---|---|---|
| ಪ್ರಸವ ಮೊದಲು ಮಹಿಳೆ ಪಡೆದ ವಿಶ್ರಾಂತಿ | ೫೯ | ೨೦ | ೨೧ | | |
| ಪ್ರಸವ ನಂತರ ಮಹಿಳೆ ಪಡೆದ ವಿಶ್ರಾಂತಿ | ೫೭ | ೨೦ | ೨೩ | | |
| ಶಿಶುವಿನ ಸಾಮಾನ್ಯ ಜನನ ಸ್ಥಳ | ಆಸ್ಪತ್ರೆ ೮೦ | ಮನೆ ೨೦ | | | |
| ತಿಂಗಳಿನಲ್ಲಿ ಆರೋಗ್ಯ ತಪಾಸಕರ ಭೇಟಿಯ ಸಂಖ್ಯೆ | ಉತ್ತರವಿಲ್ಲ | | | | |

| | | | | | |
|---|---|---|---|---|---|
| ದಲಿತರಿಗೆ ಗರ್ಭಾವಸ್ಥೆಯಲ್ಲಿನ | ಬೆಂಬಲವಿದೆ | ಬೆಂಬಲವಿಲ್ಲ | | | |
| ಆರೋಗ್ಯ ಬೆಂಬಲ | ೩೨ | ೬೮ | | | |
| ಪ್ರತೀ ದಿನ ಲಭ್ಯವಿರುವ ನೀರು | ೧ ಲೀ | ೨-೩ ಲೀ | ೩ ಲೀ | ೪ ಲೀ | ೫ ಲೀ |
| ಲೀಟರ್‌ಗಳಲ್ಲಿ (ಲೀಟರ್-ಪ್ರತಿಶತ) | ೧೩% | ೪೪ % | ೩೫% | ೬ % | ೨ % |

ಮೂಲ: ವಿಶೇಷ ಕೇಂದ್ರೀಕರಣ ಪ್ರಶ್ನಾವಳಿ ಸಮೀಕ್ಷೆ, ೨೦೧೩.

ತಾವು ಪ್ರತೀ ದಿನ ಎಷ್ಟು ಪ್ರಮಾಣದ ನೀರನ್ನು ಕುಡಿಯುತ್ತೀರ ಎಂದು ಕೇಳಿದಾಗ ಶೇ. ೧೩ರಷ್ಟು ಮಂದಿ ೧ ಲೀಟರ್ ಎಂದರೆ, ೨-೩ ಲೀಟರ್ ಎಂದು ೪೪ರಷ್ಟು ಮಂದಿ, ಮತ್ತು ಶೇ. ೩೫ರಷ್ಟು ಮಂದಿ ೩ ಲೀಟರ್ ಎಂದೂ, ಶೇ. ೬ರಷ್ಟು ಮಂದಿ ೪ ಲೀಟರ್ ಎಂದೂ ಮತ್ತು ಕೇವಲ ಶೇ. ೨ರಷ್ಟು ಮಂದಿ ೫ ಲೀಟರ್ ಎಂದೂ ಉತ್ತರಿಸಿದ್ದಾರೆ. ಪ್ರತಿ ದಿನವೊಂದಕ್ಕೆ ಸಾಮಾನ್ಯ ವ್ಯಕ್ತಿಗೆ ಅಂದಾಜು ೪೦ ಲೀಟರ್ ನೀರು ಬೇಕಾಗುವ ಸಂದರ್ಭದಲ್ಲಿ ಇವರು ಬಹಳಷ್ಟು ಕೊರತೆ ಎದುರಿಸುತ್ತಿದ್ದಾರೆ ಎಂಬ ಅಂಶ ಎದ್ದು ಕಾಣುತ್ತದೆ. ಇಲ್ಲಿ ಸೂಚಿಸಲಾಗಿರುವ ನೀರಿನ ಮಟ್ಟವು ಕೇವಲ ಕುಡಿಯುವುದಕ್ಕೆ ಎಂಬುದಾದರೂ, ಸಾಮಾನ್ಯ ವಯಸ್ಕ ಪುರುಷ ಅಥವಾ ಮಹಿಳೆಗೆ ಅವಶ್ಯಕವಿರುವ ಮಟ್ಟಕ್ಕಿಂತ ಇದು ಬಹಳ ಕಡಿಮೆಯಿದೆ.

**ಕೋಷ್ಟಕ ೫.೨. ಚಿತ್ರದುರ್ಗ ಜಿಲ್ಲೆಯ ದಲಿತ ಅಭಿವೃದ್ಧಿ ಸೂಚ್ಯಂಕ ರಚನೆ(ಸಿಡಿಡಿಐ) ಮೌಲ್ಯ**

| ಕ್ರ.ಸಂ. | ಸೂಚ್ಯಂಕ | ಮೌಲ್ಯ |
|---|---|---|
| ೧. | ಸಾಂಸ್ಥಿಕ ಒಳಗೊಳ್ಳುವಿಕೆ/ಸೇರ್ಪಡೆ | ೦.೨೭ |
| ೨. | ಸಾಮಾಜಿಕ ಒಳಗೊಳ್ಳುವಿಕೆ/ಸೇರ್ಪಡೆ | ೦.೩೦ |
| ೩. | ತಾರತಮ್ಯದ ಗ್ರಹಿಕೆ ಇಲ್ಲದಿರುವುದು | ೦.೩೬ |
| ೪. | ತಾರತಮ್ಯದ ವಿರುದ್ಧ ಹೋರಾಟ | ೦.೨೭ |
| ೫. | ಘರ್ಷಣೆಯ ಕ್ರಾಂತಿ | ೦.೨೮ |
| ೬. | ಜೀವನಶೈಲಿಯ ಸ್ತರ | ೦.೨೪ |
| ೭ | ಸ್ವಾತಂತ್ರ್ಯದ ಅನುಭವ | ೦.೨೫ |
| ೮. | ದಲಿತ ಅಭಿವೃದ್ಧಿಯಲ್ಲಿ ಲಿಂಗ ಆಯಾಮ | ೦.೩೬ |
| ೯. | ಮೂಲ ಸೌಕರ್ಯಗಳ ಲಭ್ಯತೆ | ೦.೪೦ |
| ೧೦ | ಶಿಕ್ಷಣದ ಲಭ್ಯತೆ | ೦.೩೫ |
| | ಸಿಡಿಡಿಐ ಒಟ್ಟು | ೦.೩೦ |

**ಮೂಲ: ಚಿತ್ರದುರ್ಗ ಜಿಲ್ಲಾ ಮಾನವ ಅಭಿವೃದ್ಧಿ ವರದಿ-೨೦೧೪**

ಅಧ್ಯಯನ ಗ್ರಾಮಗಳಲ್ಲಿ ಮತ್ತು ಜಿಲ್ಲೆಯಲ್ಲಿನ ದಲಿತರ ಆಭಿವೃದ್ದಿಯ ಸ್ವರೂಪ ಮತ್ತು ವ್ಯಾಪ್ತಿಯನ್ನು ಬಿಂಬಿಸುತ್ತದೆ. ಸಿ.ಡಿ.ಡಿ.ಐ. ಗುಂಡಾಸಮುದ್ರದಲ್ಲಿ ೦.೨೮೦ರಿಂದ ೦.೪೯ರ ಶ್ರೇಣಿಯಲ್ಲಿ, ಬಿದಿರಿಕೆರೆ ಗ್ರಾಮದಲ್ಲಿ ೦.೨೭ರಿಂದ ೦.೩೭ರ ಶ್ರೇಣಿಯಲ್ಲಿ ಮತ್ತು ಬಳ್ಳಾರಿ ಹಟ್ಟಿಯಲ್ಲಿ ೦.೨೧ರಿಂದ ೦.೪೦ರ ಶ್ರೇಣಿಯಲ್ಲಿ ಕಂಡುಬರುತ್ತದೆ. ಗ್ರಾಮಗಳ ಪೈಕಿ ಗುಂಡ ಸಮುದ್ರದ ದಲಿತರು ಉತ್ತಮವಾಗಿದ್ದು, ಕನಿಷ್ಠ ಮೂರು ವಿಷಯಗಳಲ್ಲಿ ಸರಾಸರಿ ಮಟ್ಟವು ೦.೪೦ರಿಂದ ೦.೫೯ರ ಶ್ರೇಣಿಯಲ್ಲಿದೆ. ಶಿಕ್ಷಣ ಲಭ್ಯತೆ ೦.೪೪, ಮೂಲಭೂತ ಸೌಲಭ್ಯಗಳ ಲಭ್ಯತೆ ೦.೪೭ ಮತ್ತು ತಾರತಮ್ಯದ ಪರಿಭಾವನೆಯೂ ೦.೪೯ ಮತ್ತು ಇತರೆ ಎಲ್ಲಾ ವಿಷಯಗಳ ಸೂಚಕವೂ ೦.೪೦ಕ್ಕಿಂತ ಕಡಿಮೆಯಿದ್ದು, ಇದು ಸರಾಸರಿಗಿಂತ ಕಡಿಮೆಯಿದೆ. ಬಿದಿರಿಕೆರೆ ಗ್ರಾಮದಲ್ಲಿ ಎಲ್ಲಾ ಸೂಚಕಗಳು ೦.೪೦ಗಿಂತ ಕಡಿಮೆಯಿದ್ದು, ಗ್ರಾಮವು ದಲಿತ ಅಭಿವೃದ್ಧಿಯಲ್ಲಿ ಸರಾಸರಿಗಿಂತ ಕಡಿಮೆಯಿದೆ ಎಂದು ಸೂಚಿಸುತ್ತದೆ. ಬಳ್ಳಾರಿಹಟ್ಟಿಯಲ್ಲಿ ಕೇವಲ ಒಂದೇ ಒಂದು ಸೂಚಿಯೂ ಅಂದರೆ ಮೂಲಭೂತ ಸೌಲಭ್ಯಗಳ ಲಭ್ಯತೆಯು ೦.೪೭ ಇದ್ದು ಉಳಿದ ಎಲ್ಲಾ ಅಂಶಗಳು ೦.೪೦ಗಿಂತ ಕಡಿಮೆಯಿದೆ ಮತ್ತು ದಲಿತರ ಅಭಿವೃದ್ಧಿಯು ಸರಾಸರಿಗಿಂತ ಕಡಿಮೆಯೇ ಇದೆ. ಚಿತ್ರದುರ್ಗ ಜಿಲ್ಲೆಯ ಸರಾಸರಿಯನ್ನು ಗಮನಿಸಿದರೆ ಗುಣಿಸಲಾದ ದಲಿತ ಅಭಿವೃದ್ಧಿ ಸೂಚಕಗಳು ಜಿಲ್ಲೆಯನ್ನು ಸರಾಸರಿಗಿಂತ ಕೆಳಮಟ್ಟದಲ್ಲಿ ಇರಿಸುತ್ತವೆ. ದಲಿತ ಅಭಿವೃದ್ಧಿಯ ಸೂಚಕಗಳು ಗ್ರಾಮಗಳ ಮತ್ತು ಜಿಲ್ಲೆಯಲ್ಲಿ ಉತ್ತಮ ಆಥವಾ ಅತ್ಯುತ್ತಮ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಹೆಚ್ಚಿನ ಆಗತ್ಯವಿದೆ. ದಲಿತರು ಮತ್ತು ದಲಿತೇತರರಿಗೂ ದಲಿತ ಅಭಿವೃದ್ಧಿ ಸ್ವರೂಪ ಮತ್ತು ವ್ಯಾಪ್ತಿಯನ್ನು ಪರಿಚಯ ಮಾಡಿಕೊಡಬೇಕು. ಆ ಮೂಲಕ ಈ ಸಮುದಾಯಗಳು ಸುಸ್ಥಿರ ರೀತಿಯಲ್ಲಿ ಸಹಕರಿಸುವ ಮೂಲಕ ಮಂದುವರೆಯುತ್ತವೆ. ಮತ್ತು ಸಮುದಾಯದ/ಸಮಾಜದ ಏಳಿಗೆಗೆ ನಾಂದಿಯಾಗುತ್ತದೆ. ನಮ್ಮದು ಸ್ವತಂತ್ರ ರಾಷ್ಟ್ರವಾಗಿರುವುದರಿಂದ ಪ್ರತಿಯೊಬ್ಬರೂ ದಲಿತರು ಮತ್ತು ದಲಿತೇತರು ಸಂಪೂರ್ಣವಾಗಿ ಸ್ವತಂತ್ರರಾಗಿರಬೇಕು.

**೫.೩.೪. ದಾವಣಗೆರೆ ಜಿಲ್ಲೆಯ ಸಂಯುಕ್ತ ದಲಿತ ಅಭಿವೃದ್ಧಿ ಸೂಚ್ಯಂಕ (ಸಿಡಿಡಿಐ)**

ಹರಪನಹಳ್ಳಿಯ ಗ್ರಾಮವೊಂದರಲ್ಲಿ ಕೈಗೊಳ್ಳಲಾದ ವಿಶೇಷ ಅಧ್ಯಯನವು ಅಲ್ಲಿ ೦.೪೮೩ ಸಿಡಿಡಿಐ ಮೌಲ್ಯವನ್ನು ಕಂಡುಕೊಂಡಿದೆ. ದಲಿತರ ಅಭಿವೃದ್ಧಿಯು ಸರಾಸರಿ ಪ್ರಮಾಣ, ಆದರೆ ದಲಿತ ಅಭಾವ ಸೂಚ್ಯಂಕ ೦.೫೧೭ ಇದೆ ಎಂದು ತಿಳಿದು ಬರುತ್ತದೆ.

ಕೋಷ್ಟಕ ೫.೩. ದಾವಣಗೆರೆ ದಲಿತ ಅಭಿವೃದ್ಧಿ ಸೂಚ್ಯಂಕ ರಚನೆ(ಸಿಡಿಡಿಐ) ಮೌಲ್ಯ

| ಕ್ರಸಂ. | ಸೂಚ್ಯಂಕ | ಮೌಲ್ಯ |
|---|---|---|
| ೧. | ಸಾಂಸ್ಥಿಕ ಒಳಗೊಳ್ಳುವಿಕೆ/ಸೇರ್ಪಡೆ | ೦.೨೭ |
| ೧. | ಸಾಂಸ್ಥಿಕ ಒಳಗೊಳ್ಳುವಿಕೆ/ಸೇರ್ಪಡೆ | ೦.೮೩ |
| ೨. | ಸಾಮಾಜಿಕ ಒಳಗೊಳ್ಳುವಿಕೆ/ಸೇರ್ಪಡೆ | ೦.೨ |
| ೩. | ತಾರತಮ್ಯದ ಗ್ರಹಿಕೆ ಇಲ್ಲದಿರುವುದು | ೦.೮ |
| ೪. | ತಾರತಮ್ಯದ ವಿರುದ್ಧ ಹೋರಾಟ | ೦.೬ |
| ೫. | ಘರ್ಷಣೆಯ ಕ್ರಾಂತಿ | ೦.೧ |
| ೬ | ಜೀವನ ಶೈಲಿಯ ಸ್ತರ | ೦.೩೩ |
| ೭ | ಸ್ವಾತಂತ್ರ್ಯದ ಅನುಭವ | ೦.೬ |
| ೮. | ದಲಿತ ಅಭಿವೃದ್ಧಿಯಲ್ಲಿ ಲಿಂಗ ಆಯಾಮ | ೦.೭ |
| ೯. | ಮೂಲ ಸೌಕರ್ಯಗಳ ಲಭ್ಯತೆ | ೦.೧೭ |
| ೧೦ | ಶಿಕ್ಷಣದ ಲಭ್ಯತೆ | ೦.೫೦ |
| | ಸಿಡಿಡಿಐ ಒಟ್ಟು | ೪.೮೩/೧೦=೦.೪೮೩ |

ಮೂಲ: ದಾವಣಗೆರೆ ಜಿಲ್ಲಾ ಮಾನವ ಅಭಿವೃದ್ಧಿ -೨೦೧೪ ಪು. ೨೬೬

**ಸಿಡಿಡಿಐ ಮೌಲ್ಯದ ವಿವರಣೆ:**

- ಮೌಲ್ಯದ ಅಂಕಿ ಅಂಶ – ೦.೮–೦.೧೦, ಅತ್ಯುತ್ತಮ ಶ್ರೇಣಿ
- ಮೌಲ್ಯದ ಅಂಕಿ ಅಂಶ – ೦.೬–೦.೭೯, ಉತ್ತಮ ಶ್ರೇಣಿ
- ಮೌಲ್ಯದ ಅಂಕಿ ಅಂಶ – ೦.೪–೦.೫೯, ಸರಾಸರಿ
- ಮೌಲ್ಯದ ಅಂಕಿ ಅಂಶ – ೦.೪ ಗಿಂತ ಕಡಿಮೆ, ಸರಾಸರಿಗಿಂತ ಕಡಿಮೆ

ಸಿಡಿಡಿಐ = ೦.೪೮

**ದಲಿತ ಅಭಾವ ಸೂಚ್ಯಂಕ (ಡಿಡಿಐ)**

೧ – ಸಿಡಿಡಿಐ = ಡಿಡಿಐ =೦.೫೨ ಅಲ್ಲಿ, ಡಿಡಿಐ (ದಲಿತ ಅಭಾವ ಸೂಚ್ಯಂಕ)

ಸಿಡಿಡಿಐ (ದಲಿತ ಅಭಿವೃದ್ಧಿ ಸೂಚ್ಯಂಕ ರಚನೆ) ೧–ದಲಿತ ಅಭಿವೃದ್ಧಿ ಸೂಚ್ಯಂಕ ರಚನೆ

ಮುಖ್ಯವಾಹಿನಿಯ ಅಭಿವೃದ್ಧಿ ಸಮಸ್ಯೆಗಳಿಗಿಂತ ದಲಿತ ಅಭಿವೃದ್ಧಿ ಸಮಸ್ಯೆಗಳು ಭಿನ್ನವಾಗಿರುತ್ತವೆ. (ಉದಾಹರಣೆ: ಅಸ್ಪೃಶ್ಯತೆ, ಸಾಮಾಜಿಕ ಬಹಿಷ್ಕಾರ, ಪಕ್ಷಪಾತ ಇತ್ಯಾದಿಗಳ ಪರಿಣಾಮ ದಲಿತ ಸಮುದಾಯವು ಏಣಿಯ ಕೆಳಸ್ತರದಲ್ಲಿದೆ) ಸ್ವಾತಂತ್ರ್ಯ, ಸಾಮಾಜಿಕ ಸೇರ್ಪಡೆ ಇತ್ಯಾದಿ ನಿರ್ದಿಷ್ಟ ಸಮಸ್ಯೆಗಳು ದಲಿತರ ಮೇಲೆ ಪ್ರಭಾವ ಬೀರುವ ಮೂಲಕ ದುರ್ಬಲತೆಯಿಂದ ಅವರು ಮುನ್ನಡೆಯುತ್ತಾರೆ(ಸಾಮಾಜಿಕ ಸಹಭಾಗಿತ್ವ, ಸಾಮಾಜಿಕ/ಆರ್ಥಿಕ/ರಾಜಕೀಯ/ ಸಾಂಸ್ಕೃತಿಕ ಅವಕಾಶ ಮತ್ತು ಚಟುವಟಿಕೆಗಳಲ್ಲಿ) ಮತ್ತು ಈ ದುರ್ಬಲತೆಯು ದಲಿತರ ಸಾಮರ್ಥ್ಯವನ್ನು ತಿಳಿಸುತ್ತದೆ. ಈ ಎಲ್ಲ ಕಾರಣಗಳು ಪರಿಶಿಷ್ಟ ಜಾತಿಯ ಸ್ಥಿತಿಗತಿಗೆ ಅನ್ವಯಿಸುವುದು ಮತ್ತು ಕ್ಷೇತ್ರ ಮಟ್ಟದ ಸ್ಥಿತಿಗತಿ ಅರಿಯಲು ಪ್ರಯೋಗ ಏರ್ಪಡಿಸಲಾಗಿತ್ತು. ದಲಿತರ ನಿರ್ದಿಷ್ಟವಾದ ಅಂಶಗಳ ಮತ್ತು ದಲಿತರು ಅಭಿವೃದ್ಧಿಯ ಯಾವ ಸ್ತರದಲ್ಲಿ ನಿಂತಿರುವರು ಎಂಬುದನ್ನು ಅರಿಯಲು ದಲಿತ ಅಭಿವೃದ್ಧಿ ಸೂಚ್ಯಂಕ ರಚನೆ ಎಂಬ ಪ್ರತ್ಯೇಕ ಸೂಚ್ಯಂಕದ ಅಗತ್ಯವಿದೆ. ಈ ವಿಷಯವನ್ನು ದಲಿತ ಸಮುದಾಯದ ಮೇಲೆ ಡಿಎಚ್‌ಡಿಆರ್ ಪೈಲೆಟ್ ಅಧ್ಯಯನ ಆಯೋಜಿಸುವುದರ ಮೂಲಕ ವಿಶೇಷ ಗಮನ ನೀಡಲಾಗಿದೆ ಮತ್ತು ಹರಪನಹಳ್ಳಿ ತಾಲೂಕಿನ ಮಡಲಗೇರಿ ಗ್ರಾಮ ಪಂಚಾಯಿತಿಯನ್ನು ಆಯ್ಕೆ ಮಾಡಲಾಗಿದೆ. ಸಿಡಿಡಿಐನಪ್ರಾಥಮಿಕ ಮತ್ತು ದ್ವಿತೀಯ ಹಂತದ ಮಾಹಿತಿಯನ್ನು ವಿಶ್ಲೇಷಿಸಲಾಗಿದ್ದು ಅವುಗಳನ್ನು ಈ ಕೆಳಗೆ ನೀಡಲಾಗಿದೆ.

**ವರದಿಯ ತಿರುಳು:** ಸಮಾಜದಲ್ಲಿ ಈ ಹಿಂದಿನ ಬಹಿಷ್ಕಾರವನ್ನು ಹೋಗಲಾಡಿಸಿ ಸಮಾನತೆ ಮೂಡಿಸಲು ಇನ್ನು ಸಾಧಿಸಬೇಕಾದ ಅಂಶಗಳನ್ನು ಅಧ್ಯಯನ ವರದಿಯು ತಿಳಿಸುತ್ತದೆ. ಪ್ರಗತಿಯ ಸಾಮಾನ್ಯ ಪ್ರಕ್ರಿಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದ ಸಮುದಾಯಗಳು ಜಿಲ್ಲೆಯ ಒಟ್ಟು ಜನಸಂಖ್ಯೆಯ ಶೇ.೩೨ ರಷ್ಟು ಪಾಲು ಹೊಂದಿದ್ದರು ಕೂಡಾ ಜಾತಿ ಶ್ರೇಣಿಯಲ್ಲಿ ಕನಿಷ್ಠ ಸ್ತರದಲ್ಲಿರುವರು. ಈ ಸಮುದಾಯ ಸಾಂಪ್ರದಾಯಿಕವಾಗಿ ಬೇಸಾಯವನ್ನು ಅವಲಂಬಿಸಿದ್ದು, ಕೃಷಿಕರಾಗಿ ಮತ್ತು ಕೃಷಿ ಕಾರ್ಮಿಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಪ್ರತಿ ಕುಟುಂಬದವರು ಅಂದಾಜು ೧.೩೭ ಹೆಕ್ಟೇರ್‌ಗಿಂತ ಕಡಿಮೆ ಪ್ರಮಾಣದಲ್ಲಿ ಹಿಡುವಳಿ ಭೂಮಿಯನ್ನು ಹೊಂದಿದ್ದಾರೆ. ಶೇ. ೫೦ರಷ್ಟು ಹಿಡುವಳಿದಾರರು ೧ ಹೆಕ್ಟೇರ್‌ಗಿಂತ ಕಡಿಮೆ ಪ್ರಮಾಣದ ಭೂಮಿ ಹೊಂದಿದ್ದು, ಹೆಚ್ಚಿನ ಪ್ರಮಾಣದಲ್ಲಿ ಭೂಮಿಯು ಕೃಷಿಗೆ ಯೋಗ್ಯವಾಗಿಲ್ಲ. ಶಿಕ್ಷಣಕ್ಕೆ ಸಂಬಂಧಿಸಿದಂತೆ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಸಮದಾಯದ ಸಾಕ್ಷರತೆ ಪ್ರಮಾಣವು ಪುರುಷರಲ್ಲಿ ಶೇ. ೫೦ ಇದ್ದು, ಮಹಿಳೆಯರಲ್ಲಿ ಶೇ. ೩೨ರಷ್ಟು ಪ್ರಮಾಣ ಹೊಂದಿದೆ. ಸರ್ಕಾರದ ಕಡ್ಡಾಯ ಶಿಕ್ಷಣದ ಯೋಜನೆಯಿಂದ ಸುಧಾರಣೆಯಲ್ಲಿ ವಿಳಂಬವಾಗಿದ್ದು, ಜಿಇಆರ್ ಮತ್ತು ಎನ್‌ಇಆರ್ ದಾಖಲಾತಿ ಪ್ರಮಾಣವು ಉಳಿದ ಸಮುದಾಯಗಳಿಗೆ ಹೋಲಿಸಿದರೆ ಸಮಪ್ರಮಾಣದಲ್ಲಿದೆ. ಉಳಿದ ಸಮುದಾಯಗಳ ಪ್ರಕರಣದಲ್ಲಿ ದಾಖಲಾತಿ ಪ್ರಮಾಣ ದರವು ಕಳಪೆಯಾಗಿದ್ದು ಶಾಲೆಯನ್ನು ಮಧ್ಯದಲ್ಲಿ ತೊರೆದ ಅನುಪಾತವು ಶೇ. ೪ರಷ್ಟು ಅಧಿಕವಾಗಿದೆ. ಶಾಲೆ ಪೂರ್ಣಗೊಳಿಸಿದ ದರವು ಕೂಡ ಎಸ್‌ಸಿ ಮತ್ತು ಎಸ್ಟಿ ಸಮುದಾಯದಲ್ಲಿ ಕಳಪೆಯಾಗಿದ್ದು, ಕೇವಲ ಶೇ. ೮೩ರಷ್ಟು ಇದೆ.

ಜಿಲ್ಲೆಯಲ್ಲಿ ಶಾಲೆಯಿಂದ ಹೊರಗುಳಿದ ಮಕ್ಕಳ ಒಟ್ಟು ಸಂಖ್ಯೆಯಲ್ಲಿ ಶೇ. ೪೮ರಷ್ಟು ಪ್ರಮಾಣ ಎಸ್‌ಸಿ ಮತ್ತು ಎಸ್ಟಿ ಸಮುದಾಯದ ಗಂಭೀರ ಸಮಸ್ಯೆಯಾಗಿದ್ದು, ಅವರನ್ನು ಶಿಕ್ಷಿತರನ್ನಾಗಿ ಮಾಡಿ ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ಉದ್ಯೋಗ ಅವಕಾಶಗಳನ್ನು ಪಡೆಯುವಂತೆ ಮಾಡಬೇಕು. ಶಿಕ್ಷಣದ ಕೊರತೆಯಿಂದ ಅವರು ಮತ್ತೆ ಮನೆಗೆಲಸ ಕೆಲಸಗಳಲ್ಲಿ ತೊಡಗುವ ಇನ್ನಿತರ ಸಾಧ್ಯತೆಯಿದೆ.

ಜಿಲ್ಲೆಯ ಮಕ್ಕಳಿಗಾಗಿ ವಿಶೇಷ ಸೌಲಭ್ಯ (ಸಿಡಬ್ಲೂಎಸ್‌ಎನ್) ಯೋಜನೆಯಲ್ಲಿ ಈ ದುರ್ಬಲ ಸಮುದಾಯದ ಮಕ್ಕಳು ಶೇ. ೩೮ರಷ್ಟು ಬಹುಪಾಲ ಹೊಂದಿದ್ದು, ಸಮುದಾಯದ ಅಭಿವೃದ್ಧಿಯಲ್ಲಿ ಈ ಅಂಶವು ಪ್ರಮುಖ ಪಾತ್ರವಹಿಸುತ್ತವೆ. ಎಸ್‌ಸಿ/ಎಸ್ಟಿ ಸಮುದಾಯದ ಬಾಲಕಿಯರಿಗಾಗಿರುವ ಎನ್‌ಪಿಜಿಇಎಲ್ ಮತ್ತು ಕೆಜಿಬಿವಿ ಯೋಜನೆಗಳ ಸದುಪಯೋಗ ಪಡೆಯುವುದರ ಮೂಲಕ ಬಾಲಕಿಯರ ಸಾಕ್ಷರತೆ ಪ್ರಮಾಣ ವೃದ್ಧಿಸುತ್ತಿದೆ. ಜನನಿ ಸುರಕ್ಷಾ ಮತ್ತು ಮಡಿಲು ಯೋಜನೆಯ ಸದುಪಯೋಗ ಪಡೆಯುವ ಪ್ರಮಾಣದಲ್ಲಿ ಕ್ರಮೇಣ ವೃದ್ಧಿಸುತ್ತಿದ್ದು, ಸಮಾಜದ ಈ ಹಿಂದುಳಿದ ಸಮುದಾಯಗಳ ಮಹಿಳೆಯರ ಶೇ. ೭೦ರಷ್ಟು ಹೆರಿಗೆಗಳು ಈ ಯೋಜನೆಯ ಫಲಾನುಭವ ಪಡೆದಿವೆ. ಇದರ ಪರಿಣಾಮ ಶಿಶು ಮತ್ತು ತಾಯಿ ಮರಣ ಪ್ರಮಾಣದಲ್ಲಿ ಗಮನಾರ್ಹ ಕುಸಿತವನ್ನು ಕಾಣಬಹುದಾಗಿದೆ. ಸಮಾಜದ ಎಲ್ಲ ಹಿಂದುಳಿದ ಜಾತಿಗಳ ಮಕ್ಕಳ ಪೌಷ್ಟಿಕತೆಯ ಕೊರತೆ ಮತ್ತು ಕಡಿಮೆ ತೂಕ ಹೊಂದಿದ ಮಕ್ಕಳ ಸಮಸ್ಯೆಯು ಸಾಮಾನ್ಯವಾಗಿದೆ

ಈ ಸಮುದಾಯಗಳ ಸಬಲೀಕರಣ ಮತ್ತು ಸೌಲಭ್ಯ ಲಭ್ಯತೆಯಲ್ಲಿ ಹಿಂದೆ ಬಿದ್ದಿದ್ದು, ಆಡಳಿತದ ಪಾತ್ರವಾಗಿ ರಾಜಕೀಯವಾಗಿ ಸಕ್ರಿಯವಾಗುವುದರ ಮೂಲಕ ಪಿಆರ್‌ಐ ಮತ್ತು ಯುಎಲ್‌ಬಿಗಳಲ್ಲಿ ಶಾಸನಬದ್ಧ ಅವಕಾಶ ಹೊಂದಿದ್ದಾರೆ. ಆದ್ದರಿಂದ ಸರ್ಕಾರದ ಯೋಜನೆಗಳ ಹಸ್ತಕ್ಷೇಪದಿಂದ ಈ ಸಮುದಾಯಗಳ ಆರ್ಥಿಕ ಪ್ರಗತಿ ಹೊಂದಲು ಸಾಧ್ಯ. ಈ ಸಮುದಾಯದ ಜನರು ಸ್ವಸಬಲೀಕರಣಕ್ಕಾಗಿ ಅದರಲ್ಲೂ ವಿಶೇಷವಾಗಿ ಮಹಿಳೆಯರು ಎಸ್‌ಎಚ್‌ಜಿ ಚಳುವಳಿಯಲ್ಲಿ ಭಾಗವಹಿಸುವುದು ಅವಶ್ಯವಾಗಿದೆ. ಈ ಚಳುವಳಿಯು ಸಮುದಾಯಗಳ ಮಧ್ಯದ ಅಂತರವನ್ನು ಕಡಿತಗೊಳಿಸುವುದು ಮತ್ತು ಸಮಾಜದ ವಾಸ್ತವವಾದ ಸಾಮಾಜಿಕ ಬಹಿಷ್ಕಾರವನ್ನು ಸಂಪೂರ್ಣ ನಾಶ ಮಾಡಬಹುದು. ಎಸ್‌ಎಚ್‌ಜಿ ಮೂಲಕ ಉತ್ತಮ ಶಿಕ್ಷಣ, ಆರೋಗ್ಯ ಮತ್ತು ಸ್ವಸಬಲೀಕರಣ ಹೊಂದುವುದರ ಮೂಲಕ ಅವರ ಅಭಿವೃದ್ಧಿ ದಾರಿಯನ್ನು ಸರಿಗೊಳಿಸುವುದು ಮತ್ತು ಅವರನ್ನು ಸಮಾಜದ ಮುಖ್ಯವಾಹಿನಿಯ ಭಾಗವಾಗಿಸಬೇಕು

**೫.೩.೫ ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆಗಳ ಸಿ.ಡಿ.ಡಿ.ಐ ತುಲನಾತ್ಮಕ ಅಧ್ಯಯನ**

ಸಮಾಜ ವಿಜ್ಞಾನ ಸಂಶೋಧನೆಗಳಲ್ಲಿ ಮತ್ತೊಂದು ಪ್ರಮುಖ ಸಂಶೋಧನಾ ವಿಧಾನವೆಂದರೆ ಅವಲೋಕನ. ಪ್ರಸ್ತುತ ಈ ಸಂಶೋಧನಾ ಅಧ್ಯಯನದಲ್ಲಿ ಆನುಷಂಗಿಕ ಮೂಲಗಳನ್ನು ಹೆಚ್ಚು ಬಳಸಲಾಗಿದೆಯಾದರೂ, ಒಂದು ಸಂಶೋಧನೆಯು ವಾಸ್ತವ ಸಂಗತಿಗಳನ್ನು ಹೇಳಬೇಕಾದರೆ ಕಾರ್ಯಕ್ಷೇತ್ರ ಮತ್ತು ಅವಲೋಕನಗಳನ್ನು ನಡೆಸುವುದು ಮುಖ್ಯ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ

ಬಳಸಲಾಗಿರುವ ವರದಿಗಳ ತಥ್ಯ ಮತ್ತು ಅಂಕಿ-ಅಂಶಗಳು ಎಷ್ಟರಮಟಿಗೆ ಸತ್ಯ ಎಂಬ ಸಂಗತಿಗಳನ್ನು ತಿಳಿಯಲು ಅಧ್ಯಯನಪೂರ್ವದಲ್ಲಿ ಚಿತ್ರದುರ್ಗ-ದಾವಣಗೆರೆ ಜಿಲ್ಲೆಗಳಲ್ಲಿ ಬರುವ ನಗರ ಮತ್ತು ಗ್ರಾಮಗಳನ್ನು ವೀಕ್ಷಣೆ ನಡೆಸಿ ಅವಲೋಕನ ನಡೆಸಲಾಗಿದೆ. ಸಾಂಸ್ಥಿಕ ಸೇರ್ಪಡೆ, ಸಾಮಾಜಿಕ ಸೇರ್ಪಡೆ, ಸಾಮಾಜಿಕ ಪರಿಗ್ರಹಣೆ ಇನ್ನು ಮುಂತಾದ ಸಿ.ಡಿ.ಡಿ.ಐ ಸೂಚಿಗಳ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ಸದಾ ಬರಗಾಲದ ಪ್ರದೇಶವಾದ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಹಿರೇಹಳ್ಳಿ, ಬಮ್ಮೊಗೊಂಡನಕೆರೆ, ಮೊಗಲಹಳ್ಳಿ, ಕೊಂಡ್ಲಹಳ್ಳಿ, ಕೋನಸಾಗರ, ಗೌರಸಮುದ್ರ, ಅಶೋಕ ಸಿದ್ಧಾಪುರ, ಕುಮುತಿ, ಹಾನಗಲ್ಲು, ಸಿದ್ಧಯ್ಯನಕೋಟೆ, ತುಮಕೂರ್ಲ ಹಳ್ಳಿ, ಗಟ್ಟಭರ್ತಿ, ಬಂಜೆಗೆರೆ, ಚಿಕ್ಕಹಳ್ಳಿ ಈ ಭಾಗಗಳಲ್ಲಿ ಅತಿ ಹೆಚ್ಚು ಪ.ವರ್ಗ ಮತ್ತು ಪಂ.(ದಲಿತರು) ಎರಡು ಸಮುದಾಯಗಳ ಜನಸಂಖ್ಯೆ ಹೆಚ್ಚಿದೆ. ಮಳೆಯಾಶ್ರಿತ ಕೃಷಿ ಜೀವನ ಅವರದು. ಜೀವನ ಮಟ್ಟ, ಆರೋಗ್ಯ, ಶಿಕ್ಷಣ, ಕುಡಿಯುವ ನೀರಿನ ಕೊರತೆ ಇನ್ನು ಹಲವಾರು ಕೊರತೆಗಳ ಛಾಯೆ ಇನ್ನೂ ಜೀವಂತವಾಗಿದೆ. ಸಂವಿಧಾನದ ಕಾರಣದಿಂದ ಎರಡನೇ ತಲೆಮಾರಿನ ಮಾನವ ಸಮುದಾಯ ಅಕ್ಷರ ನೆಡೆಗಿಗೆ ದಾರಿಯಾಗುತ್ತಿದೆ. ಈ ಕಾರಣದಿಂದ ಅವಶ್ಯಕತೆ ಅನ್ವೇಷಣೆ ಗುಟ್ಟು ಅನ್ನುವಂತೆ ಫಲ ನೀಡುವ ಅವಕಾಶಗಳು ಸಂವಿಧಾನದತ್ತವಾಗಿ ಲಭಿಸಿತ್ತಿವೆ. ಅಂದರೆ ಏಳು ದಶಕಗಳ ದಿನಮಾನದಲ್ಲಿ ಸುಧಾರಣೆಯ ಪರ್ವ ಹೀಗ ಆರಂಭಗೊಂಡಿದೆ ಅದರಲ್ಲಿಯೂ ದಲಿತ ಮಾನವ ಅಭಿವೃದ್ಧಿ ಕಿರಣಗಳು ಪ್ರತಿಫಲಗೊಳ್ಳುತ್ತಿವೆ. ಬಹುಶಃ ಚಿತ್ರದುರ್ಗ ಜಿಲ್ಲೆ ಬಹುತೇಕ ತಾಲ್ಲೂಕುಗಳ ಕಥೆಯೇ ಹೀಗೆ ನದಿ-ಕಾಲುವೆಗಳ ಸೌಕರ್ಯ ಇಲ್ಲದೆ ಸದಾ ಮುಗಿಲು ನೋಡುವ ರೈತ ಬದುಕಿನ ಕಂಗಾಲು ಹೇಳತೀರದು. ಮೊಳಕಾಲ್ಮೂರು ತಾಲ್ಲೂಕು ಸದಾ ಬಡತನ ಹಸಿವು, ಅನಕ್ಷರತೆ, ಅಜ್ಞಾನ, ಮೂಢನಂಬಿಕೆ ಪರಿದಿಯಲ್ಲಿಯೇ ಇದೆ. ಆದಕಾರಣ ದಲಿತ ಮಾನವ ಅಭಿವೃದ್ಧಿ ಸಂದರ್ಭದಲ್ಲಿ ಚಿತ್ರದುರ್ಗದ ಬಹುತೇಕ ತಾಲ್ಲೂಕುಗಳು ಮತ್ತು ದಾವಣಗೆರೆ ಜಿಲ್ಲೆಯ ಜಗಳೂರು ತಾಲೂಕಿನ ಬಹುತೇಕ ಗ್ರಾಮಗಳಲ್ಲಿ ಸಾಮಾಜಿಕ-ಆರ್ಥಿಕ-ಸಾಂಸ್ಕೃತಿಕವಾಗಿ ಯಾವುದೇ ಭಿನ್ನತೆ ಕಂಡು ಬರುವುದಿಲ್ಲ. ದಾವಣಗೆರೆ ಜಿಲ್ಲೆಯ ಜಗಳೂರು ತಾಲ್ಲೂಕಿನ ಬಿದರಕೆರೆ, ನಿಬ್ಗೂರು, ಕಟ್ಟಿಗೆಹಳ್ಳಿ, ಅರಿಸಿನಗುಂಡಿ, ತೋರಣಘಟ್ಟೆ, ನಿಂಗನಹಳ್ಳಿ, ಜಮಾಪುರ, ಹೊನ್ನಮರಡಿ, ದೋಣ್ಣೆಹಳ್ಳಿ, ಕಲ್ಲೇದೇವಪುರ, ಗೌರಮನಹಳ್ಳಿ, ಸಂಗೇನಹಳ್ಳಿ ಇವೆಲ್ಲವು ದಾವಣಗೆರೆ ಜಿಲ್ಲೆಯ ಜಗಳೂರು ತಾಲ್ಲೂಕಿನ ಮತ್ತು ಚಿತ್ರದುರ್ಗ ಜಿಲ್ಲೆಯ ಗಡಿ ಅಂಚಿನ ಗ್ರಾಮಗಳಾಗಿವೆ. ಈ ಗ್ರಾಮಗಳಲ್ಲಿ ದಲಿತರ ಮತ್ತು ಹಿಂದುಳಿದ ಜನರು ವಾಸವಾಗಿದ್ದು ಶಿಕ್ಷಣ, ಸಾರಿಗೆ-ಸಂಪರ್ಕ, ವ್ಯಾಪಾರ ಅಷ್ಟಕಷ್ಟೆ ದೊಣ್ಣೇಹಳ್ಳಿ ಮತ್ತು ಕಲ್ಲೇದೇವಪುರ ಹೊರತುಪಡಿಸಿದರೆ ಉಳಿದ ಎಲ್ಲವೂ ಕುಗ್ರಾಮಗಳಾಗಿವೆ. ಸಾಕಷ್ಟು ಅನಾನುಕೂಲಗಳ ನಡುವೆ ತೋರಣಘಟ್ಟೆ, ಗೌರಮ್ಮನ ಹಳ್ಳಿ,ಅರಿಸಿನ ಗುಂಡಿಗಳಲ್ಲಿ ಶಿಕ್ಷಣ ಪಡೆದ ಭೂಮಿ ಇಲ್ಲದ ಜನವರ್ಗದವರಿದ್ದಾರೆ. ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಗ್ರಾಮಗಳಲ್ಲಿ ಮತ್ತು ದಾವಣಗೆರೆ ಜಿಲ್ಲೆಯ ಜಗಳೂರು ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ದಲಿತರ (ಪ.ಜಾತಿ (ಸ್ಪರ್ಶ ಮತ್ತು ಅಸ್ಪೃಶ್ಯ) ಮತ್ತು ಪ.ಪಂಗಡ) ಪರಿಸ್ಥಿತಿಯನ್ನು ಅವಲೋಕಿಸಲಾಗಿದೆ.

**ಕೋಷ್ಟಕ ೫.೪. ದಾವಣಗೆರೆ-ಚಿತ್ರದುರ್ಗ ಜಿಲ್ಲೆಗಳ ನಡುವಿನ ಸಿ.ಡಿ.ಡಿ.ಐ.ನ ಸೂಚ್ಯಂಕ ಅಂಶಗಳು**

| ಸೂಚ್ಯಂಕ | ದಾವಣಗೆರೆ ಜಿಲ್ಲೆ ಸಿ.ಡಿ.ಡಿ.ಐ ಮೌಲ್ಯ | ಚಿತ್ರದುರ್ಗ ಜಿಲ್ಲೆ ಸಿ.ಡಿ.ಡಿ.ಐ ಮೌಲ್ಯ |
|---|---|---|
| ಸಾಂಸ್ಥಿಕ ಒಳಗೊಳ್ಳುವಿಕೆ/ಸೇರ್ಪಡೆ | ೦.೮೩ | ೦.೨೭ |
| ಸಾಮಾಜಿಕ ಒಳಗೊಳ್ಳುವಿಕೆ/ಸೇರ್ಪಡೆ | ೦.೨ | ೦.೩೦ |
| ತಾರತಮ್ಯದ ಗ್ರಹಿಕೆ ಇಲ್ಲದಿರುವುದು | ೦.೮ | ೦.೩೬ |
| ತಾರತಮ್ಯದ ವಿರುದ್ಧ ಹೋರಾಟ | ೦.೬ | ೦.೨೭ |
| ಘರ್ಷಣೆಯ ಕ್ರಾಂತಿ | ೦.೧ | ೦.೨೮ |
| ಜೀವನ ಶೈಲಿಯ ಸ್ತರ | ೦.೩೩ | ೦.೨೪ |
| ಸ್ವಾತಂತ್ರ್ಯದ ಅನುಭವ | ೦.೬ | ೦.೨೫ |
| ದಲಿತ ಅಭಿವೃದ್ಧಿಯಲ್ಲಿ ಲಿಂಗ ಆಯಾಮ | ೦.೭ | ೦.೩೬ |
| ಮೂಲ ಸೌಕರ್ಯಗಳ ಲಭ್ಯತೆ | ೦.೧೭ | ೦.೪೦ |
| ಶಿಕ್ಷಣದ ಲಭ್ಯತೆ | ೦.೫೦ | ೦.೩೫ |
| ಸಿಡಿಡಿಐ ಒಟ್ಟು | ೪.೮೩/೧೦=೦.೪೮೩ | ೩.೦೮/೧೦=೦.೩೦ |
| ದಲಿತ ಅಭಿವೃದ್ಧಿ ವಂಚಿತ ಸೂಚ್ಯಂಕ | ೦.೫೧೭ | ೦.೭೦ |

**ಮೂಲ:** ಕರ್ನಾಟಕ ಸರ್ಕಾರ ಜಿಲ್ಲಾ ಮಾನವ ಅಭಿವೃದ್ಧಿ ವರದಿ-೨೦೧೪

ಮಾನವ ಅಭಿವೃದ್ಧಿಯಲ್ಲಿ ದಾವಣಗೆರೆ ೦.೫೨೮ರಷ್ಟಿದ್ದು, ಚಿತ್ರದುರ್ಗ ೦.೩೮೬ಕ್ಕೆ ಕಡಿಮೆ ಇದೆ. ಭೌತಿಕವಾಗಿ ಮೂಲಭೂತ ಸೌಕರ್ಯ ಮುಂತಾದವುಗಳಲ್ಲಿ ದಾವಣಗೆರೆ ಪ್ರದೇಶ ಮುಂದುವರೆದಿದೆ. ಚಿತ್ರದುರ್ಗ ಬಹಳ ಹಿಂದೆ ಇರುವುದು ವರದಿಗಳಲ್ಲಿ ಗೋಚರವಾಗುತ್ತದೆ. ಕರ್ನಾಟಕ ಜಿಲ್ಲೆ ಮಾನವ ಅಭಿವೃದ್ಧಿ ರ್‍ಯಾಂಕ್‌ಗಳಲ್ಲಿ ದಾವಣಗೆರೆ ೧೪ನೇ ಸ್ಥಾನದಲ್ಲಿ, ಚಿತ್ರದುರ್ಗ ೨೩ನೇ ಸ್ಥಾನದಲ್ಲಿರುವುದು ಕಂಡು ಬರುತ್ತದೆ. ಒಟ್ಟಾರೆಯಾಗಿ ದಾವಣಗೆರೆ ಪ್ರದೇಶವು ಚಿತ್ರದುರ್ಗ ಪ್ರದೇಶಕ್ಕಿಂತ ಅಭಿವೃದ್ಧಿಯಲ್ಲಿ ಮುಂದೆ ಇದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿ ಜನರು ಶೇ. ೨೩.೪೫ರಷ್ಟಿದ್ದು ಪರಿಶಿಷ್ಟ ಪಂಗಡದ ಶೇ. ೧೮.೨೩ರಷ್ಟಿದೆ. ಜನಸಂಖ್ಯೆ ಮತ್ತು ಇತರರು ಶೇ. ೫೮.೩೨ ಇದ್ದಾರೆ. (೨೦೧೧ರ ಜನಗಣತಿ) ದಾವಣಗೆರೆ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆಯು ಒಟ್ಟು ಜನಸಂಖ್ಯೆಯಲ್ಲಿ ಶೇ. ೨೦.೧೮ರಷ್ಟಿದ್ದು ಪರಿಶಿಷ್ಟ ಪಂಗಡ ಶೇ. ೧೧.೯೮ರಷ್ಟಿದೆ ಮತ್ತು ಇತರರು ಶೇ. ೬೭.೮೪ ಇದ್ದಾರೆ.(೨೦೧೧ರ ಜನಗಣತಿ)

ಪ್ರಸ್ತುತ ಇಲ್ಲಿ ಚರ್ಚಿಸುತ್ತಿರುವ ವಿಷಯವೇನೆಂದರೆ ದಲಿತ ಮಾನವ ಅಭಿವೃದ್ಧಿ ವ್ಯತ್ಯಾಸಗಳನ್ನು ಗುರುತಿಸುವುದು. ಚಿತ್ರದುರ್ಗ ಜಿಲ್ಲೆಯಲ್ಲಿ ನಾಯಕ, ಮಾದಿಗ, ಆದಿಕರ್ನಾಟಕ, ಹೊಲೆಯ, ಭೋವಿ, ಲಂಬಾಣಿ, ಕೊರಚ ಸಮುದಾಯದಲ್ಲಿ ಹೆಚ್ಚು ಅಸ್ಪೃಶ್ಯ ದಲಿತರು ಉಳಿದಂತೆ

ಸ್ಪೃಶ್ಯದಲಿತರುಗಳು ಇರುವುದು ಗೋಚರವಾಗುತ್ತದೆ. ಆದರೆ ದಾವಣಗೆರೆ ಜಿಲ್ಲೆಯಲ್ಲಿ ಸ್ಪೃಶ್ಯದಲಿತರೇ ಹೆಚ್ಚಿದ್ದು (ಲಂಬಾಣಿ, ಬೋವಿ) ಅಷ್ಟೇ ಪ್ರಮಾಣದ ಅಸ್ಪೃಶ್ಯ ಮಾದಿಗರು ಇರುವಂತಹ ಸಂದರ್ಭದಲ್ಲಿ ಲಂಬಾಣಿ, ಬೋವಿಗಳಲ್ಲಿ ಭೂಮಿ, ಶಿಕ್ಷಣ ಇತರೆ ಸಂವಿಧಾನ್ಮಕ ಸವಲತ್ತುಗಳು ಹೆಚ್ಚಾಗಿವೆ. ಅದೇ ಸ್ಪೃಶ್ಯ ಮಾದಿಗರಲ್ಲಿ ಈ ಅಂಶಗಳು ಕಡಿಮೆ ಇವೆ.

ದಲಿತ ಸಂಯುಕ್ತ ಅಭಿವೃದ್ಧಿ ಸೂಚಿಯಲ್ಲಿ ದೊಡ್ಡ ಅಂತರ ಗೋಚರವಾಗುತ್ತದೆ. ಸಂಶೋಧನಾ ಅವಲೋಕನ ಸಂದರ್ಭದಲ್ಲಿ ನಾವು ಅವಲೋಕಿಸಿದ ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆಗಳ ಕೆಲವು ಗ್ರಾಮಗಳನ್ನು ವೀಕ್ಷಿಸಿದಾಗ ಇಂದಿಗೂ ಹೆಚ್ಚು ದಲಿತರು ಸಾಮಾಜಿಕವಾಗಿ ಹೊರಗೆ ಉಳಿದಿದ್ದಾರೆ. ದಾವಣಗೆರೆ ಜಿಲ್ಲೆಯ ಜಗಳೂರು ತಾಲ್ಲೂಕಿನ ತೋರಣಗಟ್ಟೆ, ಅಣಬೂರು, ಕೆಚ್ಚೆನಹಳ್ಳಿ ಗ್ರಾಮಗಳಲ್ಲಿ ಇಂದಿಗೂ ಕೂಡ ಗೊಲ್ಲರಹಟ್ಟಿಗಳಿಗೆ ಮಾದಿಗರ ಪ್ರವೇಶವಿಲ್ಲ, ಹೋಟೆಲ್‌ಗಳಲ್ಲಿ ಪ್ರತ್ಯೇಕತೆ–ತಾರತಮ್ಯ, ಕ್ಷೌರಿಕರು ಕ್ಷೌರ ಮಾಡಲು ನಿರಾಕರಣೆ. ಶಿಕ್ಷಣ ನಿರಾಕರಣೆ ಇತ್ಯಾದಿ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆ.

ಇದೇ ಪರಿಸ್ಥಿತಿ ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲೂಕಿನಲ್ಲಿ ಕೊಳಹಾಳ್, ಹಂಪನೂರು, ನಂದಿಹಳ್ಳಿಗಳಲ್ಲಿದೆ. ಅಲ್ಲದೆ ಸ್ಪೃಶ್ಯ ದಲಿತರೇ ಅಸ್ಪೃಶ್ಯ ದಲಿತರನ್ನೇ ದೂರ ಇಡುತ್ತಿದ್ದಾರೆ. ದಾವಣಗೆರೆಯ ಸಿ.ಡಿ.ಡಿ.ಐ.ಯಲ್ಲಿ ತಾರತಮ್ಯದ ಪರಿಗ್ರಹಣೆ, ಸ್ವಾತಂತ್ರ್ಯದ ಪರಿಗ್ರಹಣೆ, ಲಭ್ಯವಾಗಿರುವ ತೂಕಾಂಕದ ಫಲಿತಗಳು ನಂಬಲಾರ್ಹವಾಗಿರುವುದಿಲ್ಲ. ಚಿತ್ರದುರ್ಗ ಜಿಲ್ಲಾ ದಲಿತ ಅಭಿವೃದ್ಧಿ ವಂಚಿತ ಸೂಚ್ಯಂಕ ೦.೭೦ ಇದ್ದರೆ, ದಾವಣಗೆರೆ ಜಿಲ್ಲಾ ದಲಿತ ಅಭಿವೃದ್ಧಿ ವಂಚಿತ ಸೂಚ್ಯಂಕ ಅಂತರ ೦.೫೧೭; ಅಷ್ಟೊಂದು ಹತ್ತಿರವಾಗಿರದೆ ಇರುವುದು ಅವಲೋಕನದಿಂದ ಗೋಚರವಾಗುತ್ತದೆ. ಮಾನವ ಅಭಿವೃದ್ಧಿಯಂತಹ ವರದಿಗಳನ್ನು ಸಿದ್ಧಪಡಿಸುವಾಗ ಸ್ಪೃಶ್ಯ ಮತ್ತು ಅಸ್ಪೃಶ್ಯ ದಲಿತರುಗಳ ಬಗ್ಗೆ ಗಮನದಲ್ಲಿ ಇಟ್ಟುಕೊಳ್ಳುವುದು ಅವಶ್ಯಕ.

**೫.೪. ಜಿಲ್ಲಾ ಸಂಯುಕ್ತ ದಲಿತ ಮಾನವ ಅಭಿವೃದ್ಧಿ ಸೂಚಿ(ಸಿ.ಡಿ.ಡಿ.ಐ)**

೨೦೧೪ರಲ್ಲಿ ಕರ್ನಾಟಕ ಸರ್ಕಾರ ಮತ್ತು ಪ್ರತಿ ಜಿಲ್ಲೆಯ ಜಿಲ್ಲಾ ಪಂಚಾಯತ್ ಹಾಗೂ ಲೀಡ್ ಏಜೆನ್ಸಿಗಳು ಜಿಲ್ಲಾ ಮಾನವ ಅಭಿವೃದ್ಧಿ ವರದಿಯಲ್ಲಿ ದಲಿತ ಮಾನವ ಅಭಿವೃದ್ಧಿ ಕೂಡ ಸೇರಿದೆ. ವರದಿಯಲ್ಲಿ ಇದನ್ನು ಸಮಗ್ರ/ಸಂಯುಕ್ತ ದಲಿತ ಮಾನವ ಅಭಿವೃದ್ಧಿ ಸೂಚಿಯೆಂದು ಹೆಸರಿಸಲಾಗಿದೆ.

ಈ ಸೂಚ್ಯಂಕವನ್ನು ಮಾನವ ಅಭಿವೃದ್ಧಿ ವರದಿಯ ದಲಿತ ಬುಡಕಟ್ಟುಗಳ ಅಧ್ಯಾಯದಲ್ಲಿ ನೋಡಬಹುದು. ಜಿಲ್ಲಾ ಮಾನವ ಅಭಿವೃದ್ಧಿ ವರದಿಯ ಕೊನೆ ಭಾಗದಲ್ಲಿ ಸೂಚ್ಯಂಕಗಳನ್ನು ಸಿದ್ಧಪಡಿಸುವ ವಿಧಾನಗಳನ್ನು ನೀಡಿದ್ದಾರೆ. ಕೆಲವರು ವರದಿಯ ಕೊನೆಯಲ್ಲಿ ಇತರ ಸೂಚ್ಯಂಕಗಳ ವಿಧಾನಗಳೊಂದಿಗೆ ದಲಿತ ಅಭಿವೃದ್ಧಿ ಸೂಚ್ಯಂಕವನ್ನು ಕಟ್ಟುವ ವಿಧಾನವನ್ನು ನೀಡಿದ್ದಾರೆ. ಕರ್ನಾಟಕದ ಎಲ್ಲ ತಾಲೂಕುಗಳ ಒಂದೊಂದು ಪಂಚಾಯಿತಿಯಲ್ಲಿ ದಲಿತರ ಅಧ್ಯಯನ ಮಾಡಿ

ಈ ಸೂಚ್ಯಂಕವನ್ನು ಸಿದ್ಧಪಡಿಸುವ ಆಲೋಚನೆ ಇತ್ತು. ಆದರೆ ಸಂಪನ್ಮೂಲ ಹಾಗೂ ಸಮಯದ ಕೊರತೆಯ ಕಾರಣಗಳನ್ನು ಮುಂದಿಟ್ಟು ಪ್ರತಿ ಜಿಲ್ಲೆಯಲ್ಲಿ ಒಂದು ಪಂಚಾಯಿತಿಯಲ್ಲಿರುವ ದಲಿತರನ್ನು ಅಧ್ಯಯನ ಮಾಡಿ ಈ ಸೂಚ್ಯಂಕವನ್ನು ೨೦೧೪ರಲ್ಲಿ ಸಿದ್ಧಪಡಿಸಲಾಗಿದೆ. ಅದರಿಂದ ಕೆಲವು ಅಂಕಿ-ಅಂಶಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಈ ಕೆಳಕಂಡತೆ ಬಳಸಿಕೊಳ್ಳಲಾಗಿದೆ.

**ಕೋಷ್ಟಕ ೫.೫. ಬೆಂಗಳೂರು ವಿಭಾಗದ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕಗಳ ಪಟ್ಟಿ**

| ಜಿಲ್ಲೆಗಳು | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ದ.ಅ | ದ.ದು |
|---|---|---|---|---|---|---|---|---|---|---|---|---|
| ಬೆಂಗಳೂರು ನಗರ | ೦.೫ | ೧ | ೦.೬ | ೦.೧ | ೦.೮ | ೧ | ೦.೫ | ೦.೭ | ೦.೨ | ೦.೫ | ೦.೫ | ೦.೫ |
| ಬೆಂಗಳೂರು ಗ್ರಾಮಾಂತರ | ೦.೮ | ೧ | ೦.೯ | ೦ | ೧ | ೦.೮ | ೦.೬ | ೦.೫ | ೦.೮ | ೧ | ೦.೭ | ೦.೩ |
| ಚಿಕ್ಕಬಳ್ಳಾಪುರ | ೦.೨ | ೦ | ೦.೨ | ೦ | ೦.೨ | ೦.೧ | ೦ | ೦.೩ | ೦.೩ | ೦.೩ | ೦.೨ | ೦.೮ |
| ಚಿತ್ರದುರ್ಗ | ೦.೩ | ೦ | ೦.೪ | ೦.೩ | ೦.೩ | ೦.೨ | ೦.೩ | ೦.೪ | ೦.೪ | ೦.೪ | ೦.೩ | ೦.೭ |
| ದಾವಣಗೆರೆ | ೦.೮ | ೦ | ೦.೮ | ೦.೬ | ೦.೧ | ೦.೩ | ೦.೬ | ೦.೭ | ೦.೨ | ೦.೫ | ೦.೫ | ೦.೫ |
| ಕೋಲಾರ | ೦.೭ | ೧ | ೦.೭ | ೦.೧ | ೦.೪ | ೦.೧ | ೦.೮ | ೦.೪ | ೦.೨ | ೦.೫ | ೦.೪ | ೦.೬ |
| ರಾಮನಗರ | ೦.೩ | ೦ | ೦.೨ | ೦.೨ | ೦ | ೦.೨ | ೦.೨ | ೦ | ೦.೪ | ೦.೩ | ೦.೩ | ೦.೮ |
| ಶಿವಮೊಗ್ಗ | ೦ | ೧ | ೧ | ೦ | ೦ | ೧ | ೦.೨ | ೦.೬ | ೦.೭ | ೦.೩ | ೦.೫ | ೦.೫ |
| ತುಮಕೂರು | ೦.೭ | ೧ | ೧ | ೦ | ೦ | ೧ | ೦.೪ | ೦.೬ | ೦ | ೦.೮ | ೦.೫ | ೦.೫ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)

**ಸೂಚನೆ:** ೧. ಸಾಂಸ್ಥಿಕ ಒಳಗೊಳ್ಳುವಿಕೆ ಸೂಚ್ಯಂಕ ೨. ಸಾಮಾಜಿಕ ಸೇರ್ಪಡೆ ೩. ತಾರತಮ್ಯ ಅನುಭವದ ಸೂಚ್ಯಂಕ ೪. ತಾರತಮ್ಯ ವಿರುದ್ಧ ಪ್ರತಿಭಟನೆ ಸೂಚ್ಯಂಕ ೫. ಸಂಘರ್ಷ ಪರಿಹಾರ ಸೂಚ್ಯಂಕ ೬. ಸ್ವಾತಂತ್ರ್ಯ ಅನುಭವದ ಸೂಚ್ಯಂಕ ೭. ಜೀವನಮಟ್ಟ ಸೂಚ್ಯಂಕ ೮. ದಲಿತ ಅಭಿವೃದ್ಧಿಯ ಲಿಂಗ ಸಂಬಂಧಿ ಸೂಚ್ಯಂಕ ೯. ಮೂಲ ಸೌಲಭ್ಯಗಳ ಲಭ್ಯತೆಯ ಸೂಚ್ಯಂಕ ೧೦. ಶೈಕ್ಷಣಿಕ ಸೌಲಭ್ಯಗಳ ಲಭ್ಯತೆಯ ಸೂಚ್ಯಂಕ. ದ.ಅ- ದಲಿತ ಮಾನವ ಅಭಿವೃದಿ ಸೂಚ್ಯಂಕ. ದ.ದು-ದಲಿತ ದುಸ್ಥಿತಿ ಸೂಚ್ಯಂಕ

**ಕೋಷ್ಟಕ ೫.೬. ಬೆಳಗಾವಿ ವಿಭಾಗದ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕಗಳ ಪಟ್ಟಿ**

| ಜಿಲ್ಲೆಗಳು | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ದ.ಅ | ದ.ದು |
|---|---|---|---|---|---|---|---|---|---|---|---|---|
| ಬಾಗಲಕೋಟೆ | ೦.೪ | ೦.೧ | ೦.೫ | ೦ | ೦.೭ | ೦.೩ | ೦.೩ | ೦.೨ | ೦.೫ | ೦.೩ | ೦.೩ | ೦.೭ |
| ಬೆಳಗಾವಿ | ೦.೩ | ೦.೪ | ೦.೪ | ೦.೪ | ೦.೪ | ೦.೧ | ೦.೮ | ೦.೬ | ೦.೩ | ೦.೭ | ೦.೪ | ೦.೬ |
| ವಿಜಯಪುರ | ೦.೪ | ೦.೨ | ೦.೫ | ೦ | ೦.೫ | ೦.೩ | ೦.೩ | ೦.೨ | ೦.೩ | ೦.೩ | ೦.೩ | ೦.೭ |
| ಧಾರವಾಡ | ೦.೪ | ೦.೫ | ೧ | ೦.೫ | ೦.೭ | ೦.೬ | ೦.೪ | ೦.೩ | ೦.೩ | ೦.೭ | ೦.೫ | ೦.೫ |
| ಗದಗ | ೦.೬ | ೦.೬ | ೦.೫ | ೦.೨ | ೦.೩ | ೦.೨ | ೦.೫ | ೦.೩ | ೦.೩ | ೦.೭ | ೦.೪ | ೦.೬ |
| ಹಾವೇರಿ | ೦.೫ | ೦.೭ | ೦.೪ | ೦.೨ | ೦.೩ | ೦.೬ | ೦.೨ | ೦.೩ | ೦.೮ | ೦.೫ | ೦.೫ | ೦.೬ |
| ಉತ್ತರ ಕನ್ನಡ | ೦.೨ | ೧ | ೧ | ೦ | ೦ | ೦.೪ | ೧ | ೦.೬ | ೦.೮ | ೦.೫ | ೦.೬ | ೦.೫ |

ಮೂಲ: ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)

**ಕೋಷ್ಟಕ ೫.೭. ಮೈಸೂರು ವಿಭಾಗದ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕಗಳ ಪಟ್ಟಿ**

| ಜಿಲ್ಲೆಗಳು | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ದ.ಅ | ದ.ದು |
|---|---|---|---|---|---|---|---|---|---|---|---|---|
| ಮೈಸೂರು | ೦.೫ | ೧ | ೧ | ೧ | ೦ | ೦ | ೧ | ೧ | ೦.೭ | ೧ | ೦.೬ | ೦.೪ |
| ಚಾಮರಾಜನಗರ | ೦.೬ | ೦ | ೧ | ೧ | ೧ | ೧ | ೦ | ೦ | ೦.೧ | ೦.೧ | ೦.೫ | ೦.೫ |
| ಚಿಕ್ಕಮಗಳೂರು | ೦.೪ | ೧ | ೧ | ೦ | ೦ | ೦ | ೧ | ೧ | ೦.೩ | ೧ | ೦.೫ | ೦.೫ |
| ದಕ್ಷಿಣ ಕನ್ನಡ | ೦.೫ | ೧ | ೧ | ೧ | ೧ | ೧ | ೧ | ೧ | ೦.೫ | ೦.೭ | ೦.೮ | ೦.೨ |
| ಹಾಸನ | ೦.೨ | ೦ | ೧ | ೧ | ೧ | ೦ | ೧ | ೧ | ೦.೨ | ೦.೮ | ೦.೪ | ೦.೬ |
| ಮಂಡ್ಯ | ೦.೩ | ೧ | ೧ | ೧ | ೧ | ೧ | ೦ | ೦ | ೦.೧ | ೦.೧ | ೦.೬ | ೦.೪ |
| ಉಡುಪಿ | ೦.೬ | ೧ | ೧ | ೧ | ೧ | ೧ | ೧ | ೧ | ೦.೮ | ೦.೮ | ೦.೮ | ೦.೨ |
| ಕೊಡಗು | ೦.೪ | ೧ | ೧ | ೦ | ೦ | ೦ | ೧ | ೧ | ೦.೫ | ೦.೫ | ೦.೬ | ೦.೪ |

ಮೂಲ: ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)

**ಕೋಷ್ಟಕ ೫.೮. ಕಲಬುರ್ಗಿ(ಗುಲಬರ್ಗಾ) ವಿಭಾಗದ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕಗಳ ಪಟ್ಟಿ**

| ಜಿಲ್ಲೆಗಳು | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ದ.ಅ | ದ.ದು |
|---|---|---|---|---|---|---|---|---|---|---|---|---|
| ಕಲಬುರ್ಗಿ | ೦.೪ | ೦ | ೧ | ೦ | ೦ | ೦ | ೧ | ೦ | ೦.೫ | ೦.೫ | ೦.೫ | ೦.೬ |
| ಬಳ್ಳಾರಿ | ೦.೫ | ೦ | ೧ | ೦ | ೦ | ೦ | ೦ | ೧ | ೦.೩ | ೧ | ೦.೪ | ೦.೬ |
| ಕೊಪ್ಪಳ | ೦.೬ | ೦ | ೦ | ೦ | ೦ | ೧ | ೧ | ೧ | ೦.೩ | ೦.೩ | ೦.೪ | ೦.೬ |
| ರಾಯಚೂರು | ೦.೩ | ೧ | ೧ | ೦ | ೦ | ೧ | ೦ | ೦ | ೦.೨ | ೦.೩ | ೦.೪ | ೦.೬ |
| ಯಾದಗಿರಿ | ೦.೫ | ೦ | ೧ | ೦ | ೦ | ೧ | ೦ | ೧ | ೦.೮ | ೦.೫ | ೦.೪ | ೦.೬ |
| ಬೀದರ್ | ೦.೩ | ೧ | ೦ | ೦ | ೦ | ೦ | ೦ | ೦ | ೦.೫ | ೦.೪ | ೦.೪ | ೦.೬ |

ಮೂಲ: ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)

## ಕೋಷ್ಟಕ ೫.೯. ಕರ್ನಾಟಕದ ಹೆಚ್.ಡಿ.ಐ.ಮತ್ತು ಸಿ.ಡಿ.ಡಿ.ಐ ನಡುವಿನ ಅಂತರ

| ಕ್ರಮ ಸಂಖ್ಯೆ | ಜಿಲ್ಲೆಗಳು | ಕರ್ನಾಟಕ ಮಾನವ ಅಭಿವೃದ್ಧಿ ಸೂಚ್ಯಂಕ | | ಕರ್ನಾಟಕ ಮಾನವ ಅಭಿವೃದ್ಧಿ ಸೂಚ್ಯಂಕ ಅಂತರ | ಕರ್ನಾಟಕ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ | | ಕರ್ನಾಟಕ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಅಂತರ |
|---|---|---|---|---|---|---|---|
| | | ಮೌಲ್ಯ | ಶ್ರೇಣಿ | | ಮೌಲ್ಯ | ಶ್ರೇಣಿ | |
| ೧ | ಬೆಂಗಳೂರು ನಗರ | ೦.೯ | ೧ | ೦.೦೭೨ | ೦.೫ | ೯ | ೦.೪೭ |
| ೨ | ಬೆಂಗಳೂರು ಗ್ರಾಮಾಂತರ | ೦.೬ | ೭ | ೦.೩೯೭ | ೦.೭ | ೩ | ೦.೩೨ |
| ೩ | ಚಿಕ್ಕಬಳ್ಳಾಪುರ | ೦.೫ | ೧೬ | ೦.೫೧೪ | ೦.೨ | ೩೦ | ೦.೮೪ |
| ೪ | ಚಿತ್ರದುರ್ಗ | ೦.೪ | ೨೩ | ೦.೬೧೪ | ೦.೩ | ೨೫ | ೦.೭ |
| ೫ | ದಾವಣಗೆರೆ | ೦.೫ | ೧೪ | ೦.೪೭೨ | ೦.೫ | ೧೩ | ೦.೫೧ |
| ೬ | ಕೋಲಾರ | ೦.೫ | ೧೧ | ೦.೪೫೭ | ೦.೪ | ೧೮ | ೦.೫೬ |
| ೭ | ರಾಮನಗರ | ೦.೫ | ೧೩ | ೦.೪೬೭ | ೦.೩ | ೨೯ | ೦.೭೮ |
| ೮ | ಶಿವಮೊಗ್ಗ | ೦.೬ | ೮ | ೦.೪೦೪ | ೦.೫ | ೧೪ | ೦.೫೩ |
| ೯ | ತುಮಕೂರು | ೦.೫ | ೧೭ | ೦.೫೨೯ | ೦.೫ | ೧೨ | ೦.೫ |
| ೧೦ | ಬಾಗಲಕೋಟೆ | ೦.೪ | ೨೪ | ೦.೬೧೬ | ೦.೩ | ೨೭ | ೦.೬೭ |
| ೧೧ | ಬೆಳಗಾವಿ | ೦.೪ | ೧೮ | ೦.೫೫೧ | ೦.೪ | ೧೯ | ೦.೫೬ |
| ೧೨ | ವಿಜಯಪುರ | ೦.೩ | ೨೭ | ೦.೬೭ | ೦.೩ | ೨೮ | ೦.೭ |
| ೧೩ | ಧಾರವಾಡ | ೦.೬ | ೬ | ೦.೩೯ | ೦.೫ | ೮ | ೦.೪೭ |
| ೧೪ | ಗದಗ | ೦.೪ | ೨೬ | ೦.೬೫ | ೦.೪ | ೨೦ | ೦.೫೮ |
| ೧೫ | ಹಾವೇರಿ | ೦.೪ | ೨೧ | ೦.೫೯೪ | ೦.೫ | ೧೫ | ೦.೫೫ |
| ೧೬ | ಉತ್ತರ ಕನ್ನಡ | ೦.೬ | ೧೦ | ೦.೪೩೫ | ೦.೬ | ೭ | ೦.೪೫ |
| ೧೭ | ಮೈಸೂರು | ೦.೫ | ೧೨ | ೦.೪೬೭ | ೦.೬ | ೪ | ೦.೩೯ |
| ೧೮ | ಚಾಮರಾಜನಗರ | ೦.೪ | ೨೨ | ೦.೫೯೩ | ೦.೫ | ೧೧ | ೦.೪೯ |
| ೧೯ | ಚಿಕ್ಕಮಗಳೂರು | ೦.೬ | ೫ | ೦.೩೭೩ | ೦.೫ | ೧೦ | ೦.೪೭ |
| ೨೦ | ದಕ್ಷಿಣ ಕನ್ನಡ | ೦.೭ | ೨ | ೦.೩೦೯ | ೦.೮ | ೧ | ೦.೨೨ |
| ೨೧ | ಹಾಸನ | ೦.೬ | ೯ | ೦.೪೨೪ | ೦.೪ | ೧೭ | ೦.೫೬ |
| ೨೨ | ಮಂಡ್ಯ | ೦.೫ | ೧೫ | ೦.೫೦೯ | ೦.೬ | ೬ | ೦.೪೩ |
| ೨೩ | ಉಡುಪಿ | ೦.೭ | ೩ | ೦.೩೨೫ | ೦.೮ | ೨ | ೦.೨೨ |
| ೨೪ | ಕೊಡಗು | ೦.೭ | ೪ | ೦.೩೪೨ | ೦.೬ | ೫ | ೦.೪ |
| ೨೫ | ಕಲಬುರ್ಗಿ | ೦.೪ | ೨೦ | ೦.೫೯೩ | ೦.೫ | ೧೬ | ೦.೫೫ |
| ೨೬ | ಬಳ್ಳಾರಿ | ೦.೪ | ೨೫ | ೦.೬೪೬ | ೦.೪ | ೨೨ | ೦.೬೧ |
| ೨೭ | ಕೊಪ್ಪಳ | ೦.೩ | ೨೮ | ೦.೭೨ | ೦.೪ | ೨೩ | ೦.೬೩ |
| ೨೮ | ರಾಯಚೂರು | ೦.೨ | ೩೦ | ೦.೮೩೫ | ೦.೪ | ೨೬ | ೦.೬೪ |
| ೨೯ | ಯಾದಗಿರಿ | ೦.೨ | ೨೯ | ೦.೮೦೪ | ೦.೪ | ೨೧ | ೦.೬ |
| ೩೦ | ಬೀದರ್ | ೦.೪ | ೧೯ | ೦.೫೭ | ೦.೪ | ೨೪ | ೦.೬೪ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)

**ಸೂಚನೆ:**-ಹೆಚ್.ಡಿ.ಐ-ಮಾನವ ಅಭಿವೃದ್ಧಿ ಸೂಚ್ಯಂಕ, ಸಿ.ಡಿ.ಡಿ.ಐ-ಸಂಯುಕ್ತ ದಲಿತ ಅಭಿವೃದ್ಧಿ ಸೂಚ್ಯಂಕ

## ಸಾಂಸ್ಥಿಕ ಒಳಗೊಳ್ಳುವಿಕೆ ಸೂಚ್ಯಂಕ

ಪಂಚಾಯತ್, ಶಾಲಾ ಉಸ್ತುವಾರಿ ಸಮಿತಿ, ಅರಣ್ಯ ನಿರ್ವಹಣೆ ಸಮಿತಿ, ನೀರಿನ ಸೊಸೈಟಿ, ಹಣಕಾಸು ಸೊಸೈಟಿ, ಆರೋಗ್ಯ ಹಾಗೂ ನೈರ್ಮಲ್ಯ ಸಮಿತಿ ಹೀಗೆ ಹಲವು ಅಭಿವೃದ್ಧಿ ಆಡಳಿತ ಸಮಿತಿಗಳು ಕೆಳವರ್ಗದವರಾದ ದುರ್ಬಲ ವರ್ಗದವರಿಗೂ ಪಾಲ್ಗೊಳ್ಳುವಿಕೆಗೆ ಸೃಷ್ಟಿಯಾಗಿವೆ. ಈ ಸಂಸ್ಥೆಗಳಲ್ಲಿ ದಲಿತರ ಜನಸಂಖ್ಯೆಗೆ ಅನುಗುಣವಾಗಿ ನಿರ್ದಿಷ್ಟ ಸಂಖ್ಯೆಯ ಸ್ಥಾನಗಳನ್ನು ಅವರಿಗೆ ಮೀಸಲಿರಿಸಲಾಗಿದೆ. ಮೀಸಲಿಟ್ಟ ಸ್ಥಾನಗಳನ್ನು ತುಂಬದಿದ್ದರೆ ಕಾನೂನಿಗೆ ವಿರೋಧವಾಗುತ್ತದೆ ಎನ್ನುವ ಕಾರಣದಿಂದ ಎಲ್ಲ ಮೀಸಲಿಟ್ಟ ಸ್ಥಾನಗಳನ್ನು ತುಂಬಲಾಗುತ್ತದೆ. ಆದುದರಿಂದ ಮೀಸಲಿಟ್ಟ ಸ್ಥಾನಗಳಿಗಿಂತ ಹೆಚ್ಚು ದಲಿತ ಪ್ರತಿನಿಧಿಗಳು ಈ ಸಂಸ್ಥೆಗಳಲ್ಲಿ ಪಾಲ್ಗೊಂಡರೆ ಅಭಿವೃದ್ಧಿಯೆಂದು ಪರಿಗಣಿಸಬಹುದು.

**ಕೋಷ್ಟಕ ೫.೧೦. ಸಾಂಸ್ಥಿಕ ಒಳಗೊಳ್ಳುವಿಕೆ/ಸೇರ್ಪಡೆಯ ಸೂಚ್ಯಂಕ**

| ಕ್ರಸಂ | ಶ್ರೇಣಿ | ಜಿಲ್ಲೆಗಳು ಮತ್ತು ಸೂಚ್ಯಂಕ | ಶೇಕಡವಾರು |
|---|---|---|---|
| ೧ | ಅತ್ಯುತ್ತಮ ಶ್ರೇಣಿ ೦.೮೦-೧.೦೦ | ದಾವಣಗೆರೆ(೦.೮೩), ಬೆಂಗಳೂರು ಗ್ರಾಮಾಂತರ(೦.೮೦) | ೬.೬೭ |
| ೨ | ಉತ್ತಮ ಶ್ರೇಣಿ ೦.೬-೦.೭೯ | ತುಮಕೂರು(೦.೬೭), ಕೋಲರ(೦.೬೭) | ೬.೬೭ |
| ೩ | ಸರಾಸರಿ ೦.೪-೦.೫೯ | ಚಾಮರಾಜನಗರ(೦.೫೮), ಗದಗ(೦.೫೮), ಉಡುಪಿ(೦.೫೮), ಕೊಪ್ಪಳ(೦.೫೭), ಬಳ್ಳಾರಿ(೦.೫೦), ಯಾದಗಿರಿ(೦.೫೦), ಹಾವೇರಿ(೦.೫೦), ಬೆಂ.ನಗರ(೦.೫೦), ಮೈಸೂರು(೦.೫೦), ದ.ಕನ್ನಡ(೦.೫೦), ಕೊಡಗು(೦.೪೨), ಕಲಬುರ್ಗಿ(೦.೪೦), ಬಾಗಲಕೋಟೆ(೦.೪೦), ವಿಜಯಪುರ(೦.೪೦), ಚಿಕ್ಕಮಗಳೂರು(೦.೪೦) | ೫೦ |
| ೪ | ಸರಾಸರಿಗಿಂತ ಕಡಿಮೆ <೦.೪ | ಧಾರವಾಡ(೦.೩೮), ಬೆಳಗಾವಿ(೦.೩೩), ರಾಮನಗರ(೦.೩೩), ಮಂಡ್ಯ(೦.೩೩), ಬೀದರ್(೦.೩೦), ಚಿತ್ರದುರ್ಗ(೦.೨೭), ರಾಯಚೂರು(೦.೨೫), ಚಿಕ್ಕಬಳ್ಳಾಪುರ(೦.೨೧), ಹಾಸನ(೦.೨೦), ಉ.ಕನ್ನಡ(೦.೧೭), ಶಿವಮೊಗ್ಗ(೦.೦೦) | ೩೬.೬೭ |
| | | ಒಟ್ಟು= | ೧೦೦ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)

**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಮೇಲಿನ ಕೋಷ್ಟಕದಲ್ಲಿ ವ್ಯಕ್ತವಾಗುವಂತೆ ದಾವಣಗೆರೆ ಮತ್ತು ಬೆಂಗಳೂರು ಗ್ರಾಮಗಳು ಅತ್ಯುತ್ತಮ ಶ್ರೇಣಿಯನ್ನು ಹೊಂದಿದ್ದು, ಒಟ್ಟು ೬.೬೭%ರಷ್ಟಿದೆ. ಅಷ್ಟೇ ಪ್ರಮಾಣದಷ್ಟು ಉತ್ತಮ ಶ್ರೇಣಿಯನ್ನು ತುಮಕೂರು ಮತ್ತು ಕೋಲಾರಗಳಲ್ಲಿ ಕಂಡುಬರುತ್ತದೆ. ಆದರೆ ೧೫ ಜಿಲ್ಲೆಗಳಲ್ಲಿ (೫೦%) ಸರಾಸರಿ ಪ್ರಮಾಣ ಹೊಂದಿದೆ ೧೧ ಜಿಲ್ಲೆಗಳಲ್ಲಿ ಸರಾಸರಿಗಿಂತ ಕಡಿಮೆ ಇರುವುದು ವರದಿಗಳಿಂದ ವ್ಯಕ್ತವಾಗುತ್ತದೆ. ಸರಾಸರಿ ಪ್ರಮಾಣ ರಾಜ್ಯದಲ್ಲಿ ಶೇ. ೫೦ ಇರುವುದು ಕಾನೂನುನಿಂದ ಮಾತ್ರ ಸಾಧ್ಯವಾಗಿದೆ ವಿನಃ ಯಾವುದೇ ರೀತಿಯ ದಲಿತರ ಶಕ್ತಿ–ಸಾಮರ್ಥ್ಯ ಅಥವಾ ದಲಿತೇತರ ಮುಕ್ತ ಸ್ವಭಾವದಿಂದಲ್ಲ ಎಂಬುದು ಅವಲೋಕನದಿಂದ ವ್ಯಕ್ತವಾಗುತ್ತದೆ.

**ದಲಿತರ ಸಾಮಾಜಿಕ ಒಳಗೊಳ್ಳುವಿಕೆ/ಸೇರ್ಪಡೆ**

ರಾಜ್ಯದ ಬಹುತೇಕ ಎಲ್ಲಾ ಜಿಲ್ಲೆಗಳಲ್ಲಿ ಸರಿಸುಮಾರು ಒಂದೇ ರೀತಿ ಗೋಚರವಾಗಬಹುದು. ಏಕೆಂದರೆ ದಲಿತರಲ್ಲಿ ಇನ್ನು ಸಾಮಾಜಿಕ ಸೇರ್ಪಡೆ ಉತ್ತಮವಾಗಿಲ್ಲ. ಉತ್ತಮದೆಡೆಗೆ ಮತ್ತು ಧನಾತ್ಮಕತೆಯೆಡೆಗೆ ಬದಲಾಗುತ್ತಿರುವ ಸೂಚನೆಗಳು ಇದ್ದರೂ ಸಹ ಅವು ಹೆಚ್ಚಾಗಿಲ್ಲವೆನ್ನಬಹುದು. ಬಹುತೇಕ ಜಿಲ್ಲೆಗಳಲ್ಲಿ ಸಾಮಾಜಿಕ ಬಹಿಷ್ಕಾರ ಆಚರಣೆಯು ಹಾಗೆಯೇ ಮುಂದುವರೆದಿದೆ. ಯಾವುದಾದರೂ ಇದ್ದಲ್ಲಿ ದಲಿತೇತರರಲ್ಲಿ ಗೌಣವಾದ ಬದಲಾವಣೆಗಳು ಕಂಡು ಬಂದಿದ್ದು, ದಲಿತರು ದಲಿತೇತರ ವಾಸಸ್ಥಳಕ್ಕೆ ಮುಕ್ತವಾಗಿ ಪ್ರವೇಶ ಇನ್ನು ಕಠಿಣವಾಗಿದೆ. ಅದರಲ್ಲೂ ಗೊಲ್ಲರಹಟ್ಟಿಗಳಿಗೆ ಅಸ್ಪೃಶ್ಯ ದಲಿತ ಪ್ರವೇಶ ಪಡೆಯುವುದು ಒಂದು ಕನಸಿನ ಮಾತೇ ಆಗಿದೆ. ಇಷ್ಟೊಂದು ಮೌಢ್ಯತೆ ಇಂದು ಕೂಡ ಕಾಣಬಹುದು. ಅಂತೆಯೇ ದಲಿತೇತರರು ದಲಿತರನ್ನು ಗೌರವಯುತವಾಗಿ ನಡೆಸಿಕೊಳ್ಳುವುದು ಕೇವಲ ಸರಿಸುಮಾರು ಶೇ. ೨೫ರಷ್ಟು ಸಂದರ್ಭಗಳಲ್ಲಿ ಮಾತ್ರವೇ ಆಗಿದ್ದು, ಇನ್ನು ರಾಜ್ಯದಲ್ಲಿ ಮಹತ್ವದ ಬದಲಾವಣೆಗಳು ಆಗಬೇಕಿದೆ.

ಆದರೂ ಸಾಮಾಜಿಕ ಸೇರ್ಪಡೆಯಲ್ಲಿ ಇತರ ಅಂಶಗಳನ್ನು ಗಮನಿಸಿದಾಗ ನಕರಾತ್ಮಕ ಅಸಮಾನತೆಯ ಧೋರಣೆ ಎದ್ದುಕಾಣುತ್ತದೆ. ಊರ ಜಾತ್ರೆಗಳಲ್ಲಿ ದಲಿತೇತರರಂತೆ ಪಾಲ್ಗೊಳ್ಳುವ ಸಾಧ್ಯವಿಲ್ಲ. ದಲಿತೇತರರು ನಡೆಸುವ ಎಲ್ಲಾ ಹಬ್ಬ–ಹರಿದಿನಗಳಲ್ಲಿ ಭಾಗವಹಿಸುತ್ತಾರೆ ಸರಿ. ಶೇ. ೮೪ರಷ್ಟು ಹಬ್ಬದಿಂದ ದೂರವೇ ಉಳಿದಿದ್ದಾರೆ. ಊರ ದೇವಾಲಯಗಳಲ್ಲಿ ಮತ್ತು ಹೋಟೆಲ್‌ಗಳಲ್ಲಿ ದಲಿತರು ದಲಿತೇತರಂತೆ ಮನ್ನಣೆ ಇರುವುದಿಲ್ಲ. ದಲಿತರು ದಲಿತೇತರಂತೆ ಎಲ್ಲ ಕಡೆ ಒಳಗೊಳ್ಳಲ್ಪಟ್ಟರೆ ಅಸ್ಪೃಶ್ಯತೆ ಕಡಿಮೆಯಾಗಿದೆ ಅನ್ನುವುದನ್ನು ಹೇಳಬಹುದು. ಆದರೆ ಬಹುತೇಕ ಜಿಲ್ಲೆಗಳಲ್ಲಿ ಆ ಅಂತರವನ್ನು ತಲುಪಬೇಕಾದರೆ ದೊಡ್ಡ ರೀತಿಯ ಮಾನಸಿಕ ಬದಲಾವಣೆ ಸಂಭವಿಸಬೇಕು. ದೈಹಿಕ ನೋವಿಗಿಂತ ಮಾನಸಿಕವಾದ ನೋವು ಬಹಳ ದೊಡ್ಡದು ಅಂಥ. ನೋವಿನ ಜೀವನವನ್ನು ಅಸ್ಪೃಶ್ಯ ದಲಿತರು ನಿರಂತರವಾಗಿ ಅನುಭವಿಸುತ್ತಿರುವುದು ಅಭಿವೃದ್ಧಿ ಸಿದ್ಧಾಂತಗಳನ್ನು ದೊಡ್ಡ ಪ್ರಮಾಣದಲ್ಲಿ ಮಂಡಿಸುವವರಿಗೆ, ಕಾನೂನು ಪಾಲಕರಿಗೆ, ದೊಡ್ಡ ವಿದ್ಯಾವಂತ ಗುಂಪಿಗೆ ಇವು ಅರ್ಥವಾಗದ ಸಂಗತಿಗಳಾಗಿ ಉಳಿದು ಬಿಟ್ಟಿವೆ. ಅದಕ್ಕೆ ಎಂ. ಚಂದ್ರ ಪೂಜಾರಿ ಅವರು ತಮ್ಮ

ಕೃತಿಯಲ್ಲಿ ದಲಿತರ ಅಭಿವೃದ್ಧಿ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಅಥವಾ ಅರ್ಥ ಮಾಡಿಕೊಳ್ಳಲು ತುಂಬಾ ಸಂಕೀರ್ಣವಾದ ಸೂಚಿಯ ಅಗತ್ಯವಿಲ್ಲ. ತೆರೆದ ಮನಸ್ಸು, ಮತ್ತೊಬ್ಬರ ಬಗ್ಗೆ ಕಷ್ಟ-ಸುಖಗಳ ತಮ್ಮ ಇತಿಮಿತಿಯೊಳಗೆ ಸ್ಪಂಧಿಸುವ ಕಾಳಜಿ ಇರುವ ಎಲ್ಲರಿಗೂ ದಲಿತರ ದುಃಸ್ಥಿತಿಯನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವಾಗಲಾರದು ಎಂಬ ಅಭಿಪ್ರಾಯಗಳು ಸಾರ್ವತ್ರಿಕವಾಗಬೇಕು, ಅಂದರೆ ಎಲ್ಲರ ಅನುಭವಕ್ಕೆ ಹುಟ್ಟಬೇಕು. ಆದರೆ ಅಕ್ಷರಸ್ಥರಲ್ಲಿ ಅಸಮಾನತೆ ಮತ್ತು ಕಾರಣವಿಲ್ಲದ ದ್ವೇಷದ ಜ್ವಾಲೆ ಹೆಚ್ಚು ಉರಿಯುತ್ತಿದೆ. ಅಂಥವರಲ್ಲಿ ಪ್ರಜ್ಞೆಯೆಂಬುದು ಬಂದರೆ ಬದಲಾವಣೆ ಖಂಡಿತಾ ಸಾಧ್ಯ.

**ಕೋಷ್ಟಕ ೫.೧೧. ಸಾಮಾಜಿಕ ಒಳಗೊಳ್ಳುವಿಕೆ/ಸೇರ್ಪಡೆಯ ಸೂಚ್ಯಂಕ**

| ಕ್ರಸಂ | ಶ್ರೇಣಿ | ಜಿಲ್ಲೆಗಳು ಮತ್ತು ಸೂಚ್ಯಂಕ | ಶೇಕಡವಾರು |
|---|---|---|---|
| ೧ | ಅತ್ಯುತ್ತಮ ಶ್ರೇಣಿ ೦.೮೦–೧.೦೦ | ಕೊಡಗು(೧.೦೦), ಉ.ಕನ್ನಡ(೧.೦೦), ಶಿವಮೊಗ್ಗ(೦.೯೦), ದ.ಕನ್ನಡ(೦.೯೦), ಉಡುಪಿ(೦.೮೦) | ೧೬.೬೭ |
| ೨ | ಉತ್ತಮ ಶ್ರೇಣಿ ೦.೬–೦.೭೯ | ಮಂಡ್ಯ(೦.೭೦), ಹಾವೇರಿ(೦.೭೦), ರಾಯಚೂರು(೦.೭೦), ಮೈಸೂರು(೦.೬೦), ಕೋಲಾರ(೦.೬೦), ಗದಗ(೦.೬೦) | ೨೦ |
| ೩ | ಸರಾಸರಿ ೦.೪–೦.೫೯ | ಬೀದರ್(೦.೫೦), ಧಾರವಾಡ(೦.೫೦), ಬೆಂಗಳೂರು ನಗರ(೦.೫೦), ಬೆಂಗಳೂರು ಗ್ರಾಮಾಂತರ(೦.೫೦), ತುಮಕೂರು(೦.೫೦), ಚಿಕ್ಕಮಗಳೂರು(೦.೫೦), ಕಲಬುರ್ಗಿ(೦.೪೦), ಬೆಳಗಾವಿ(೦.೪೦) | ೨೬.೬೭ |
| ೪ | ಸರಾಸರಿಗಿಂತ ಕಡಿಮೆ <೦.೪ | ಬಳ್ಳಾರಿ(೦.೩೦), ಚಿತ್ರದುರ್ಗ(೦.೩೦), ಕೊಪ್ಪಳ(೦.೨೦), ವಿಜಯಪುರ(೦.೨೦), ರಾಮನಗರ(೦.೨೦), ದಾವಣಗೆರೆ(೦.೨೦), ಬಾಗಲಕೋಟೆ(೦.೧೦), ಚಿಕ್ಕಬಳ್ಳಾಪುರ(೦.೧೦), ಚಾಮರಾಜನಗರ(೦.೧೦), ಹಾಸನ(೦.೧೦), ಯಾದಗಿರಿ(೦.೦೦) | ೩೬.೬೬ |
| | | ಒಟ್ಟು= | ೧೦೦ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)

**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಮೇಲಿನ ಕೋಷ್ಟಕದ ಅಂಕಿ ಅಂಶಗಳನ್ನು ಗಮನಿಸಿದಾಗ ಯಾದಗಿರಿ ಜಿಲ್ಲೆಯಲ್ಲಿ ೦.೦೦ರಷ್ಟಿದ್ದು ದಲಿತರ ಸಾಮಾಜಿಕ ಸೇರ್ಪಡೆ ಬಹಳ ಕೆಳಮಟ್ಟದಲ್ಲಿದೆ ಎಂಬುದು ಸೂಚಿತವಾಗುತ್ತದೆ. ಸಮಾಜ ಅವರನ್ನು ದೂರವಿಡುವುದರ ಜೊತೆಗೆ ತಾವೇ ಖುದ್ದಾಗಿ ಅನವಶ್ಯಕ ಘರ್ಷಣೆಗಳನ್ನು ತಪ್ಪಿಸುವ ಸಲುವಾಗಿ ತಾವಾಗಿಯೇ ದಲಿತೇತರರ ಮನೆಗಳನ್ನು ಹಾಗೂ ದೇವಾಲಯಗಳನ್ನು ಪ್ರವೇಶಿಸುವುದರಿಂದ ದೂರುವಿರುವುದನ್ನು ಕೂಡ ಗಮನಿಸಬಹುದು. ಈ ಧೋರಣೆಯಿಂದ ದಲಿತೇತರರು ಹರ್ಷದಿಂದ ಇರುವುದು ಕೂಡ ವ್ಯಕ್ತವಾಗುತ್ತದೆ. ಅವರೇ ದೂರ ಇಟ್ಟರೋ ಇವರೇ ದೂರ ಉಳಿದರೂ ಒಂದು ರೀತಿಯಲ್ಲಿ ಸಾಮಾಜಿಕ ಅಸಮಾನತೆಯನ್ನೇ ಎತ್ತಿ ಹಿಡಿಯುತ್ತದೆ. ದಲಿತರು ದಲಿತೇತರರಿಗಿಂತ ಕನಿಷ್ಠಮಟ್ಟದ ಬದುಕು ಸಾಗಿಸುವುದು ಸತ್ಯದ ಸಂಗತಿಯಾಗಿದೆ. ಯಾದಗಿರಿಯ ನಂತರದ ಕೆಳಮಟ್ಟದ ಸ್ಥಾನಗಳಲ್ಲಿ ಬಾಗಲಕೋಟೆ, ಚಿಕ್ಕಬಳ್ಳಾಪುರ, ಚಾಮರಾಜನಗರ, ಹಾಸನ ಜಿಲ್ಲೆಗಳಲ್ಲಿ ೦.೧೦ರಷ್ಟಿದೆ. ೦.೨೦ರಷ್ಟು ಇನೇ ಕೆಳಮಟ್ಟದ ಸೂಚಿಯನ್ನು ಕೊಪ್ಪಳ, ವಿಜಯಪುರ, ರಾಮನಗರ, ದಾವಣಗೆರೆ ಜಿಲ್ಲೆಗಳಲ್ಲಿ ಕಂಡು ಬರುತ್ತದೆ. ಅತ್ಯಂತ ಉನ್ನತ ಮಟ್ಟದ ಸಾಮಾಜಿಕ ಸೇರ್ಪಡೆ ಕೊಡಗು(೧.೦೦) ಮತ್ತು ಉತ್ತರ ಕನ್ನಡ(೧.೦೦), ನಂತರ ಶಿವಮೊಗ್ಗ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ೦.೯೦ರಷ್ಟಿದೆ ಎಂದು ತಿಳಿದುಬರುತ್ತದೆ.

**ತಾರತಮ್ಯದ ಅನುಭವದ ಸೂಚ್ಯಂಕ(ತಾರತಮ್ಯದ ಧೋರಣೆಯ ಪರಿಭಾವನೆ)**

ತಾರತಮ್ಯ ಧೋರಣೆ, ಸಾಮಾಜಿಕ ಮತ್ತು ಆರ್ಥಿಕವಾಗಿ ಎರಡು ಸ್ತರಗಳಲ್ಲಿ ಬಹಿಷ್ಕಾರಕ್ಕಿಂತ ಭೀಕರವಾಗಿದೆ. ವಿವಿಧ ಅಭಿವೃದ್ಧಿ ಅವಕಾಶಗಳನ್ನು ಬಳಸಿಕೊಳ್ಳುವಲ್ಲಿ ದಲಿತರು ತಾರತಮ್ಯಗಳನ್ನು ಎದುರಿಸುವ ಸಾಧ್ಯತೆಗಳಿವೆ. ತಾರತಮ್ಯಗಳು ಕಡಿಮೆಯಾದಷ್ಟು ದಲಿತ ಅಭಿವೃದ್ಧಿ ಸಾಧ್ಯತೆಗಳು ಹೆಚ್ಚಾಗುತ್ತದೆ ಎನ್ನುವ ಗ್ರಹಿಕೆ ಈ ಸೂಚಿಯಲ್ಲಿದೆ.

- ಶಾಲೆಯಲ್ಲಿ ದಲಿತ ಮಕ್ಕಳು ಎದುರಿಸುವ ತಾರತಮ್ಯ.
- ಕುಡಿಯುವ ನೀರಿನ ವಿತರಣೆಯಲ್ಲಿ ತಾರತಮ್ಯ
- ಊರಲ್ಲಿ ಸೃಷ್ಟಿಯಾಗುವ ಉದ್ಯೋಗಗಳನ್ನು ಪಡೆಯುವಲ್ಲಿನ ತಾರತಮ್ಯಗಳು
- ಸಾರ್ವಜನಿಕ ಸ್ಥಳಗಳಲ್ಲಿ ಎದುರಿಸುವ ತಾರತಮ್ಯಗಳು

ಹೀಗೆ ಒಟ್ಟು ಐದು ಅಂಶಗಳನ್ನು ಅಥವಾ ಸೂಚಿಗಳನ್ನು ಪರಿಗಣಿಸಲಾಗಿದೆ. ದಲಿತೇತರು ಬಳಸುವ ಎಲ್ಲಾ ಕುಡಿಯುವ ನೀರಿನ ಮೂಲಗಳಿಗೆ ದಲಿತರಿಗೆ ಅವಕಾಶ ಇಲ್ಲದಿರುವುದು, ಶಾಲಾ ಮಕ್ಕಳಲ್ಲಿನ ಆಸನಗಳು, ಬಿಸಿಯೂಟಕ್ಕೆ ತಟ್ಟೆಗಳು, ಪಠ್ಯ ಮತ್ತು ಪಠ್ಯೇತರ ಚಟುವಟಿಕೆಗಳಾದ ನಾಟ್ಯ, ಹಾಡು, ನಾಟಕ ಮತ್ತು ಭಾಷಣ ಕಲೆಗಳಲ್ಲಿ ಅವಕಾಶ ನೀಡುವಿಕೆಗೆ ಸಂಬಂಧಿಸಿದಂತೆ ತಕರಾರು ಇರುವುದು ಹಾಗೆಯೇ ಮನೆಗೆ ಆರೋಗ್ಯ ಕಾರ್ಯಕರ್ತರ ಭೇಟಿಯ ಸಂಖ್ಯೆ, ಔಷಧಗಳ ವಿತರಣೆ, ಹೆಚ್ಚುವರಿ ತಪಾಸಣೆಗಳಿಗಾಗಿ ತುರ್ತು ಸೇವೆಗಳು ಮತ್ತು ಸೌಲಭ್ಯಗಳನ್ನು

ನೀಡುವ ವಿಷಯಗಳಲ್ಲಿ ಆರೋಗ್ಯ ಕಾರ್ಯಕರ್ತರು(ಆಶಾ) ಹಟ್ಟಿಗಳ ಒಳಗೆ ಹೋಗುವುದು ಕಡೆಗಣಿಸುವ ರೀತಿಯಲ್ಲಿ ಸೇವೆ ನಿರಾಕರಣೆ ಮಾಡುವುದು. ಅಷ್ಟೇ ಅಲ್ಲದೇ ೨೧ನೇ ಶತಮಾನದ ಕಂಪ್ಯೂಟರ್ ಯುಗದಲ್ಲಿ ಅಸಮಾನತೆ ತಾರತಮ್ಯ ತಾಂಡವಾಡುತ್ತಿದೆ. ವ್ಯಕ್ತಿಗಳನ್ನು ಹೋಟೆಲುಗಳಲ್ಲಿ, ಮಂದಿರದಲ್ಲಿ, ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಕ್ರಮಗಳಲ್ಲಿ ಪ್ರವೇಶ, ಆಹ್ವಾನ, ಆಸನ ವ್ಯವಸ್ಥೆ(ಸಮಾನ ಅಥವಾ ಪ್ರತ್ಯೇಕ), ತಟ್ಟೆಗಳು ಅಥವಾ ಲೋಟಗಳು, ಬಡಿಸಲಾದ ಆಹಾರ ಮತ್ತು ಬಳಸಲಾದ ತಟ್ಟೆಗಳು ಮತ್ತು ಲೋಟಗಳ ತ್ಯಾಜ್ಯಕ್ಕೆ ಸಂಬಂಧಿಸಿದಂತೆ ಹಲವಾರು ರೀತಿಯ ತಾರತಮ್ಯ ಸರಿಸುಮಾರು ಶೇ. ೯೦ರಷ್ಟು ಗೋಚರವಾಗುತ್ತದೆ.

**ಕೋಷ್ಟಕ ೫.೧೨. ತಾರತಮ್ಯ ಅನುಭವದ ಸೂಚ್ಯಂಕ**

| ಕ್ರ.ಸಂ | ಶ್ರೇಣಿ | ಜಿಲ್ಲೆಗಳು ಮತ್ತು ಸೂಚ್ಯಂಕ | ಶೇಕಡವಾರು |
|---|---|---|---|
| ೧ | ಅತ್ಯುತ್ತಮ ಶ್ರೇಣಿ ೦.೮೦–೧.೦೦ | ರಾಯಚೂರು(೧.೦೦), ಧಾರವಾಡ(೧.೦೦), ತುಮಕೂರು(೧.೦೦), ಶಿವಮೊಗ್ಗ(೧.೦೦), ಉ.ಕನ್ನಡ(೧.೦೦), ಉಡುಪಿ(೧.೦೦), ದ.ಕನ್ನಡ(೧.೦೦), ಕೊಡಗು(೧.೦೦), ಚಿಕ್ಕಮಗಳೂರು(೦.೯೦), ಬೆಂ.ಗ್ರಾಮಾಂತರ(೦.೯೦), ಮಂಡ್ಯ(೦.೮೦), ಚಾಮರಾಜನಗರ(೦.೮೦), ದಾವಣಗೆರೆ(೦.೮೦) | ೪೩.೩೪ |
| ೨ | ಉತ್ತಮ ಶ್ರೇಣಿ ೦.೬–೦.೭೯ | ಕೋಲಾರ(೦.೭೦), ಬೆಂ.ನಗರ(೦.೬೦), ಮೈಸೂರು(೦.೬೦) | ೧೦ |
| ೩ | ಸರಾಸರಿ ೦.೪–೦.೫೯ | ಬಳ್ಳಾರಿ(೦.೫೦), ಕಲಬುರ್ಗಿ(೦.೫೦), ಯಾದಗಿರಿ(೦.೫೦), ಬಾಗಲಕೋಟೆ(೦.೫೦), ವಿಜಯಪುರ(೦.೫೦), ಗದಗ(೦.೫೦), ಹಾಸನ(೦.೫೦), ಚಿತ್ರದುರ್ಗ(೦.೪೯), ಕೊಪ್ಪಳ(೦.೪೦), ಬೆಳಗಾವಿ(೦.೪೦), ಹಾವೇರಿ(೦.೪೦) | ೩೬.೬೬ |
| ೪ | ಸರಾಸರಿಗಿಂತ ಕಡಿಮೆ <೦.೪ | ಬೀದರ್(೦.೩೦), ರಾಮನಗರ(೦.೨೦), ಚಿಕ್ಕಬಳ್ಳಾಪುರ(೦.೧೫) | ೧೦ |
| | | ಒಟ್ಟು= | ೧೦೦ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)
**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಮೇಲಿನ ಕೋಷ್ಟಕದ ಅಂಕಿ ಅಂಶಗಳನ್ನು ಗಮನಿಸಿದಾಗ ತಾರತಮ್ಯ ಧೋರಣೆ ಪರಿಭಾವನೆ ಚಿಕ್ಕಬಳ್ಳಾಪುರ, ರಾಮನಗರ, ಬೀದರ್ ಜಿಲ್ಲೆಗಳು ಸೂಚಿಗಳಲ್ಲಿ ಕೆಳಮಟ್ಟದಲ್ಲಿವೆ ಕರ್ನಾಟಕದ ಒಟ್ಟು ಜಿಲ್ಲೆಗಳಲ್ಲಿ ೧೩ ಜಿಲ್ಲೆಗಳಲ್ಲಿ ಅತ್ಯುತ್ತಮ ಶ್ರೇಣಿಯಲ್ಲಿವೆ ಶೇ. ೪೩.೩೪ರಷ್ಟು ಗೋಚರವಾಗುತ್ತದೆ. ಅದರಲ್ಲಿ ರಾಯಚೂರು, ಮಂಡ್ಯ, ದಾವಣಗೆರೆ, ಚಾಮರಾಜನಗರ, ತುಮಕೂರು ಜಿಲ್ಲೆಗಳಲ್ಲಿ ಅತ್ಯುತ್ತಮ ಶ್ರೇಣಿ ಲಭ್ಯವಾಗಿರುವುದು ನಂಬಲು ಸಾಧ್ಯವಾಗದ ಸಂಗತಿಯಾಗಿದೆ. ತಾರತಮ್ಯ ಅನುಭವಿಸಿದವರು ಅನುಭವಕ್ಕೆ ಬಾರದೇ ಇರುವ ದಲಿತೇತರರಿಗೆ ಈ ನೋವಿನ ಅರಿವು ಇರುವುದಿಲ್ಲ. ಇಂದಿನ ದಿನಮಾನದಲ್ಲಿ ಫೇಸ್ಬುಕ್, ವಾಟ್ಸಪ್, ಟ್ವಿಟರ್ ಸಾಮಾಜಿಕ ತಾಣಗಳಲ್ಲಿ ಸುಖಾಸುಮ್ಮನೆ ದಲಿತರ ಬಗ್ಗೆ ಕಾಮೆಂಟ್ ಮಾಡುವ ಅಜ್ಞಾನಿ ವಿದ್ಯಾವಂತರಿಗೆ ಇವುಗಳ ಪರಿವೇ ಇಲ್ಲದಿರುವುದು ಕೂಡ ಕೆಲಮಟ್ಟದ ಮಾನಸಿಕ ಸ್ಥಿತಿಯನ್ನು ವ್ಯಕ್ತಪಡಿಸುವಂಥದ್ದಾಗಿದೆ. ಪ್ರಸ್ತುತವಾಗಿ ಇದನ್ನು ಏಕೆ ಚರ್ಚಿಸಬೇಕಾಯಿತೆಂದರೆ ದಲಿತರು ಇಂದಿಗೂ ಈಗಲೂ ತಂತ್ರಜ್ಞಾನ ಬೆಳವಣಿಗೆಯೊಂದಿಗೆ ತಾರತಮ್ಯ-ನಿರಾಕರಣೆಯ ಭಾವಗಳು ಬೆಳೆಯುತ್ತಿವೆಯೇ ಹೊರತು ಕಡಿಮೆಯಾಗುತ್ತಿಲ್ಲ ಎನ್ನುವುದು ಅಭಿವೃದ್ಧಿ ದೃಷ್ಟಿಯಲ್ಲಿ ನೋವಿನ ಸಂಗತಿಯಾಗಿದೆ.

### ತಾರತಮ್ಯ ವಿರುದ್ಧ ಪ್ರತಿಭಟನೆ ಸೂಚ್ಯಂಕ

ಸಂವಿಧಾನಾತ್ಮಕ ಮೂಲಭೂತ ಹಕ್ಕುಗಳ ಉಲ್ಲಂಘನೆಯ ತಾರತಮ್ಯ ಧೋರಣೆ, ಅಮಾನವೀಯ ಮಾನಸಿಕ ಸ್ಥಿತಿಗಳಿಂದ ದಲಿತರ ಅಭಿವೃದ್ಧಿ ಸ್ಥಿತಿ ಕುಂಟಿತವಾಗುತ್ತಿದೆ. ತಾರತಮ್ಯದ ಧೋರಣೆಗಳನ್ನು ಯಾವುದೇ ಮಾನವೀಯ ದೃಷ್ಟಿಕೋನದಲ್ಲಿ ನೋಡುವುದಾದರೆ ಇದು ಅಕ್ಷಮ್ಯವಾಗುತ್ತದೆ. ಆರೋಗ್ಯ, ಶಿಕ್ಷಣ, ಕುಡಿಯುವ ನೀರು, ಉದ್ಯೋಗ ಮುಂತಾದ ಅವಶ್ಯಕ ಮೂಲಭೂತ ಸವಲತ್ತುಗಳ ಪಡೆಯುವಿಕೆಯಲ್ಲಿ ಅಸಮಾನತೆ ಅಥವಾ ತಾರತಮ್ಯ ಧೋರಣೆ ಇದ್ದಂತಹ ಸಂದರ್ಭದಲ್ಲಿ ದಲಿತರ ಅಭಿವೃದ್ಧಿ ಖಂಡಿತವಾಗಿಯೂ ಕಡಿಮೆ ಇರುತ್ತದೆ. ತಾರತಮ್ಯ ಇದ್ದಾಗ ಅದನ್ನು ಪ್ರತಿಭಟಿಸುವ ಸಾಧ್ಯತೆ ಹೆಚ್ಚಾದಂತೆ ದಲಿತ ಅಭಿವೃದ್ಧಿ ಹೆಚ್ಚಾಗುತ್ತದೆಯೆಂದು ಗ್ರಹಿಸಬಹುದು. ಆದರೆ ತಾರತಮ್ಯ ಬಗ್ಗೆ ಸುಮ್ಮನಿರುವುದನ್ನು 'ಗೌಣವೆಂದು ಭಾವಿಸುವುದು' ಮತ್ತು ದಲಿತೇತರರು ಇದಕ್ಕೆ 'ದ್ವೇಷ ಸಾಧಿಸಬಹುದು' ಮತ್ತು ತೀವ್ರತೆ ಅಥವಾ ಉಗ್ರ ಪ್ರತಿಭಟನೆ ಮಾಡಬಹುದು ಎಂಬ ಭಯದ ವಾತಾವರಣದಲ್ಲಿ ದಲಿತರು ಬದುಕಬೇಕಾಗಿದೆ. ತಲೆತಲಾಂತರಗಳಿಂದ ಸುದೀರ್ಘ ಅವಧಿಯವರೆಗೆ ದಲಿತರು ತುಳಿತಕ್ಕೊಳಗಾಗಿದ್ದರು ಸಹ ತಮ್ಮ ಹಕ್ಕಿನ ಪ್ರಶ್ನೆಗಳಾದ ನೀರು, ಶಿಕ್ಷಣ, ಆರೋಗ್ಯ, ಸಾಮಾಜಿಕ-ಆರ್ಥಿಕ ಸೇರ್ಪಡೆಗಳಿಗೆ ಸಂಬಂಧಿಸಿದಂತೆ ಯಾವುದೇ ಪ್ರತಿರೋಧವನ್ನು ವ್ಯಕ್ತಪಡಿಸದೆ ಇರುವುದು ಕಂಡು ಬರುತ್ತದೆ. ಒಂದುವೇಳೆ ವಿರೋಧ ವ್ಯಕ್ತಪಡಿಸಿದರೆ ಅದರ ಪ್ರಮಾಣ ತುಂಬ ಕಡಿಮೆ ಎಂದು ಅಧ್ಯಯನಗಳಿಂದ ವೇದ್ಯವಾಗುತ್ತದೆ. ಉದಾಹರಣೆಗೆ ಚಿತ್ರದುರ್ಗ ಜಿಲ್ಲೆಯಲ್ಲಿ ನೀರಿನ ತಾರತಮ್ಯಕ್ಕೆ ಸಂಬಂಧಿಸಿದಂತೆ ಕೇವಲ ಶೇ. ೭ರಷ್ಟು ವಿರೋಧ ವ್ಯಕ್ತಪಡಿಸಿದರೆ, ಶೇ. ೯೩ರಷ್ಟು ವಿರೋಧಿಸದೇ ಇದ್ದಾರೆ. ಶೈಕ್ಷಣಿಕ ತಾರತಮ್ಯಕ್ಕೆ ಸಂಬಂಧಿಸಿದಂತೆ ಶೇ. ೨ರಷ್ಟು ಮಂದಿ ವಿರೋಧಿಸಿದರೆ, ಉಳಿದ

ಶೇ. ೯೦ರಷ್ಟು ಮಂದಿ ವಿರೋಧಿಸುವುದಿಲ್ಲ. ಸಾಮಾಜಿಕ ತಾರತಮ್ಯಕ್ಕೆ ಸಂಬಂಧಿಸಿದಂತೆ ಶೇ. ೬ರಷ್ಟು ವಿರೋಧಿಸಿದರೆ, ಶೇ. ೯೪ರಷ್ಟು ವಿರೋಧಿಸಿರುವುದಿಲ್ಲ. ಆರ್ಥಿಕ ತಾರತಮ್ಯಕ್ಕೆ ಸಂಬಂಧಿಸಿದಂತೆ ಶೇ. ೭ರಷ್ಟು ವಿರೋಧಿಸಿದರೆ, ಶೇ. ೯೩ರಷ್ಟು ವಿರೋಧಿಸಿರುವುದಿಲ್ಲ. ಒಂದು ಜಿಲ್ಲೆಯ ಉದಾಹರಣೆ ಯಷ್ಟೇ. ಈ ನಿಟ್ಟಿನಲ್ಲಿ ದಲಿತರ ನಿಷ್ಕ್ರೀಯತೆಯು ಎದ್ದು ಕಾಣುತ್ತದೆ. ಅಂದರೆ ದಲಿತರಲ್ಲೇ ಪ್ರತಿರೋಧಿಸುವ ಶಕ್ತಿ ಇಲ್ಲ, ಭಯದಿಂದ ಜೀವನ ಸಾಗಿಸುತ್ತಿದ್ದಾರೆ. ಹಂಗಿನ ಬದುಕನ್ನು ಒಪ್ಪಿಕೊಂಡು ಮುಕ್ತರಾಗುವ ಪ್ರಯತ್ನಗಳ ಪ್ರಮಾಣ ತುಂಬ ಕಡಿಮೆಯಿದೆ. ಒಟ್ಟಾರೆಯಾಗಿ ಇವರು ಪೂರ್ಣಪ್ರಮಾಣ ದಲ್ಲಿ ಸಂಘಟಿತರಲ್ಲ; ಏಕೆಂದರೆ ಸಂವಿಧಾನತ್ಮಕವಾದ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗಗಳ ಮೂಲಭೂತ ಹಕ್ಕುಗಳ ರಕ್ಷಣೆ ಮಾಡಿಕೊಳ್ಳುವಷ್ಟು ಅಸಮರ್ಥರಾಗಿದ್ದಾರೆ. ಭಾರತಕ್ಕೆ ಸ್ವಾತಂತ್ರ್ಯ ಬಂದಿದೆ. ಆದರೆ ದಲಿತರಿಗೆ/ಅಸ್ಪೃಶ್ಯರಿಗೆ ಇನ್ನು ಸ್ವಾತಂತ್ರ್ಯ-ಹಕ್ಕು ಗಗನ ಕುಸುಮದಂತಿದೆ. ತಾರತಮ್ಯ ದಂತಹ ನಕರಾತ್ಮಕ ಆಚರಣೆಗಳಿಗೆ ಸಂಬಂಧಿಸಿದಂತೆ, ಸಾಮಾಜಿಕ-ಆರ್ಥಿಕ-ನ್ಯಾಯಿಕ ವೃತ್ತಗಳಲ್ಲಿನ ಪರಿಸ್ಥಿತಿಗಳು ಸಹ ವಿಷಾದನೀಯವಾಗಿದೆ.

**ಕೋಷ್ಟಕ ೫.೧೩. ತಾರತಮ್ಯ ವಿರುದ್ಧ ಪ್ರತಿಭಟನೆ ಸೂಚ್ಯಂಕ**

| ಕ್ರ.ಸಂ | ಶ್ರೇಣಿ | ಜಿಲ್ಲೆಗಳು ಮತ್ತು ಸೂಚ್ಯಂಕ | ಶೇಕಡವಾರು |
|---|---|---|---|
| ೧ | ಅತ್ಯುತ್ತಮ ಶ್ರೇಣಿ ೦.೮೦-೧.೦೦ | ದಕ್ಷಿಣ ಕನ್ನಡ(೧.೦೦), ಚಾಮರಾಜನಗರ(೧.೦೦), ಮಂಡ್ಯ(೧.೦೦), ಉಡುಪಿ(೧.೦೦) | ೧೩.೩೩ |
| ೨ | ಉತ್ತಮ ಶ್ರೇಣಿ ೦.೬-೦.೭೯ | ಮೈಸೂರು(೦.೭೦), ದಾವಣಗೆರೆ(೦.೬೦) | ೬.೬೭ |
| ೩ | ಸರಾಸರಿ ೦.೪-೦.೫೯ | ಧಾರವಾಡ(೦.೫೦), ಹಾಸನ(೦.೫೦), ಬೀದರ್(೦.೪೦), ಕಲ್ಬುರ್ಗಿ(೦.೪೦), ಬೆಳಗಾವಿ(೦.೪೦), ಕೊಡಗು(೦.೪೦) | ೨೦ |
| ೪ | ಸರಾಸರಿಗಿಂತ ಕಡಿಮೆ <೦.೪ | ಚಿತ್ರದುರ್ಗ(೦.೩೬), ಚಿಕ್ಕಮಗಳೂರು(೦.೩೦), ಗದಗ(೦.೨೦), ಹಾವೇರಿ(೦.೨೦),ಬಳ್ಳಾರಿ(೦.೧೦), ಬೆಂ.ನಗರ(೦.೧೦), ಕೋಲಾರ(೦.೧೦), ಕೊಪ್ಪಳ(೦.೦೦), ರಾಯಚೂರು(೦.೦೦), ಯಾದಗಿರಿ (೦.೦೦), ಬಾಗಲಕೋಟೆ(೦.೦೦), ವಿಜಯಪುರ (೦.೦೦), ಉ.ಕನ್ನಡ(೦.೦೦), ಬೆಂ.ಗ್ರಾಮಾ(೦.೦೦), ತುಮಕೂರು(೦.೦೦), ರಾಮನಗರ(೦.೦೦), ಚಿಕ್ಕಬಳ್ಳಾಪುರ(೦.೦೦), ಶಿವಮೊಗ್ಗ(೦.೦೦) | ೬೦ |
| | | ಒಟ್ಟು= | ೧೦೦ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)
**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಮೇಲಿನ ಕೋಷ್ಟಕದ ಅಂಕಿ ಅಂಶಗಳನ್ನು ವೀಕ್ಷಿಸಿದಾಗ ಯಾರದೋ ಮುಲಾಜಿಗೆ ದಲಿತರು ಅಂಜಿ ಬದುಕುವ ಜೀವನ ನಿರ್ವಹಿಸುವ ಪರಿಸ್ಥಿತಿ ನಿರ್ಮಾಣವಾಗಿದೆ. ತಮಗೆ ಅನ್ಯಾಯವಾದಾಗ ಅದರ ವಿರುದ್ಧ ಹೋರಾಟ ಮಾಡುವ ಅಥವಾ ಪ್ರತಿರೋಧಿಸುವ ಪರಿ ಕೆಳಮಟ್ಟದಲ್ಲಿ ದಲಿತರಿಗೆ ಹಕ್ಕಿನ ಪ್ರಶ್ನೆಗಿಂತ ಹಂಗಿನ ಬದುಕೇ ಮುಖ್ಯವಾಗಿದೆ. ಪ್ರಶ್ನಿಸುವ ಧಾರಣೆ ಮಾಡುವ ಸ್ವಸಾಮರ್ಥ್ಯವನ್ನು ಕುಂದಿಸುವ ಶಕ್ತಿಗಳು ಕಾರ್ಯ ನಿರ್ವಹಿಸುತ್ತಿವೆ. ಭಯದ ಛಾಯೆ ಇವರಲ್ಲಿ ಅವರಿಸಿದೆ.

ನಿಜಕ್ಕೂ ನ್ಯಾಯಿಕ ವ್ಯವಸ್ಥೆ ಇವರನ್ನು ರಕ್ಷಿಸಿದ್ದಲ್ಲಿ, ಹಂಗಿನ ಬದುಕನ್ನು ಖುದ್ದು ಇವರು ತ್ಯಜಿಸಿದ್ದಲ್ಲಿ ಮಾತ್ರ ಇವರ ಅಭಿವೃದ್ಧಿ ಸಾಧ್ಯ ಸರ್ಕಾರಗಳು ಬರೀ ಉಚಿತ ಶಿಕ್ಷಣ, ವಸತಿ, ಆರೋಗ್ಯ ಸವಲತ್ತುಗಳು ನೀಡುವ ಜೊತೆಗೆ ಎಷ್ಟರಮಟ್ಟಿಗೆ ಸಾಮಾಜಿಕ ಸ್ವಾತಂತ್ರ್ಯ ದೊರಕಿಸಿಕೊಡಲು ಸಾಧ್ಯ ಎಂಬುದನ್ನು ಚಿಂತಿಸಬೇಕು ಮತ್ತು ಅನುಷ್ಠಾನಗೊಳಿಸಬೇಕು. ಪ್ರತಿರೋಧಿಸುವ ಪ್ರಮಾಣ ಶೇ. ೧೩.೩೪ರಷ್ಟು ಅತ್ಯಂತ ಕಡಿಮೆ ಪ್ರತಿರೋಧಿಸಿರುವ ಪ್ರಮಾಣ ಶೇ. ೬೦ರಷ್ಟಿರುವುದು ಇಷ್ಟೊಂದು ದುಸ್ಥಿತಿಯಲ್ಲಿ ಒಂದು ಅಂಶವಾಗಿದೆ.

**ಸಂಘರ್ಷಣೆಗಳಿಗೆ ಪರಿಹಾರದ ಬಗೆಗಿನ ದೃಷ್ಟಿಕೋನ (ಸೂಚಿ)**

ಅಸ್ಪೃಶ್ಯರ ಮೇಲೆ ನಡೆಯುವ ದೌರ್ಜನ್ಯಗಳಾಗಿವೆ. ಅಂದರೆ ದಲಿತರಿಗೆ ಅವರ ಸ್ಥಾನಮಾನಗಳನ್ನು ನೆನಪಿಟ್ಟುಕೊಳ್ಳಲು ಬೇರೆಯವರು ಕೊಡುವ ಎಚ್ಚರಿಕೆಗಳಾಗಿರುತ್ತವೆ. ಅಂದರೆ, ಸಂಘರ್ಷಗಳು ದೌರ್ಜನ್ಯಗಳು ಎಷ್ಟರಮಟ್ಟಿಗೆ ಪರಿಹಾರ ಹೇಗೆ ಆಗಬಹುದು ಎಂಬುದನ್ನು ತಿಳಿಯಬೇಕಾಗಿದೆ. ನೀರಿನ ತಾರತಮ್ಯ, ಆರೋಗ್ಯ ತಾರತಮ್ಯ ಮತ್ತು ಶೈಕ್ಷಣಿಕ ತಾರತಮ್ಯ, ಸಾಮಾಜಿಕ ಆರ್ಥಿಕ ಸ್ಥಿತಿಗಳಿಗೆ ಸಂಬಂಧಿಸಿದಂತಹ ಆಚರಣೆಗಳಿಗೆ ಸಮರ್ಪಕವಾದ ಪರಿಹಾರ ಕಂಡುಕೊಳ್ಳುವುದು ಸಂಘರ್ಷಗಳಿಗೆ ಪರಿಹಾರದ ಬಗೆಗಿನ ದೃಷ್ಟಿಕೋನ ಮೂರನೇ ಒಂದು ಭಾಗದಷ್ಟು ಸಂದರ್ಭಗಳಲ್ಲಿ ಸಮರ್ಪಕವಾಗಿ ಪರಿಹರಿಸಲಾಗಿದೆ ಎಂದು ಅಧ್ಯಯನಗಳು ಹೇಳುತ್ತವೆ. ಬಹುಪಾಲು ಜನರಿಗೆ ಇದು ಸಮರ್ಪಕವಾಗಿ ಪರಿಹಾರವಾದಂತಿಲ್ಲ. ನಕರಾತ್ಮಕ ಆಚರಣೆಗಳು ಸೇವೆಗಳು ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ವಲಯಗಳಲ್ಲಿ ಇಂದಿಗೂ ಪ್ರಚಲಿತದಲ್ಲಿದ್ದು, ಕೆಲವೊಂದು ಸಂದರ್ಭಗಳಲ್ಲಿ ಅವುಗಳನ್ನು ಪೂರಕವಾಗಿ ಪರಿಹರಿಸಲಾಗಿದೆ. ಏಕೆಂದರೆ ಸ್ಥಳೀಯ ಜನರು ಮಾನವೀಯ ಸಂಬಂಧಗಳ ವಲಯಗಳಲ್ಲಿ ಬದಲಾಗುತ್ತಿರುವ ಸ್ಥಿತಿಗತಿಗಳಿಗೆ ಅನುಗುಣವಾಗಿ ಹೊಂದಿ ಕಲಿಯಬೇಕಾಗಿದೆ.

ಈ ಸೂಚಿಯು ಪ್ರತಿಭಟನೆಯ ಪರಿಣಾಮ ಅಥವಾ ಸಮಸ್ಯೆಯ ಪರಿಹಾರ ಹೇಗಾಗಿದೆ ಎನ್ನುವುದನ್ನು ನಾಲ್ಕು ಮಾಪನ ಮೂಲಕ ಗೋಚರವಾಗುತ್ತದೆ.

೧. ಸಮಸ್ಯೆಗಳನ್ನು ಪರಿಹಾರ ಮಾಡದೆ ಮುಂದೂಡುವುದು.

೨. ಮೇಲ್ಜಾತಿಗಳಿಗೆ ಅನುಕೂಲವಾಗುವ ರೀತಿಯಲ್ಲಿ ಪರಿಹರಿಸುವುದು.

೩. ದಲಿತರಿಗೆ ಅನುಕೂಲವಾಗುವ ರೀತಿಯಲ್ಲಿ ಪರಿಹರಿಸುವುದು.

೪. ಎಲ್ಲರಿಗೂ ಅನುಕೂಲವಾಗುವ ರೀತಿಯಲ್ಲಿ ಪರಿಹರಿಸುವುದು.

ಇಲ್ಲಿ ಮೇಲಿನ ಸಮಸ್ಯೆಗಳನ್ನು ದಲಿತರಿಗೆ ಸಮಾಧಾನ ತರುವ ರೀತಿಯಲ್ಲಿ ಪರಿಹರಿಸಲಾಗಿದೆ ಎನ್ನುವ ಅಂಶವನ್ನು ಪರಿಗಣಿಸಲಾಗಿದೆ.

ಸಾಮಾಜಿಕ ಮತ್ತು ಆರ್ಥಿಕ ಘರ್ಷಣೆಗೆ ಪರಿಹಾರಗಳು ದಲಿತೇತರ ತಾರತಮ್ಯದ ಆಚರಣೆಗಳು ಇವುಗಳನ್ನು ಇನ್ನೂ ಸಾಧಿಸಬೇಕಾಗಿದೆ. ಏಕೆಂದರೆ ಅತ್ಯಂತ ಗೌಣವಾದ ಸಂಖ್ಯೆಯಲ್ಲಿನ ದಲಿತರು ಅವುಗಳು ಸಮರ್ಪಕವಾದ ರೀತಿಯಲ್ಲಿ ಪರಿಹರಿಸಲ್ಪಟ್ಟಿದೆ ಎಂದು ಭಾವಿಸುತ್ತಾರೆ. ಅಂದರೆ ಸರಿಸುಮಾರು ಶೇ. ೯೫ರಷ್ಟು ಬಹುಸಂಖ್ಯೆಯ ದಲಿತರು ಈ ಸಮಸ್ಯೆಗಳು ಪರಿಹರಿಸಲ್ಪಟ್ಟಿಲ್ಲ ಎಂದು ಅಧ್ಯಯನಗಳಲ್ಲಿ ವ್ಯಕ್ತವಾಗುತ್ತದೆ.

ಎಲ್ಲಿಯವರೆಗೂ ನ್ಯಾಯಿಕ, ರಾಜಕೀಯ, ಆಡಳಿತ ವರದಿಗಳಲ್ಲಿ ನ್ಯಾಯ ಸಿಗುವುದಿಲ್ಲವೂ ಅಲ್ಲಿಯವರೆಗೂ ದಲಿತರಿಗೆ ಸೂಕ್ತ ಪರಿಹಾರ ದೊರಕದು.

**ಕೋಷ್ಟಕ ೫.೧೪. ಸಂಘರ್ಷಗಳಿಗೆ ಪರಿಹಾರ ಬಗೆಗಿನ ಸೂಚ್ಯಂಕ**

| ಕ್ರ.ಸಂ | ಶ್ರೇಣಿ | ಜಿಲ್ಲೆಗಳು ಮತ್ತು ಸೂಚ್ಯಂಕ | ಶೇಕಡವಾರು |
|---|---|---|---|
| ೧ | ಅತ್ಯುತ್ತಮ ಶ್ರೇಣಿ ೦.೮೦-೧.೦೦ | ದಕ್ಷಿಣ ಕನ್ನಡ(೧.೦೦), ಚಾಮರಾಜ ನಗರ (೧.೦೦), ಮಂಡ್ಯ(೧.೦೦), ಬೆಂ.ಗ್ರಾಮಾ(೧.೦೦), ಉಡುಪಿ(೦.೯೦), ಬೆಂ.ನಗರ(೦.೮೦) | ೨೦% |
| ೨ | ಉತ್ತಮ ಶ್ರೇಣಿ ೦.೬-೦.೭೯ | ಬಾಗಲಕೋಟೆ(೦.೭೦), ಧಾರವಾಡ(೦.೭೦) | ೬.೬೭% |
| ೩ | ಸರಾಸರಿ ೦.೪-೦.೫೯ | ವಿಜಯಪುರ(೦.೫೦), ಹಾಸನ(೦.೫೦), ಕಲಬುರ್ಗಿ (೦.೪೦), ಬೆಳಗಾವಿ(೦.೪೦), ಕೋಲಾರ(೦.೪೦), ಚಿಕ್ಕಮಗಳೂರು(೦.೪೦), ಕೊಡಗು(೦.೪೦) | ೨೩.೩೩% |
| ೪ | ಸರಾಸರಿಗಿಂತ ಕಡಿಮೆ <೦.೪ | ಚಿತ್ರದುರ್ಗ(೦.೩೯), ಬಳ್ಳಾರಿ(೦.೩೦), ಗದಗ(೦.೩೦), ಹಾವೇರಿ(೦.೩೦), ಮೈಸೂರು (೦.೩೦), ರಾಮನಗರ (೦.೨೦), ಚಿಕ್ಕಬಳ್ಳಾಪುರ (೦.೧೫), ಬೀದರ್(೦.೧೦), ದಾವಣಗೆರೆ(೦.೧೦) ಕೊಪ್ಪಳ(೦.೦೦), ರಾಯಚೂರು (೦.೦೦), ಯಾದಗಿರಿ(೦.೦೦), ಉ.ಕನ್ನಡ(೦.೦೦), ತುಮಕೂರು(೦.೦೦), ಶಿವಮೊಗ್ಗ(೦.೦೦) | ೫೦% |
| | | ಒಟ್ಟು= | ೧೦೦ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)

**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಮೇಲಿನ ಕೋಷ್ಟಕದ ಅಂಕಿ ಅಂಶಗಳು ಗಮನಿಸಿದಾಗ ೧೪ ಜಿಲ್ಲೆಗಳಲ್ಲಿ ಸರಾಸರಿಗಿಂತ ಕಡಿಮೆ ಇದೆ ಅಂದರೆ ಶೇ. ೫೦ರಷ್ಟು ದಲಿತರಿಗೆ ಸಮಾಧಾನ ತರುವ ರೀತಿಯಲ್ಲಿ ಪರಿಹಾರ ಆಗಿಲ್ಲ ಎಂದು ವ್ಯಕ್ತವಾಗುತ್ತದೆ. ಹಾಗೂ ಸರಾಸರಿ ಶೇ. ೨೩.೩೪ರಷ್ಟಿದೆ ಉತ್ತಮ ಶ್ರೇಣಿ ಕೇವಲ ಶೇ. ೬.೬೭ರಷ್ಟು ಅತ್ಯುತ್ತಮ ಶ್ರೇಣಿ ಶೇ. ೨೦ರಷ್ಟಿರುವುದು ಕಂಡು ಬರುತ್ತದೆ. ಒಟ್ಟಾರೆಯಾಗಿ ದಲಿತರು ಈ ಅಂಕಿ ಅಂಶಗಳಿಂದ ಅಸಮಾಧಾನದಲ್ಲಿ ಮತ್ತು ಕೆಳಮಟ್ಟದಲ್ಲಿರುವುದು ವ್ಯಕ್ತವಾಗುತ್ತದೆ.

## ಸ್ವಾತಂತ್ರ್ಯದ ಪರಿಗ್ರಹಣೆ ಸೂಚ್ಯಂಕ

ಯಾರಿಗೆ ಬಂತು ಎಲ್ಲಿಗೆ ಬಂತು ನಲ್ವತ್ತೇಳರ ಸ್ವಾತಂತ್ರ್ಯ ಎನ್ನುವ ಅನುಭವ ಬಹಳ ಮುಖ್ಯವಾದ ಸಂಗತಿ ಪರಿಭಾವನೆ ದಲಿತರ ಬದುಕಿನಲ್ಲಿ ಎಷ್ಟರಮಟ್ಟಿಗೆ ಅನ್ವಯವಾಗುತ್ತದೆ ಎಂಬುದು ಸಹ ಮುಖ್ಯವಾಗುತ್ತದೆ. ಸ್ವಾತಂತ್ರ್ಯವನ್ನು ಎಲ್ಲರೂ ಅದರಲ್ಲೂ ಪಿರಮಿಡ್‌ನ ಬುಡದಲ್ಲಿರುವವರು ಅನುಭವಿಸುತ್ತಿದ್ದಾರೆ ಎನ್ನುವುದನ್ನು ಈ ಸೂಚ್ಯಂಕ ಮಾಪನ ಮಾಡುತ್ತದೆ.

ಬಹುತೇಕ ಸಂದರ್ಭಗಳಲ್ಲಿ ವಾಕ್‌ಸ್ವಾತಂತ್ರ್ಯ, ಅಭಿವ್ಯಕ್ತಿ ಹಾಗೂ ಸಾಂಸ್ಕೃತಿಕ ಸ್ವಾತಂತ್ರ್ಯದ ಸುತ್ತಸುತ್ತುತ್ತಿದೆ. ಅಂದರೆ ತಳಸ್ತರದಲ್ಲಿ ವ್ಯಕ್ತಿ ಮಾನ-ಸಮ್ಮಾನದಿಂದ ಬದುಕಲು ಇವಿಷ್ಟು ಸಾಲದು. ಸ್ವಾತಂತ್ರ್ಯದ ಚರ್ಚೆಯನ್ನು ವಿಸ್ತರಿಸಿ ತಳಸ್ತರದ ವ್ಯಕ್ತಿಗಳ ದಿನನಿತ್ಯದ ಬದುಕಿನ ಪ್ರಶ್ನೆಯೊಂದಿಗೆ ನೇರ ಸಂಬಂಧ ಇರುವ ಸಂಗತಿಗಳೊಂದಿಗೆ ಜೋಡಿಸುವ ಅಗತ್ಯವಿದೆ. ಇಂತಹ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ಈ ಸೂಚಿಯನ್ನು ನಿರ್ಧರಿಸಲು ೫ ಅಂಶಗಳನ್ನು (ಸೂಚಿ) ಬಳಸಲಾಗಿದೆ.

೧. ತಮಗಾಗುವ ಎಲ್ಲ ಅನ್ಯಾಯಗಳನ್ನು ಪ್ರಶ್ನಿಸುವ ಸ್ವಾತಂತ್ರ್ಯ ದಲಿತರಿಗಿದೆಯೇ?

೨. ತಮಗಾಗುವ ಎಲ್ಲ ತಾರತಮ್ಯಗಳನ್ನು ಪ್ರಶ್ನಿಸುವ ಸ್ವಾತಂತ್ರ್ಯ ದಲಿತರಿಗಿದೆಯೇ?

೩. ದಲಿತೇತರರು ಎಲ್ಲ ಪ್ರದೇಶಗಳಲ್ಲಿ ಓಡಾಡುವ ಸ್ವಾತಂತ್ರ್ಯ ಇದೆಯೇ?

೪. ದಲಿತೇತರರು ಲಭ್ಯವಾಗುವ ಎಲ್ಲ ಉದ್ಯೋಗದ ಅವಕಾಶಗಳನ್ನು ಪಡೆಯುವ ಸ್ವಾತಂತ್ರ್ಯ ದಲಿತರಿಗಿದೆಯೇ?

೫. ದಲಿತೇತರರಂತೆ ಊರಿನ ಎಲ್ಲ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವ ಸ್ವಾತಂತ್ರ್ಯ ದಲಿತರಿಗಿದೆಯೇ?

ಸಮೀಕ್ಷೆಗಳ ಪ್ರಕಾರ ಗ್ರಾಮಕ್ಕೆ ಕಾರ್ಮಿಕರ ಅವಶ್ಯಕತೆ ಹೆಚ್ಚಾಗಿದ್ದು, ದಲಿತರಿಗೆ ಎಲ್ಲಾ ರೀತಿ ಉದ್ಯೋಗಗಳ ದೊರಕುತ್ತಿಲ್ಲ. ಸರಿಸುಮಾರು ಶೇ. ೩೯ರಷ್ಟು ದಲಿತರು ತಮ್ಮ ಗ್ರಾಮದಲ್ಲಿ ನಡೆಯುವ ಎಲ್ಲಾ ರೀತಿಯ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಬೇಕೆಂದು ಭಾವಿಸುತ್ತಾರಾದರೂ ಶೇ. ೬೧ರಷ್ಟು ದಲಿತರು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ಸಾಧ್ಯವೇ ಆಗುವುದಿಲ್ಲ. ಇಂದಿಗೂ ದಲಿತರಿಗೆ ಸಿನಿಮಾ ರಂಗ, ನಾಟಕ ರಂಗ, ಟಿ.ವಿ. ಮಾಧ್ಯಮ, ದಕ್ಕದೇ ಗಗನ ಕುಸುಮವಾಗಿದೆ. ಬಹುತೇಕ ದಲಿತರು ಗ್ರಾಮಗಳಲ್ಲಿ ಸ್ವತಂತ್ರವಾಗಿ ಸಂಚರಿಸುವಂತಿಲ್ಲ. ಅದರಲ್ಲೂ

ವಿಶೇಷವಾಗಿ ಗೊಲ್ಲರಹಟ್ಟಿಗೆ ಒಳಗೆ ಹೋಗುವಂತಿಲ್ಲ ಮತ್ತು ಇದನ್ನು ಸಾಮಾಜಿಕ ಕೊಡುಗೆ ಎಂದು ಪರಿಗಣಿಸಲಾಗಿದೆ. ಉದಾಹರಣೆಗೆ ಚಿತ್ರದುರ್ಗ ಜಿಲ್ಲೆಯ ಅಧ್ಯಯನ ವರದಿಯಲ್ಲಿ ಗೊಲ್ಲರಹಟ್ಟಿಗೆ ಪ್ರವೇಶವಿಲ್ಲ; ದಲಿತರು ಪ್ರತಿಭಟನೆ ನಡೆಸಿದರೂ ಉಳಿದ ಶೇ. ೫೩ರಷ್ಟು ಮಂದಿ ಇಂತಹ ತಾರತಮ್ಯದ ವಿರುದ್ಧ ಪ್ರತಿಭಟನೆಯಲ್ಲಿ ಪಾಲ್ಗೊಳ್ಳುತ್ತಿಲ್ಲ.

ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಿದ್ಧತೆ ನಡೆಸುವ ಸಂದರ್ಭಗಳಲ್ಲಿ ತೇರು, ಜಾತ್ರೆ, ಊರ ಹಬ್ಬಗಳಂತಹ ಸಂದರ್ಭದಲ್ಲಿ ದಲಿತೇತರರು ದಲಿತರ ಶ್ರಮ ಮತ್ತು ಕೌಶಲ್ಯವನ್ನು ಅವಲಂಬಿಸಿದ್ದಾರೆ. ಗೋಚರವಾಗುವ ಪರಿಭಾವನೆಗಳೆಂದರೆ ಇಂದಿಗೂ ಸಹ ಬಹುಪಾಲು ಜನರು ಗ್ರಾಮೀಣದಲ್ಲಿ ವೈಯಕ್ತಿಕ ಸ್ವಾತಂತ್ರ್ಯವನ್ನು ಸಾಧಿಸಲು ಸಾಧ್ಯವಿಲ್ಲ.

**ಕೋಷ್ಟಕ ೫.೧೫. ಸ್ವಾತಂತ್ರ್ಯದ ಪರಿಗ್ರಹಣೆ ಸೂಚ್ಯಂಕ**

| ಕ್ರ.ಸಂ | ಶ್ರೇಣಿ | ಜಿಲ್ಲೆಗಳು ಮತ್ತು ಸೂಚ್ಯಂಕ | ಶೇಕಡವಾರು |
|---|---|---|---|
| ೧ | ಅತ್ಯುತ್ತಮ ಶ್ರೇಣಿ ೦.೮೦-೧.೦೦ | ಬೆಂ.ನಗರ(೧.೦೦), ತುಮಕೂರು(೧.೦೦), ಶಿವಮೊಗ್ಗ(೧.೦೦), ಮಂಡ್ಯ(೧.೦೦), ಚಾಮರಾಜನಗರ(೧.೦೦), ಯಾದಗಿರಿ(೦.೮೦), | ೨೩.೩೪ |
| ೨ | ಉತ್ತಮ ಶ್ರೇಣಿ ೦.೬-೦.೭೯ | ದ.ಕನ್ನಡ(೦.೭೦), ರಾಯಚೂರು(೦.೬೦), ಧಾರವಾಡ(೦.೬೦), ಹಾವೇರಿ(೦.೬೦), ಉಡುಪಿ(೦.೬೦) | ೧೬.೬೬ |
| ೩ | ಸರಾಸರಿ ೦.೪-೦.೫೯ | ಕೊಪ್ಪಳ(೦.೫೦), ಕಲ್ಬುರ್ಗಿ(೦.೪೦), ಉ.ಕನ್ನಡ(೦.೪೦), ಹಾಸನ(೦.೪೦) | ೧೩.೩೪ |
| ೪ | ಸರಾಸರಿಗಿಂತ ಕಡಿಮೆ <೦.೪ | ದಾವಣಗೆರೆ(೦.೩೩), ಮೈಸೂರು(೦.೩೦), ಬೀದರ್(೦.೩೦), | ೪೬.೬೬ |
| | | ಒಟ್ಟು= | ೧೦೦ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)

**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಮೇಲಿನ ಕೋಷ್ಟಕದ ಅಂಕಿ ಅಂಶಗಳನ್ನು ಗಮನಿಸಿದಾಗ ಕರ್ನಾಟಕ ರಾಜ್ಯದ ಒಟ್ಟು ೩೦ ಜಿಲ್ಲೆಗಳಲ್ಲಿ ದಲಿತರ ಸ್ವಾತಂತ್ರ್ಯ ಪರಿಗ್ರಹಣೆ ಶೇ. ೪೬.೬೭ರಷ್ಟು ಸರಾಸರಿಗಿಂತ ಕಡಿಮೆ ಸರಾಸರಿ ಶೇ. ೧೩.೩೪, ಉತ್ತಮ ಶ್ರೇ. ೧೬.೬೭, ಅತ್ಯುತ್ತಮ ಶ್ರೇಣಿ ಶೇ. ೨೩.೩೪ರಷ್ಟು ಇರುವುದು

ಕಂಡು ಬರುತ್ತದೆ. ಒಟ್ಟಾರೆಯಾಗಿ ಮಾನವ ಅಭಿವೃದ್ಧಿಯ ವರದಿಯಲ್ಲಿ ಸ್ವಾತಂತ್ರ್ಯ ಪರಿಭಾವನೆಯು ಸಾಧಾರಣ ಹಂತದಲ್ಲಿ ಇದೆ ಎಂಬ ತೀರ್ಮಾನಕ್ಕೆ ಬರಬಹುದು.

## ದಲಿತ ಅಭಿವೃದ್ಧಿಯ ಲಿಂಗ ಸಂಬಂಧಿ ಸೂಚ್ಯಂಕ

ದಲಿತರ ಅಭಿವೃದ್ಧಿಗೆ ಸಂಬಂಧಿಸಿದಂತಹ ಲಿಂಗ ಆಯಾಮ ಕುರಿತಂತೆ ಕೆಲವು ಸಂಗತಿಗಳನ್ನು ತಿಳಿಯಬಹುದು.

೧. ಮಹಿಳೆಯರು ಗರ್ಭಾವಸ್ಥೆಯಲ್ಲಿರುವಾಗ ಹೆರಿಗೆ ಪೂರ್ವ ಮತ್ತು ಹೆರಿಗೆ ನಂತರ ಮಹಿಳೆಗೆ ಕನಿಷ್ಠ ಮೂರು ತಿಂಗಳ ವಿಶ್ರಾಂತಿ ಬೇಕೆನ್ನುವುದರ ಬಗ್ಗೆ ಖಚಿತತೆಯಿದೆ ಅಥವಾ ಇಲ್ಲ. ಹೆರಿಗೆ ಮುನ್ನ ಗರ್ಭಿಣಿ ಮಹಿಳೆ ಕೆಲವೊಂದು ಜಾಗ್ರತೆಗಳನ್ನು ವಹಿಸಬೇಕೆಂದು ವೈದ್ಯರು ಸೂಚಿಸಿರುತ್ತಾರೆ. ಅದರ ಬಗ್ಗೆ ಎಷ್ಟರಮಟ್ಟಿಗೆ ಅರಿವು ಇದೆ.

೨. ಶಿಶುವಿನ ಜನನ ಎಲ್ಲಿ ನಡೆಯುತ್ತದೆ ಮತ್ತು ಆರೋಗ್ಯ ತಪಾಸಕರು ಸಹಾಯಕರು ತಿಂಗಳಿನಲ್ಲಿ ಎಷ್ಟು ಬಾರಿ ಅವರನ್ನು ಪರಿಶೀಲಿಸುತ್ತಾರೆ.

೩. ಗರ್ಭಾವಸ್ಥೆಯಲ್ಲಿರುವ ದಲಿತ ಮಹಿಳೆಯರಿಗೆ ಯಾವ ರೀತಿಯ ಸಹಕಾರ ಕುಟುಂಬದಿಂದ ಸಿಗುತ್ತದೆ.

೪. ದಿನಕ್ಕೆ ಎಷ್ಟು ಲೀಟರ್ ನೀರು ಸಿಗುತ್ತದೆ ಎಂಬ ಅಂಶ ಕೂಡ ಮುಖ್ಯ

೫. ಗರ್ಭಿಣಿ ಹೆಂಗಸರು ಕಬ್ಬಿಣದ ಅಂಶ ಮತ್ತು ಇತರ ಪೌಷ್ಠಿಕಾಂಶಗಳ ಕೊರತೆ ಅನುಭವಿಸುತ್ತಿದ್ದಾರೆ. ಈ ಕೊರತೆಯನ್ನು ಭರಿಸಲು ಸರಕಾರ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಇಂತಹ ಸವಲತ್ತುಗಳು ಎಷ್ಟರಮಟ್ಟಿಗೆ ದಲಿತ ಮಹಿಳೆಯರಿಗೆ ತಲುಪಿದೆ ಎನ್ನುವ ಅಂಶವನ್ನು ಪರಿಗಣಿಸಲಾಗಿದೆ.

**ಕೋಷ್ಟಕ ೫.೧೬. ದಲಿತ ಅಭಿವೃದ್ಧಿಯ ಲಿಂಗ ಸಂಬಂಧಿ ಸೂಚ್ಯಂಕ**

| ಕ್ರ.ಸಂ | ಶ್ರೇಣಿ | ಜಿಲ್ಲೆಗಳು ಮತ್ತು ಸೂಚ್ಯಂಕ | ಶೇಕಡವಾರು |
|---|---|---|---|
| ೧ | ಅತ್ಯುತ್ತಮ ಶ್ರೇಣಿ ೦.೮೦-೧.೦೦ | ಹಾಸನ(೦.೯೦), ಮೈಸೂರು(೦.೮೦), ಚಿಕ್ಕಮಗಳೂರು(೦.೮೦) | ೧೦ |
| ೨ | ಉತ್ತಮ ಶ್ರೇಣಿ ೦.೬-೦.೭೯ | ಕೊಪ್ಪಳ(೦.೭೦), ಯಾದಗಿರಿ(೦.೭೦), ದಾವಣಗೆರೆ(೦.೭೦), ಬೆಂ.ನಗರ(೦.೭೦), ಬೆಳಗಾವಿ(೦.೬೦), ಉ.ಕನ್ನಡ(೦.೬೦), ತುಮಕೂರು(೦.೬೦), ಶಿವಮೊಗ್ಗ(೦.೬೦), ಉಡುಪಿ(೦.೬೦), ದ.ಕನ್ನಡ(೦.೬೦), ಕೊಡಗು(೦.೬೦) | ೩೬.೬೭ |

| | | | |
|---|---|---|---|
| ೩ | ಸರಾಸರಿ ೦.೪-೦.೫೯ | ಬಳ್ಳಾರಿ(೦.೫೦), ಬೆಂ.ಗ್ರಾಮಾ(೦.೫೦), ಬೀದರ್(೦.೪೦), ಕಲ್ಬುರ್ಗಿ(೦.೪೦), ರಾಯಚೂರು(೦.೪೦), ಕೋಲಾರ(೦.೪೦), ರಾಮನಗರ(೦.೪೦), ಮಂಡ್ಯ(೦.೪೦), ಚಾಮರಾಜನಗರ(೦.೪೦) | ೩೦ |
| ೪ | ಸರಾಸರಿಗಿಂತ ಕಡಿಮೆ <೦.೪ | ಚಿತ್ರದುರ್ಗ(೦.೩೬),ಗದಗ(೦.೩೦),ಧಾರವಾಡ(೦.೩೦), ಹಾವೇರಿ(೦.೩೦),ಚಿಕ್ಕಬಳ್ಳಾಪುರ(೦.೩೦), ಬಾಗಲಕೋಟೆ(೦.೨೦),ವಿಜಯಪುರ(೦.೨೦) | ೨೩.೩೩ |
| | | ಒಟ್ಟು= | ೧೦೦ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)
**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಮೇಲಿನ ಕೋಷ್ಟಕದ ಅಂಕಿ ಅಂಶಗಳನ್ನು ಗಮನಿಸಿದಾಗ ಕರ್ನಾಟಕ ರಾಜ್ಯದ ಜನಸಂಖ್ಯೆಯಲ್ಲಿ ಶೇ ಅರ್ಧದಷ್ಟು ಮಹಿಳೆಯರಿದ್ದು, ಲಿಂಗಾನುಪಾತ ಕಡಿಮೆ ಇರುವುದು ಕಂಡುಬರುತ್ತದೆ. ದಲಿತ ಮಹಿಳೆ ಎಲ್ಲರಿಗಿಂತ ಕಟ್ಟಕಡೆಯವಳಾಗಿ ಶೋಷಿತಳಾಗಿರುವುದು ನಿಜ. ದಲಿತ ಲಿಂಗ ಆಯಾಮದಲ್ಲಿ ಮಹಿಳೆಯು ಯಾವ ಸ್ಥಾನದಲ್ಲಿ ನಿಂತಿದ್ದಾಳೆ ಎಂಬುದು ಕೂಡ ಮುಖ್ಯ. ದಲಿತ ಶೋಷಿತ ಮಹಿಳೆ ತಾನು ಗರ್ಭಧರಿಸಿ ಜನ್ಮ ನೀಡುವ ಸಂದರ್ಭಗಳಲ್ಲಿ ಎದುರಿಸುವ ಸಮಸ್ಯೆಗಳು ಮತ್ತು ವೇದನೆಗಳು ಹೇಳತೀರದು. ಸರಾಸರಿಗಿಂತ ಕಡಿಮೆ ರಾಜ್ಯದಲ್ಲಿ ಶೇ. ೨೩.೩೪ರಷ್ಟು ಸರಾಸರಿ ಶೇ. ೩೦.೦೦, ಉತ್ತಮ ಶ್ರೇಣಿ ಶೇ. ೩೬.೬೭ರಷ್ಟು, ಅತ್ಯುತ್ತಮ ಶ್ರೇಣಿ ಶೇ. ೧.೧೦ರಷ್ಟು ಇರುವುದು ಗೋಚರವಾಗುತ್ತದೆ. ಇಂದಿಗೂ ಈ ದಲಿತ ಮಹಿಳೆಯರು ಶೋಷಣೆಯಿಂದ ಮುಕ್ತರಾಗಿಲ್ಲ. ಕೆಳಮಟ್ಟದ ಸೂಚಿ ಹೊಂದಿರುವುದು ಅತ್ಯಂತ ವಿಷಾದನೀಯ ಸಂಗತಿಯಾಗಿದೆ.

### ಜೀವನ ಮಟ್ಟ ಸೂಚ್ಯಂಕ

ದಲಿತರ ಆರ್ಥಿಕಾಭಿವೃದ್ಧಿಯನ್ನು ಮಾಪನ ಮಾಡಲು ಈ ಕೆಳಗಿನ ಸೂಚ್ಯಂಕಗಳನ್ನು ಬಳಸಲಾಗಿದೆ. ಪಕ್ಕ ಮನೆಗಳು, ಭೂಹಿಡುವಳಿ, ಕೃಷಿಯೇತರ ಚಟುವಟಿಕೆಗಳು, ವಿದ್ಯುತ್ ಸಂಪರ್ಕ, ಮೋಟರ್ ಬೈಕ್/ಸ್ಕೂಟರ್ ಹೊಂದಿರುವುದು- ಇವೆಲ್ಲವನ್ನು ಊರಲ್ಲಿರುವ ದಲಿತ ಹಾಗೂ ದಲಿತೇತರ ಅನುಪಾತಕ್ಕೆ ಹೋಲಿಸಿ ಮಾಪನ ಮಾಡಲಾಗಿದೆ. ಊರಲ್ಲಿ ದಲಿತೇತರರ ಮತ್ತು ದಲಿತ ಕುಟುಂಬಗಳು ೭೦:೩೦ ಅನುಪಾತದಲ್ಲಿದ್ದಾಗ ಮೇಲಿನ ಎಲ್ಲ ಸವಲತ್ತುಗಳು ೭೦:೩೦

ಅನುಪಾತದಲ್ಲಿರಬೇಕು. ದಲಿತರ ಆಸ್ತಿಪಾಸ್ತಿಗಳು ಈ ಅನುಪಾತಕ್ಕಿಂತ ಕಡಿಮೆ ಇದ್ದರೆ ದಲಿತರ ಜೀವನ ಮಟ್ಟ ಕಡಿಮೆ ಇದೆಯೆಂದು ಪರಿಗಣಿಸಲಾಗುವುದು.

**ಕೋಷ್ಟಕ ೫.೧೭. ಜೀವನಮಟ್ಟ ಸೂಚ್ಯಂಕ**

| ಕ್ರಸಂ | ಶ್ರೇಣಿ | ಜಿಲ್ಲೆಗಳು ಮತ್ತು ಸೂಚ್ಯಂಕ | ಶೇಕಡವಾರು |
|---|---|---|---|
| ೧ | ಅತ್ಯುತ್ತಮ ಶ್ರೇಣಿ ೦.೮೦-೧.೦೦ | ಉ.ಕನ್ನಡ(೧.೦೦), ದ.ಕನ್ನಡ(೧.೦೦), ಕೊಡುಗು(೧.೦೦), ಬೆಳಗಾವಿ(೦.೮೦), ಕೋಲಾರ(೦.೮೦), ಉಡುಪಿ(೦.೮೦) | ೨೦ |
| ೨ | ಉತ್ತಮ ಶ್ರೇಣಿ ೦.೬-೦.೭೯ | ಕೊಪ್ಪಳ(೦.೭೦), ಹಾಸನ(೦.೭೦), ಕಲ್ಬುರ್ಗಿ(೦.೬೦), ಬೆಂ.ಗ್ರಾಮಾ(೦.೬೦), ಮೈಸೂರು(೦.೬೦) | ೧೬.೬೭ |
| ೩ | ಸರಾಸರಿ ೦.೪-೦.೫೯ | ಗದಗ(೦.೫೦), ಬೆಂ.ನಗರ(೦.೫೦), ಚಿಕ್ಕಮಗಳೂರು(೦.೫೦), ಬೀದರ್(೦.೪೦), ಧಾರವಾಡ(೦.೪೦), ತುಮಕೂರು(೦.೪೦) | ೨೦ |
| ೪ | ಸರಾಸರಿಗಿಂತ ಕಡಿಮೆ <೦.೪ | ದಾವಣಗೆರೆ(೦.೩೩), ಬಾಗಲಕೋಟೆ(೦.೩೦), ವಿಜಯಪುರ(೦.೩೦), ಮಂಡ್ಯ(೦.೩೦), ಚಿತ್ರದುರ್ಗ(೦.೨೪), ಬಳ್ಳಾರಿ(೦.೨೦), ರಾಯಚೂರು(೦.೨೦), ಯಾದಗಿರಿ(೦.೨೦), ಹಾವೇರಿ(೦.೨೦), ಶಿವಮೊಗ್ಗ(೦.೨೦), ಚಾಮರಾಜನಗರ(೦.೧೦), ರಾಮನಗರ(೦.೦೦), ಚಿಕ್ಕಬಳ್ಳಾಪುರ(೦.೦೦) | ೪೩.೩೩ |
| | | ಒಟ್ಟು= | ೧೦೦ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)
**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಮೇಲಿನ ಕೋಷ್ಟಕದಲ್ಲಿ ವ್ಯಕ್ತವಾದಂತೆ ಸರಾಸರಿಗಿಂತ ಕಡಿಮೆ ಇರುವ ದಲಿತ ಜೀವನ ಮಟ್ಟ ಸೂಚ್ಯಂಕ ೪೩.೩೩% ರಷ್ಟಿರುವುದು ಕಂಡುಬರುತ್ತದೆ. ಇಲ್ಲಿ ಸರಿಸುಮಾರು ೧೩ ಜಿಲ್ಲೆಗಳ ದಲಿತರ ಬದುಕು ಸರಾಸರಿಗಿಂತ ಕಡಿಮ ವ್ಯಕ್ತವಾಗುತ್ತದೆ. ಸರಾಸರಿ ಶೇ. ೨೦ ಮತ್ತು ಉತ್ತಮ ಶ್ರೇಣಿ ಶೇ. ೧೬.೬೭ ಅತ್ಯುತ್ತಮ ಶ್ರೇಣಿ ಶೇ. ೨೦ರಷ್ಟಿರುವುದು ಸಂಖ್ಯೆಯ ಪ್ರಮಾಣದಲ್ಲಿ ಕಡಿಮೆ ಇದ್ದು ಅಭಿವೃದ್ಧಿಯ ಮಟ್ಟವನ್ನು ಇದು ತಿಳಿಹೇಳುತ್ತದೆ. ಇದರಿಂದ ಸಾಬೀತು ಆಗುವುದೇನೆಂದರೆ ದಲಿತ ಜೀವನಮಟ್ಟ ಅತ್ಯಂತ ಕೆಳಮಟ್ಟದಲ್ಲಿರುವುದು ಮತ್ತು ಮಾನವ ಅನಭಿವೃದ್ಧಿ ಮಾಹಿತಿಯನ್ನು ಎತ್ತಿ ತೋರಿಸುತ್ತದೆ.

## ಮೂಲ ಸೌಲಭ್ಯಗಳ ಲಭ್ಯತೆಯ ಸೂಚ್ಯಂಕ

ಕುಡಿಯುವ ನೀರು, ಶೌಚಾಲಯ, ಚರಂಡಿ ವ್ಯವಸ್ಥೆ ಇವೆಲ್ಲವನ್ನು ಮೂಲಸೌಕರ್ಯಗಳೆಂದು ಪರಿಗಣಿಸಲಾಗಿದೆ. ಎಲ್ಲ ಊರುಗಳಲ್ಲಿ ಮತ್ತು ಪಟ್ಟಣಗಳಲ್ಲಿ ಈ ಮೂಲಸೌಕರ್ಯಗಳು ಅನುಕೂಲಸ್ಥರು ಇರುವ ಪ್ರದೇಶಗಳಲ್ಲಿ ಇಲ್ಲ. ಈ ಮೂಲಸೌಕರ್ಯಗಳು ಗ್ರಾಮೀಣ ಪ್ರದೇಶಗಳ ಊರಲ್ಲಿದ್ದಷ್ಟು ಕೇರಿಯಲ್ಲಿ ಇಲ್ಲ. ಮೂಲಸೌಕರ್ಯಗಳ ವಿತರಣೆಯಲ್ಲಿರುವ ಈ ಅಂತರ ಅಭಿವೃದ್ಧಿಯನ್ನು ಪ್ರಭಾವಿಸುತ್ತದೆ. ಈ ಅಂತರವನ್ನು ಮಾಪನ ಮಾಡಲು ಈ ಸೂಚ್ಯಂಕವನ್ನು ಬಳಸಲಾಗಿದೆ.

**ಕೋಷ್ಟಕ ೫.೧೮. ಮೂಲ ಸೌಲಭ್ಯಗಳ ಲಭ್ಯತೆಯ ಸೂಚ್ಯಂಕ**

| ಕ್ರ.ಸಂ | ಶ್ರೇಣಿ | ಜಿಲ್ಲೆಗಳು ಮತ್ತು ಸೂಚ್ಯಂಕ | ಶೇಕಡವಾರು |
|---|---|---|---|
| ೧ | ಅತ್ಯುತ್ತಮ ಶ್ರೇಣಿ ೦.೮೦–೧.೦೦ | ಯಾದಗಿರಿ(೦.೮೩), ಹಾವೇರಿ(೦.೮೩), ಉ.ಕನ್ನಡ(೦.೮೩), ಉಡುಪಿ(೦.೮೩) | ೧೩.೩೪ |
| ೨ | ಉತ್ತಮ ಶ್ರೇಣಿ ೦.೬–೦.೭೯ | ಬೆಂ.ಗ್ರಾಮಾ(೦.೭೫), ಶಿವಮೊಗ್ಗ(೦.೬೭), ಮೈಸೂರು(೦.೬೭) | ೧೦ |
| ೩ | ಸರಾಸರಿ ೦.೪–೦.೫೯ | ಬೀದರ್(೦.೫೦), ಕಲ್ಬುರ್ಗಿ(೦.೫೦), ಬಾಗಲಕೋಟೆ(೦.೫೦), ದ.ಕನ್ನಡ(೦.೫೦), ಕೊಡಗು(೦.೫೦), ಚಿತ್ರದುರ್ಗ(೦.೪೦) | ೨೦ |
| ೪ | ಸರಾಸರಿಗಿಂತ ಕಡಿಮೆ <೦.೪ | ಕೊಪ್ಪಳ(೦.೩೩), ಬೆಳಗಾವಿ(೦.೩೩), ಗದಗ(೦.೩೩), ಧಾರವಾಡ(೦.೩೩), ರಾಮನಗರ(೦.೩೩), ಬಳ್ಳಾರಿ(೦.೩೦), ವಿಜಯಪುರ(೦.೩೦), ಚಿಕ್ಕಮಗಳೂರು (೦.೩೦), ಚಿಕ್ಕಬಳ್ಳಾಪುರ (೦.೨೫), ಕೋಲಾರ(೦.೧೭), ದಾವಣಗೆರೆ(೦.೧೭), ರಾಯಚೂರು (೦.೧೬), ಬೆಂ.ನಗರ(೦.೧೬), ಹಾಸನ(೦.೧೬), ಮಂಡ್ಯ(೦.೧೦), ಚಾಮರಾಜ ನಗರ(೦.೧೦), ತುಮಕೂರು(೦.೦೦) | ೫೬.೬೬ |
| | | ಒಟ್ಟು= | ೧೦೦ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)

**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಮೇಲಿನ ಕೋಷ್ಟಕದ ಅಂಕಿ ಅಂಶಗಳನ್ನು ಗಮನಿಸಿದಾಗ ಆರ್ಥಿಕ ಅಭಿವೃದ್ಧಿಯಾಗಲಿ, ಮಾನವ ಅಭಿವೃದ್ಧಿಯಾಗಲಿ ಮೂಲ ಸೌಲಭ್ಯಗಳ ಧಾರಣ ಸಾಮರ್ಥ್ಯ ಬಹಳ ಮುಖ್ಯ. ಮೂಲ ಸೌಕರ್ಯ ಎಷ್ಟರಮಟ್ಟಿಗೆ ಪ್ರಾಪ್ತವಾಗುವುದೋ ಅಷ್ಟು ಅಭಿವೃದ್ಧಿಯ ದಾರಿ ಸುಗಮವಾಗಲು ಸಾಧ್ಯ. ಆದರೆ ಕರ್ನಾಟಕದ ದಲಿತರ ಸ್ಥಿತಿ ಇನ್ನೂ ಶೋಚನಿಯವಾಗಿರುವುದು. ಮೇಲಿನ ಪಟ್ಟಿಯಿಂದ ವ್ಯಕ್ತವಾಗುತ್ತದೆ. ಶೇ. ಅರ್ಧಕ್ಕಿಂತ ಹೆಚ್ಚು ಪ್ರಮಾಣ ೧೭ ಜಿಲ್ಲೆಗಳಲ್ಲಿ ಸರಾಸರಿಗಿಂತಲು ಕಡಿಮೆ ಇರುವುದು ಕಂಡು ಬರುತ್ತದೆ. ಸರಾಸರಿ ಶೇ. ೨೦ರಷ್ಟು ಉತ್ತಮ ಶ್ರೇಣಿ, ಶೇ. ೧೦ ಅತ್ಯುತ್ತಮ ಶ್ರೇಣಿ, ಶೇ. ೧೩.೩೪ರಷ್ಟು ಇರುವುದು ಒಂದು ದೊಡ್ಡ ಅಸಮಾನತೆ ಮತ್ತು ದಲಿತರ ಬದುಕು ಇಂದಿಗೂ ಸಹ ಎಲ್ಲಿ ಬಂದು ನಿಂತಿದೆ ಎಂಬುದನ್ನು ಸೂಚಿಸುತ್ತದೆ. ಒಟ್ಟಾರೆಯಾಗಿ ದಲಿತ ಮಾನವ ಅನಭಿವೃದ್ಧಿಗೆ ಈ ಅಂಶಗಳು ಪುಷ್ಟಿಕೊಡುತ್ತದೆ.

### ಶೈಕ್ಷಣಿಕ ಸೌಲಭ್ಯಗಳ ಲಭ್ಯತೆಯ ಸೂಚ್ಯಂಕ

ಶಾಲಾ ದಾಖಲಾತಿ, ಶಾಲೆಬಿಟ್ಟ ಮಕ್ಕಳ ದರ ಹಾಗೂ ಪ್ರವರ್ತನ ಪ್ರಮಾಣ ಈ ಮೂರು ಸೂಚಿಗಳನ್ನು ಬಳಸಿಕೊಂಡು ದಲಿತ ಮಕ್ಕಳ ಶೈಕ್ಷಣಿಕ ಅಭಿವೃದ್ಧಿಯನ್ನು ದಲಿತೇತರ ಮಕ್ಕಳ ಶೈಕ್ಷಣಿಕ ಅಭಿವೃದ್ಧಿಗೆ ಹೋಲಿಸಿ ವರದಿಗಳಲ್ಲಿ ಮಾಪನ ಮಾಡಲಾಗಿದೆ.

**ಕೋಷ್ಟಕ ೫.೧೯. ಶೈಕ್ಷಣಿಕ ಸೌಲಭ್ಯಗಳ ಲಭ್ಯತೆಯ ಸೂಚ್ಯಂಕ**

| ಕ್ರಸಂ | ಶ್ರೇಣಿ | ಜಿಲ್ಲೆಗಳು ಮತ್ತು ಸೂಚ್ಯಂಕ | ಶೇಕಡವಾರು |
|---|---|---|---|
| ೧ | ಅತ್ಯುತ್ತಮ ಶ್ರೇಣಿ ೦.೮೦-೧.೦೦ | ಬಳ್ಳಾರಿ(೧.೦೦), ಬೆಂ.ಗ್ರಾಮಾ(೧.೦೦), ಮೈಸೂರು (೧.೦೦), ಚಿಕ್ಕಮಗಳೂರು(೧.೦೦), ತುಮಕೂರು (೦.೮೩), ಹಾಸನ(೦.೮೩), ಉಡುಪಿ(೦.೮೩) | ೨೩.೩೪ |
| ೨ | ಉತ್ತಮ ಶ್ರೇಣಿ ೦.೬-೦.೭೯ | ಗದಗ(೦.೬೭), ಧಾರವಾಡ(೦.೬೭), ಬೆಳಗಾವಿ(೦.೬೬), ದ.ಕನ್ನಡ(೦.೬೬) | ೩.೩೩ |
| ೩ | ಸರಾಸರಿ ೦.೪-೦.೫೯ | ಕಲ್ಬುರ್ಗಿ(೦.೫೦), ಯಾದಗಿರಿ(೦.೫೦), ಹಾವೇರಿ(೦.೫೦), ಉ.ಕನ್ನಡ(೦.೫೦), ಬೆಂ.ನಗರ(೦.೫೦),ಕೋಲಾರ(೦.೫೦), ದಾವಣಗೆರೆ(೦.೫೦), ಕೊಡಗು(೦.೫೦), ಬೀದರ್(೦.೪೦) | ೩೦ |
| ೪ | ಸರಾಸರಿಗಿಂತ ಕಡಿಮೆ <೦.೪ | ಚಿತ್ರದುರ್ಗ(೦.೩೫), ರಾಯಚೂರು(೦.೩೩), ರಾಮನಗರ (೦.೩೩), ಚಿಕ್ಕಬಳ್ಳಾಪುರ(೦.೩೩), ಶಿವಮೊಗ್ಗ(೦.೩೩), ಕೊಪ್ಪಳ(೦.೩೦), ಬಾಗಲಕೋಟೆ(೦.೩೦), ವಿಜಯಪುರ (೦.೩೦), ಮಂಡ್ಯ(೦.೧೦), ಚಾಮರಾಜನಗರ(೦.೧೦) | ೩೩.೩೩ |
| | | ಒಟ್ಟು= | ೧೦೦ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)
**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಮೇಲಿನ ಕೋಷ್ಟಕದ ಅಂಕಿ ಅಂಶಗಳನ್ನು ಗಮನಿಸಿದಾಗ ಶಿಕ್ಷಣದಿಂದ ಪ್ರಗತಿ-ಅಭಿವೃದ್ಧಿ ಸಾಧ್ಯ ಎಂದು ಪರಿಭಾವಿಸಲಾಗುತ್ತಿದೆ. ಆದರೆ ಇಂದಿನ ಕಾಲಮಾನದಲ್ಲಿ ಶಿಕ್ಷಣ ಅಂತ್ಯಜರಿಗೆ ದೊರಕುವುದು ಅಷ್ಟು ಸುಲಭದ ಮಾತೇನಲ್ಲ, ಇಂದಿನ ದಿನಮಾನದಲ್ಲಿ ಸರ್ಕಾರ ನೀಡುವ ಉಚಿತ ಶಿಕ್ಷಣ ಒಂದು ಕಡೆಯಾದರೆ, ಇನ್ನೊಂದು ಕಡೆ ಖಾಸಗಿ ಶಿಕ್ಷಣದ ಅಟ್ಟಹಾಸ. ಖಾಸಗಿ ಶಿಕ್ಷಣ ಪಡೆಯುವಷ್ಟು ಶಕ್ತಿ, ಸಾಮರ್ಥ್ಯ ಬಡವರಿಗೆ ಇರುವುದಿಲ್ಲ. ಹೆಚ್ಚು ಬಡತನದ ಅಂಚಿನಲ್ಲಿ ಇರುವವರು ದಲಿತರು. ಖಾಸಗಿ ಶಾಲೆ-ಶಿಕ್ಷಣ ಸಂಸ್ಥೆಗಳ ಗುಣಮಟ್ಟ ಸರ್ಕಾರಿ ಶಾಲೆಗಳಿಗಿಂತ ಉನ್ನತ ಮಟ್ಟದಲ್ಲಿ ಇರುತ್ತದೆ. ಅಂತಹ ಸಂದರ್ಭದಲ್ಲಿ ಸರ್ಕಾರ ನೀಡುವ ಉಚಿತ ಶಿಕ್ಷಣ ಪಡೆಯುವ ಪಾಲ್ದಾರಿಕೆಯಲ್ಲಿ ದಲಿತರು ಅನಿವಾರ್ಯವಾಗಿ ಹೆಚ್ಚು. ಆದರೆ ಫಲ ಶೇ. ೧೦೦ರಷ್ಟಿರಬೇಕಾಗಿತ್ತು ಆದರೆ ಅದು ಶೇ. ೩೩.೩೩ರಷ್ಟಿದೆ. ಸರಾಸರಿ ೩೦% ಉತ್ತಮ ಶ್ರೇಣಿ ೧೩.೩೩% ಅತ್ಯುತ್ತಮ ಶ್ರೇಣಿ ೨೩.೩೪% ರಷ್ಟಿರುವುದು ಒಂದು ಅಪೂರ್ಣ ಪ್ರಾಪ್ತಿ ಶಿಕ್ಷಣವಾಗಿದೆ. ದಲಿತರ ಬದುಕು ಹಸನಾಗಬೇಕಾದರೆ ಶೇ. ೧೦೦ರಷ್ಟು ಶಿಕ್ಷಿತರಾಗಬೇಕು ಮತ್ತು ಜಾಗೃತರಾಗಬೇಕು ಅಲ್ಲದೆ ಮುಕ್ತ ಅವಕಾಶಗಳು ಪ್ರಾಪ್ತವಾಗಬೇಕು.

**ದಲಿತರ ಮಾನವ ಅಭಿವೃದ್ಧಿ ಸೂಚ್ಯಂಕ**

ಈ ಮೇಲೆ ಅಧ್ಯಯನ ಮಾಡಿದ ಎಲ್ಲ ಸೂಚ್ಯಂಕಗಳು ದಲಿತೇತರರ ಅಭಿವೃದ್ಧಿಗೆ ಹೋಲಿಸಿ ದಲಿತ ಅಭಿವೃದ್ಧಿ ಸ್ಥಿತಿಯನ್ನು ತೋರಿಸುತ್ತವೆ. ಪ್ರತಿ ಸೂಚ್ಯಂಕಗಳಲ್ಲೂ ಮೂರರಿಂದ ಐದು ಸೂಚಿಗಳಿವೆ. ಪ್ರತಿ ಸೂಚಿಗೂ ದಲಿತೇತರರ ಅಭಿವೃದ್ಧಿಗೆ ಹೋಲಿಸಿ ದಲಿತ ಅಭಿವೃದ್ಧಿಯನ್ನು ಗುರುತಿಸುವ ಅಂಕ ಅಥವಾ ವೈಟೇಜ್ ನೀಡಲಾಗಿದೆ. ದಲಿತೇತರರಿಗೆ ಹೋಲಿಸಿದಾಗ ದಲಿತ ಅಭಿವೃದ್ಧಿ ಕಡಿಮೆಯಿದ್ದರೆ ಸೂಚಿ ಶೂನ್ಯ ಅಂಕ ಅಥವಾ ವೈಟೇಜ್ ಪಡೆಯುತ್ತದೆ. ದಲಿತೇತರರಿಗೆ ಸಮಾದಾನದ ದಲಿತ ಅಭಿವೃದ್ಧಿ ಇದ್ದರೆ ಒಂದು ವೈಟೇಜ್ ನೀಡಲಾಗುವುದು. ದಲಿತೇತರರಿಗಿಂತ ಉತ್ತಮ ದಲಿತ ಅಭಿವೃದ್ಧಿ ಇದ್ದರೆ ಎರಡು ಅಂಕ ನೀಡಲಾಗುವುದು. ಎಲ್ಲ ಸೂಚಿಗಳು ಗಳಿಸಿದ ಮೌಲ್ಯಗಳನ್ನು ಕೂಡಿಸಿ ಅವುಗಳ ಗರಿಷ್ಠ ಮೌಲ್ಯದ ಮೊತ್ತದಿಂದ ಭಾಗಿಸಿ ಪ್ರತಿ ಸೂಚ್ಯಂಕದ ಮೌಲ್ಯವನ್ನು ಪಡೆಯಲಾಗಿದೆ. ಮೇಲಿನ ಹತ್ತು ಸೂಚ್ಯಂಕಗಳ ಸರಾಸರಿ ಮೌಲ್ಯವನ್ನು ಸಮಗ್ರ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಮೌಲ್ಯವೆಂದು ಪರಿಗಣಿಸಲಾಗಿದೆ.

ಪ್ರತಿ ಸೂಚ್ಯಂಕದ ಅಂಕಗಳು ಸಕರಾತ್ಮಕವಾಗಿ ಜೋಡಿಸಲ್ಪಟ್ಟಿವೆ. ಅಂದರೆ ಸೂಚ್ಯಂಕದ ಅಂಕ ಹೆಚ್ಚಾದಂತೆ ದಲಿತ ಮಾನವ ಅಭಿವೃದ್ಧಿ ಸ್ಥಿತಿ ಸುಧಾರಿಸಿದಂತೆ ಮತ್ತು ಕಡಿಮೆಯಾದಂತೆ ದಲಿತ ಅಭಿವೃದ್ಧಿ ಸ್ಥಿತಿ ಕಡಿಮೆ ಇರುವುದನ್ನು ತೋರಿಸುತ್ತದೆ. ಸಮಗ್ರ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಅಂಕ ೦.೪ಕ್ಕಿಂತ ಕಡಿಮೆ ಇದ್ದರೆ ಅಥವಾ ದಲಿತೇತರರ ಅಭಿವೃದ್ಧಿಯ ಶೇ. ೪೦ರಷ್ಟು ಕೂಡ ದಲಿತ ಅಭಿವೃದ್ಧಿ ಇಲ್ಲದಿದ್ದರೆ ದಲಿತ ಮಾನವ ಅಭಿವೃದ್ಧಿ ಸ್ಥಿತಿ ಕೆಡುದಿದೆ ಎಂದರ್ಥ. ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಅಂಕ ೦.೪ ಮತ್ತು ೦.೬ ಮಧ್ಯೆ ಇದ್ದರೆ ಅಥವಾ

ದಲಿತೇತರರ ಅಭಿವೃದ್ಧಿಯ ಶೇ. ೪೦ ಮತ್ತು ೬೦ರ ಮಧ್ಯೆ ಇದ್ದರೆ ದಲಿತ ಮಾನವ ಅಭಿವೃದ್ಧಿ ಸ್ಥಿತಿ ಸಾಧಾರಣ ಇದೆ ಎಂದರ್ಥ. ದಲಿತ ಸೂಚ್ಯಂಕ ಅಂಕ ೦.೬ ಮತ್ತು ೦.೮ರ ನಡುವೆ ದಲಿತೇತರರ ಅಭಿವೃದ್ಧಿಯ ಶೇ. ೬೦ ಮತ್ತು ೮೦ರ ಮಧ್ಯೆ ಇದ್ದರೆ ಮಾನವ ಅಭಿವೃದ್ಧಿ ಸ್ಥಿತಿ ಉತ್ತಮ. ಸೂಚ್ಯಂಕ ಅಂಕ ೦.೮ಕ್ಕಿಂತ ಹೆಚ್ಚಿದ್ದರೆ ಅಥವಾ ದಲಿತೇತರರ ಅಭಿವೃದ್ಧಿಗೆ ಸಮಸಮ ಇದ್ದರೆ ದಲಿತ ಮಾನವ ಅಭಿವೃದ್ಧಿ ಸ್ಥಿತಿ ಅತ್ಯುತ್ತಮ ಎನ್ನುವ ತೀರ್ಮಾನಕ್ಕೆ ಬರಬಹುದು.

**ಕೋಷ್ಟಕ ೫.೨೦. ದಲಿತರ ಮಾನವ ಅಭಿವೃದ್ಧಿ ಸೂಚ್ಯಂಕ**

| ಕ್ರ.ಸಂ | ಶ್ರೇಣಿ | ಜಿಲ್ಲೆಗಳು ಮತ್ತು ಸೂಚ್ಯಂಕ | ಶೇಕಡವಾರು |
|---|---|---|---|
| ೧ | ಅತ್ಯುತ್ತಮ ಶ್ರೇಣಿ ೦.೮೦–೧.೦೦ | ಯಾವುದು ಇಲ್ಲ | ೦ |
| ೨ | ಉತ್ತಮ ಶ್ರೇಣಿ ೦.೬–೦.೭೯ | ಉಡುಪಿ(೦.೭೮), ದ.ಕನ್ನಡ(೦.೭೮), ಬೆಂ.ಗ್ರಾಮಾ(೦.೬೮), ಮೈಸೂರು(೦.೬೧), ಕೊಡಗು(೦.೬೦) | ೧೬.೬೭ |
| ೩ | ಸರಾಸರಿ ೦.೪–೦.೫೯ | ಮಂಡ್ಯ(೦.೫೭), ಉ.ಕನ್ನಡ(೦.೫೫), ಧಾರವಾಡ(೦.೫೩), ಚಿಕ್ಕಮಗಳೂರು(೦.೫೩), ಬೆಂ.ನಗರ(೦.೫೩), ಚಾಮರಾಜನಗರ(೦.೫೧), ತುಮಕೂರು(೦.೫೦), ದಾವಣಗೆರೆ(೦.೪೮), ಶಿವಮೊಗ್ಗ(೦.೪೭), ಕಲ್ಬುರ್ಗಿ(೦.೪೫), ಹಾವೇರಿ(೦.೪೫), ಬೆಳಗಾವಿ(೦.೪೪), ಕೋಲಾರ(೦.೪೪), ಹಾಸನ(೦.೪೪), ಗದಗ(೦.೪೨), ೧೬.೬೭% ಯಾದಗಿರಿ(೦.೪೦) | ೫೩.೩೩ |
| ೪ | ಸರಾಸರಿಗಿಂತ ಕಡಿಮೆ <೦.೪ | ಬಳ್ಳಾರಿ(೦.೩೯), ಕೊಪ್ಪಳ(೦.೩೭), ಬೀದರ್(೦.೩೬), ರಾಯಚೂರು(೦.೩೬), ಬಾಗಲಕೋಟೆ(೦.೩೩), ವಿಜಯಪುರ(೦.೩೦), ಚಿತ್ರದುರ್ಗ(೦.೩೦), ರಾಮನಗರ(೦.೨೨), ಚಿಕ್ಕಬಳ್ಳಾಪುರ(೦.೧೬) | ೩೦ |
| | | ಒಟ್ಟು= | ೧೦೦ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)

**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಮೇಲಿನ ಕೋಷ್ಟಕದ ಅಂಕಿ ಅಂಶಗಳನ್ನು ಗಮನಿಸಿದಾಗ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಹತ್ತು ಸೂಚಿಗಳನ್ನು ಅಳವಡಿಸಿಕೊಂಡು ದಲಿತರ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ಲೆಕ್ಕ ಹಾಕಲಾಗಿದೆ. ಯಾವುದೇ ಒಂದು ಜಿಲ್ಲೆಯು ಕೂಡ ೦.೮ನ್ನು ತಲುಪಿರುವುದಿಲ್ಲ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಯು ೦.೧೬ ಇರುವುದು ಒಂದು ದುರುಂತ. ಇದರಿಂದ ರಾಜ್ಯದಲ್ಲಿ ಅಭಿವ್ಯಕ್ತ ವಾಗುವುದೇನೆಂದರ ಅತ್ಯುತ್ತಮ ಶ್ರೇಣಿ ಶೂನ್ಯವಾಗಿದೆ. ಉತ್ತಮ ಶ್ರೇಣಿ ೧೬.೬೭% ರಷ್ಟಿದೆ(೦೫ ಜಿಲ್ಲೆಗಳಲ್ಲಿ) ಸರಾಸರಿ ಶೇ. ಅರ್ಧಕ್ಕಿಂತ ತುಸು ಹೆಚ್ಚು ಇದೆ. ಅಂದರೆ ೫೩.೩೩% ರಷ್ಟಿದೆ(೧೬ ಜಿಲ್ಲೆಗಳಲ್ಲಿ) ಸರಾಸರಿಗಿಂತ ಕಡಿಮೆ ಶೇ. ೩೦ರಷ್ಟಿದೆ(೦೯ ಜಿಲ್ಲೆಗಳು) ಈ ಅಂಕಿ ಅಂಶದ ಫಲಿತಾಂಶವು ವ್ಯಕ್ತವಾಗುವುದೇನೆಂದರೆ ದಲಿತ ಸ್ಥಿತಿ ೨೧ನೇ ಶತಮಾನದಲ್ಲೂ ಪ್ರಜ್ಞಾವಂತ ಕಾಲಾದಲ್ಲೂ ಕೂಡ ಇನ್ನು ಕೆಳಮಟ್ಟದಲ್ಲಿರುವುದು ಗೋಚರಿಸುತ್ತದೆ. ಅಭಿವೃದ್ಧಿಯ ಫಲ ಅತ್ಯುತ್ತಮ ಶ್ರೇಣಿಯಲ್ಲಿ ಶೇ. ೧ ರಷ್ಟಾದರು ಪಡೆಯಲು ಸಾಧ್ಯವಾಗಿಲ್ಲ. ಏಕೆಂದರೆ ಸರ್ಕಾರಗಳು ದಲಿತರ ಸಮಸ್ಯೆಯ ಸುಧಾರಣೆಗೆ ಕ್ರಮಗಳನ್ನು ತೆಗೆದುಕೊಳ್ಳುತ್ತಾ ಬಂದಿದೆ ವಿನಃ ಸಮಾಜ ದಲಿತರ ವಿಮೋಚನೆಗೆ ಸಿದ್ಧವಿಲ್ಲ. ಶಾಸನಾತ್ಮಕ ಕ್ರಮಗಳ ಜೊತೆಯಲ್ಲಿ ಸಾಮಾಜಿಕ ಪರಿವರ್ತನೆಯನ್ನು ಸರಿಪಡಿಸಿಕೊಳ್ಳುವ ಅಗತ್ಯವಿದೆ. ಇಂತಹದನ್ನು ಸಾಧಿಸುವುದರ ಮುಖಾಂತರ ಅಭಿವೃದ್ಧಿ ಸಾಧ್ಯ.

**ದಲಿತರ ದುಸ್ಥಿತಿ ಸೂಚ್ಯಂಕ**

ಅಭಿವೃದ್ಧಿ ಮೌಲ್ಯ ಮಾಪನದಲ್ಲಿ ಮಾನವ ಅಭಿವೃದ್ಧಿ ಮೌಲ್ಯ ಮಾಪನ ವಿಶೇಷತೆಯನ್ನ ಪಡೆದುಕೊಂಡಿದೆ. ಆದರೆ ದಲಿತ ಮಾನವ ಅಭಿವೃದ್ಧಿಯು ಹೆಚ್.ಡಿ.ಐ. ಸೂಚಿಯೊಂದಿಗೆ ಇನ್ನು ೬ ಸೂಚಿಗಳನ್ನು ಬಳಸಿಕೊಂಡಿದೆ. ಹಾಗಾಗಿ ಪ್ರಸ್ತುತ ಈ ಅಧ್ಯಯನದಲ್ಲಿ ದಲಿತರ ದುಸ್ಥಿತಿಯನ್ನು ಕೋಷ್ಟಕದಲ್ಲಿ ವ್ಯಕ್ತಪಡಿಸಲಾಗಿದೆ.

**ಕೋಷ್ಟಕ ೫.೨೧. ದಲಿತರ ದುಸ್ಥಿತಿ(ಅಭಿವೃದ್ಧಿ ಅಂತರ) ಸೂಚ್ಯಂಕ**

| ಕ್ರಸಂ | ಶ್ರೇಣಿ | ಜಿಲ್ಲೆಗಳು ಮತ್ತು ಸೂಚ್ಯಂಕ (1.00ರಲ್ಲಿ ಆಯಾ ಜಿಲ್ಲೆಗಳ ದಲಿತ ಮಾನವ ಅಭಿವೃದ್ಧಿ ಸೂಚಿಯನ್ನು ಕಳೆಯಲಾಗಿದೆ) | ಶೇಕಡವಾರು |
|---|---|---|---|
| ೧ | ಅಭಿವೃದ್ಧಿಯಿಂದ ಹೆಚ್ಚು ದೂರವಿರುವ ಜಿಲ್ಲೆಗಳು ೧.೦೦-೦.೮೦ | ಚಿಕ್ಕಬಳ್ಳಾಪುರ(೦.೮೪) | ೩.೩೩ |
| ೨ | ಅಭಿವೃದ್ಧಿಯಿಂದ ದೂರವಿರುವ ಜಿಲ್ಲೆಗಳು ೦.೭೯-೦.೬ | ರಾಮನಗರ(೦.೭೮), ವಿಜಯಪುರ(೦.೭೦), ಚಿತ್ರದುರ್ಗ(೦.೭೦), ಬಾಗಲಕೋಟೆ(೦.೬೭), ರಾಯಚೂರು(೦.೬೪), ಬೀದರ್(೦.೬೪), ಕೊಪ್ಪಳ(೦.೬೩), ಬಳ್ಳಾರಿ(೦.೬೧), ಯಾದಗಿರಿ(೦.೬೦), | ೩೦ |

| | | | |
|---|---|---|---|
| ೩ | ಅಭಿವೃದ್ಧಿಗೆ ಸರಾಸಾರಿ ಜಿಲ್ಲೆಗಳು ೦.೫೯-೦.೪ | ಗದಗ(೦.೫೮), ಬೆಳಗಾವಿ(೦.೫೬), ಕೋಲಾರ(೦.೫೬), ಹಾಸನ(೦.೫೬), ಕಲ್ಬುರ್ಗಿ(೦೦.೫೫), ಹಾವೇರಿ(೦.೫೫), ಶಿವಮೊಗ್ಗ(೦.೫೩), ದಾವಣಗೆರೆ(೦.೫೧), ತುಮಕೂರು(೦.೫೦), ಚಾಮರಾಜನಗರ(೦.೪೯), ಬೆಂ.ನಗರ(೦.೪೭), ಧಾರವಾಡ(೦.೪೭), ಚಿಕ್ಕಮಗಳೂರು(೦.೪೭), ಉ.ಕನ್ನಡ(೦.೪೫), ಮಂಡ್ಯ(೦.೪೩), ಕೊಡಗು(೦.೪೦) | ೫೩.೩೪ |
| ೪ | ಅಭಿವೃದ್ಧಿಗೆ ಸಮೀಪವಿರುವ ಜಿಲ್ಲೆಗಳು <೦.೪ | ಮೈಸೂರು(೦.೩೯), ಬೆಂ.ಗ್ರಾಮಾ(೦.೩೨), ಉಡುಪಿ(೦.೨೨), ದ.ಕನ್ನಡ(೦.೨೨) | ೧೩.೩೩ |
| | | ಒಟ್ಟು= | ೧೦೦ |

**ಮೂಲ:** ಕರ್ನಾಟಕ ಸರ್ಕಾರ, ಕರ್ನಾಟಕದ ಎಲ್ಲಾ ೩೦ ಜಿಲ್ಲೆಗಳ ಮಾನವ ಅಭಿವೃದ್ಧಿ ವರದಿಗಳು(೨೦೧೪)
**ಟಿಪ್ಪಣಿ:** ಪ್ರಸ್ತುತ ಅಧ್ಯಯನಕ್ಕಾಗಿ ಲೆಕ್ಕ ಹಾಕಲಾಗಿದೆ.

ಮೇಲಿನ ಕೋಷ್ಟಕದ ಅಂಕಿ ಅಂಶಗಳನ್ನು ಗಮನಿಸಿದಾಗ ಅಧ್ಯಯನ ಮಾಡಿದ ಎಲ್ಲಾ ಸೂಚಿಗಳ ಕೋಷ್ಟಕಗಳಿಗೂ ದಲಿತರ ದುಸ್ಥಿತಿ ಕೋಷ್ಟಕಗಳಿಗೂ ವ್ಯತ್ಯಾಸವಿದೆ. ಏಕೆಂದರೆ ಅತ್ಯುತ್ತಮ ಶ್ರೇಣಿಗೂ, ಉತ್ತಮ, ಸರಾಸರಿ ಶ್ರೇಣಿಗೂ, ಸರಾಸರಿ ಕಡಿಮೆ ಶ್ರೇಣಿಗೂ ಅಭಿವೃದ್ಧಿಯಿಂದ ಹೆಚ್ಚು ದೂರವಿರುವ ಜಿಲ್ಲೆಗಳು ೦.೮೦-೧.೦೦, ಅಭಿವೃದ್ಧಿಯಿಂದ ದೂರವಿರುವ ಜಿಲ್ಲೆಗಳು ೦.೬-೦.೭೯, ಅಭಿವೃದ್ಧಿಗೆ ಸರಾಸಾರಿ ಜಿಲ್ಲೆಗಳು ೦.೪-೦.೫೯, ಅಭಿವೃದ್ಧಿಗೆ ಸಮೀಪವಿರುವ ಜಿಲ್ಲೆಗಳು <೦.೪, ಸಂಗತಿಗಳಿಗೆ ವ್ಯತ್ಯಾಸವಿದೆ. ಏಕೆಂದರೆ ಆಯಾ ಜಿಲ್ಲೆಗಳು ಪಡೆದುಕೊಂಡಿರುವ ಸಿ.ಡಿ.ಡಿ.ಐ. ನಿಂದ ೧.೦೦ಯಲ್ಲಿ ಕಳೆದು ಲೆಕ್ಕ ಹಾಕಲಾಗಿದೆ.

ಸಿ.ಡಿ.ಡಿ.ಐ. ಹತ್ತು ಸೂಚಿಗಳು ದಲಿತರ ಸ್ಥಿತಿಗತಿಗಳ ಬಗ್ಗೆ ಹಾಗೂ ದಲಿತ ಮಾನವ ಅಭಿವೃದ್ಧಿ ಮಟ್ಟವನ್ನು ಹೇಳುತ್ತವೆ. ದಲಿತರ ದುಸ್ಥಿತಿ ಸಾಮಾನ್ಯರಿಗೂ ದಲಿತರಿಗೂ ಇರುವ ಅಭಿವೃದ್ಧಿ ಅಂತರವನ್ನು ಸೂಚಿಸುತ್ತದೆ. ಕರ್ನಾಟಕದ ಒಂದು ಜಿಲ್ಲೆ ಅಭಿವೃದ್ಧಿಯಿಂದ ಅತ್ಯಂತ ಹೆಚ್ಚು ದೂರವಿದೆ. ಅಭಿವೃದ್ಧಿಯಿಂದ ದೂರವಿರುವ ಜಿಲ್ಲೆಗಳು ೯(೩೦%). ಅಭಿವೃದ್ಧಿಗೆ ಸರಾಸರಿ ಇರುವ ಜಿಲ್ಲೆಗಳು ೧೬(೫೩.೩೪%) ಅಭಿವೃದ್ಧಿಗೆ ಸಮೀಪ ಇರುವ ಜಿಲ್ಲೆಗಳು ಕೇವಲ ೪(೧೩.೩೩%) ಅಂದರೆ ಕೇವಲ ನಾಲ್ಕು ಜಿಲ್ಲೆಗಳು ಮಾತ್ರ, ಅಂದರೆ ಇದು ಪ್ರಾದೇಶಿಕ ಅಸಮಾನತೆ ಮತ್ತು ಮಾನವ ಅಸಮಾನತೆಗಳು ಗೋಚರವಾಗುತ್ತದೆ. ಇನ್ನು ಉಳಿದ ಜಿಲ್ಲೆಗಳು ದುಸ್ಥಿತಿಯಲ್ಲಿ ಇರುವುದು (ಅತ್ಯಂತ ದೂರ, ದೂರ, ಸರಾಸರಿ)ಕಂಡು ಬರುವುದು ಒಂದು ರೀತಿಯಲ್ಲಿ ಅಸಮಾನತೆ ಇರುವುದನ್ನು ಸಾಬೀತುಪಡಿಸುತ್ತದೆ. ಒಟ್ಟಾರೆಯಾಗಿ ದುಸ್ಥಿತಿಯು ದಲಿತರಿಗೆ ಹೆಚ್ಚು ಪಾಲಾಗಿದೆ.

ನಮ್ಮ ಅಭಿವೃದ್ಧಿ ಮೂಲದಲ್ಲಿರುವ ಸೈದ್ಧಾಂತಿಕ ನೆಲೆಯೆಂದರೆ ಅಭಿವೃದ್ಧಿ ಫಲಗಳು ಸಾವಕಾಶವಾಗಿ ಸಮಾಜದ ಎಲ್ಲರಿಗೂ ದೊರೆಯುತ್ತದೆ ಎಂಬುದಾಗಿದೆ. ಇದು ಹುಸಿಯಾಗಿರುವುದನ್ನು ಈ ಸಂಗತಿಗಳಿಂದ ವ್ಯಕ್ತವಾಗುತ್ತದೆ. ಆದ್ದರಿಂದ ಅಭಿವೃದ್ಧಿಯ ಫಲಗಳು ದಲಿತರಿಗೆ ನೇರವಾಗಿ ದೊರೆಯುವಂತಹ ನೀತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಅಗತ್ಯವಿದೆ.

### ೫.೫. ದಲಿತರ ಅಭಿವೃದ್ಧಿ ಹಕ್ಕಿನ ಪ್ರಶ್ನೆಗಳು

ಶತ-ಶತಮಾನಗಳಿಂದ ಜೀವಂತವಾಗಿ ಉಳಿದುಕೊಂಡು ಬಂದಿರುವ ಅಸ್ಪೃಶ್ಯತೆ, ಮಡಿಮೈಲಿಗೆಗಳ ಹಿನ್ನೆಲೆಯಲ್ಲಿ ಅದನ್ನು ಪರಿಭಾವಿಸಿಕೊಳ್ಳುವುದೆಲ್ಲ ಸರಿ. ಆದರೆ ಅದನ್ನು ಅಭಿವೃದ್ಧಿಯ ಚೌಕಟ್ಟಿನಲ್ಲಿ ಪರಿಭಾವಿಸಿಕೊಳ್ಳುವ ಅಗತ್ಯವಿದೆ. ದೇಶದ ಅಭಿವೃದ್ಧಿಗೆ ಅದು ಕಂಟಕವಾಗಿದೆ ಎನ್ನುವ ನೆಲೆಯಲ್ಲಿ ಅದನ್ನು ಪರಿಭಾವಿಸಿಕೊಳ್ಳಬೇಕಾಗಿದೆ. ಅದನ್ನು ಕೇವಲ ಪರಿಶಿಷ್ಟರ ಸಮಸ್ಯೆಯನ್ನಾಗಿ ಸೀಮಿತ ಗೊಳಿಸುವುದಕ್ಕೆ ಪ್ರತಿಯಾಗಿ ಅದೊಂದು ದೇಶಕ್ಕೆ ಸಮಾಜಕ್ಕೆ ಸಂಬಂಧಿಸಿದ ಸಮಸ್ಯೆಯನ್ನಾಗಿ ಪರಿಭಾವಿಸಿಕೊಳ್ಳುವ ಅಗತ್ಯವಿದೆ. ದೇಶದ ಜನಸಂಖ್ಯೆಯ ಸರಿಸುಮಾರು ಶೇ. ೨೪ರಷ್ಟಿರುವ ಪರಿಶಿಷ್ಟರು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಪೂರ್ಣವಾಗಿ ತೊಡಗುವುದು ಸಾಧ್ಯವಾಗಿಲ್ಲ. ಅವರ ಶ್ರಮಶಕ್ತಿ, ಬುದ್ಧಿಶಕ್ತಿ ಪೂರ್ಣವಾಗಿ ಅಭಿವೃದ್ಧಿಗೆ ಸಲ್ಲುತ್ತಿಲ್ಲ. ಪ್ರಸುತ್ತ ಅಧ್ಯಯನದಲ್ಲಿ ಅಸ್ಪೃಶ್ಯತೆಯನ್ನು ಅಭಿವೃದ್ಧಿಯ ಚೌಕಟ್ಟಿನಲ್ಲಿ ಪರಿಭಾವಿಸಿಕೊಳ್ಳಲು ಪ್ರಯತ್ನಿಸಲಾಗಿದೆ.

ದಲಿತ ಮಾನವ ಅಭಿವೃದ್ಧಿ ಸೂಚಿಯನ್ನು ಪರಿಚಯಿಸುವಾಗ ಅಭಿವೃದ್ಧಿಯ ಮಾಪಕಗಳನ್ನು ಗಮನಹರಿಸುತ್ತೇವೆ. ಅಭಿವೃದ್ಧಿ ಮಾಪಕಗಳು ಅನಭಿವೃದ್ಧಿಯ ಕಾರಣಗಳನ್ನು ಗುರುತಿಸುವುದಿಲ್ಲ. ದಲಿತೇತರರ ಅಭಿವೃದ್ಧಿಗೆ ಹೋಲಿಸಿದರೆ ದಲಿತ ಅಭಿವೃದ್ಧಿ ತುಂಬಾ ಹಿಂದಿದೆ ಎನ್ನುವುದು ಮೇಲ್ನೋಟಕ್ಕೆ ತಿಳಿಯುವ ವಿಚಾರ. ಇಂತಹ ಸಂದರ್ಭದಲ್ಲಿ ದಲಿತ ಅಭಿವೃದ್ಧಿ ಮಾಪನ ಮಾಡುವುದು ಮಾತ್ರ ಮುಖ್ಯವಲ್ಲ, ಹಲವು ವರ್ಷಗಳ ಅಭಿವೃದ್ಧಿ ನಂತರವೂ ದಲಿತರು ಏಕೆ ದಲಿತೇತರರ ಸಮವಾಗಿ ಬೆಳೆಯಲಿಲ್ಲ ಎನ್ನುವ ಪ್ರಶ್ನೆ ಕೂಡ ಮುಖ್ಯ.

ದಲಿತರ ಅನಭಿವೃದ್ಧಿ ದಲಿತರಿಗೆ ಸೀಮಿತಗೊಂಡ ಸಮಸ್ಯೆಯೇ ಅಥವಾ ಒಟ್ಟು ಸಮಾಜದ ಸಮಸ್ಯೆಯೇ ಎನ್ನುವ ಪ್ರಶ್ನೆ ಹುಟ್ಟುತ್ತದೆ. ಇದು ಕೇವಲ ದಲಿತರ ಸಮಸ್ಯೆಯಾಗಿದ್ದರೆ ದಲಿತರಾಗಿ ಹುಟ್ಟಿದ ಯಾರೊಬ್ಬರು ಕೂಡ ಅಭಿವೃದ್ಧಿಯಾಗಲು ಸಾಧ್ಯವಿಲ್ಲ. ಅದರೆ ಆ ರೀತಿ ಇಲ್ಲ. ಭೂಮಿ, ಹಣಕಾಸು ಉತ್ತಮ ಶಿಕ್ಷಣ, ಆರೋಗ್ಯ ಇವೆಲ್ಲವನ್ನು ಹೊಂದಿರುವ ಅನೇಕ ದಲಿತರು, ದಲಿತೇತರರಂತೆ ಬದುಕು ಸಾಗಿಸುತ್ತಿದ್ದಾರೆ. ಮೇಲಿನ ಯಾವುದೊಂದು ಸಂಪನ್ಮೂಲ ಇಲ್ಲದ ದಲಿತರು ಕಷ್ಟದ ಜೀವನ ಸಾಗಿಸುತ್ತಿದ್ದಾರೆ. ಆದ್ದರಿಂದ ಇದು ಹುಟ್ಟಿನ ಪ್ರಶ್ನೆಯಲ್ಲ. ದಲಿತರ ಬದುಕನ್ನು ಅಸಹಾಯಕ ಗೊಳಿಸುವ ಪರಿ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸಂಬಂಧ ಮೌಲ್ಯಗಳ ಪ್ರಶ್ನೆ ಇದಾಗಿದೆಯೆಂದು ಪುರಾವೆಗಳ ಮೂಲಕ ರುಜುವಾತಾಗಿದೆ.

ಪರಿಶಿಷ್ಟ ಮತ್ತು ಶಿಷ್ಟ ನೆಲೆಗಳನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಚರ್ಚೆಯನ್ನು ಹಾಗೂ ಅಂಕಿ ಅಂಶಗಳನ್ನು ಕರ್ನಾಟಕಕ್ಕೆ ಮಾತ್ರ ಸೀಮಿತಗೊಳಿಸಿಕೊಳ್ಳಲಾಗಿದೆ. ನಮ್ಮ ಸಮಾಜದಲ್ಲಿ ಅಭಿವೃದ್ಧಿಯಿಂದ ವಂಚಿತರಾದ ಮತ್ತು ತೀವ್ರ ದುಸ್ಥಿತಿಯಲ್ಲಿರುವ ಜನ ಸಮುದಾಯವೆಂದರೆ ಪರಿಶಿಷ್ಟರು. ಆದ್ದರಿಂದ ಅಭಿವೃದ್ಧಿಯನ್ನು ಸಮಾಜದ ಅಂಚಿನಲ್ಲಿರುವ ವಂಚಿತರ ನೆಲೆಯಿಂದ ಪರಿಭಾವಿಸಿಕೊಳ್ಳಬೇಕಾದ ಅಗತ್ಯವನ್ನು ಪ್ರತಿಪಾದಿಸಲಾಗಿದೆ.

ಅಭಿವೃದ್ಧಿಯು ಪರಿಶಿಷ್ಟರ ನೆಲೆಯಿಂದ ಆರಂಭವಾಗಬೇಕಾಗಿದೆ. ಪರಿಶಿಷ್ಟರ ಪದತಲದಿಂದ ಅಭಿವೃದ್ಧಿ ಆರಂಭವಾಗಬೇಕಾಗಿದೆ. ಸಾಮಾನ್ಯವಾಗಿ ಅಭಿವೃದ್ಧಿಯನ್ನು ಅಖಂಡ ನೆಲೆಯಲ್ಲಿ ಪರಿಭಾವಿಸಿಕೊಳ್ಳುವ ಪರಿಪಾಠವಿದೆ. ಅಭಿವೃದ್ಧಿಯ ಫಲಗಳು ಸಮಾಜದ ಎಲ್ಲರಿಗೂ ಕಾಲಾನುಕ್ರಮದಲ್ಲಿ ದೊರೆಯುತ್ತದೆ ಎಂಬುದು ಇಲ್ಲಿನ ಪ್ರಮೇಯವಾಗಿದೆ. ಅಭಿವೃದ್ಧಿಗೆ ಎಲ್ಲ ಜನರನ್ನು ಒಳಗೊಳ್ಳುವ ಗುಣವಿದೆಯೆಂದು ಹೇಳಲಾಗಿದೆ. ಆದರೆ ವಸ್ತುಸ್ಥಿತಿ ಹೀಗಿಲ್ಲ; ಅಭಿವೃದ್ಧಿಯ ಫಲಗಳು ಮೇಲಿಂದ ಕೆಳಗೆ ಹರಿದು ಸಮಾಜದ ಕಟ್ಟಕಡೆಯ ಬಡವನನ್ನು ತಲುಪುತ್ತದೆ ಎಂಬುದು ಇದರ ಇನ್ನೊಂದು ಪ್ರಮೇಯವಾಗಿದೆ. ನಮ್ಮ ಸಮಾಜದಲ್ಲಿ ಅಭಿವೃದ್ಧಿಯು ಅಖಂಡವಾಗಿರಲು ಸಾಧ್ಯವಿಲ್ಲವೆಂಬುದನ್ನು ತೋರಿಸಲು ಸದ್ಯದ ಪರಿಸ್ಥಿತಿಯಲ್ಲಿ ಯತ್ನಿಸಲಾಗಿದೆ. ಸಮಾಜದ ವಿವಿಧ ಜನಸಮುದಾಯಗಳು ಅಭಿವೃದ್ಧಿಯ ಪಾಲನ್ನು ಹೇಗೆ ಪಡೆಯುತ್ತೇವೆ ಎಂಬುದನ್ನು ಗುರುತಿಸುವುದು ಕುತೂಹಲಕರ ಸಂಗತಿಯಾಗಿದೆ.

ಇಲ್ಲಿ ಅಖಂಡವಾದ ವಿಶ್ಲೇಷಣೆ ಬೇಡ; ತೀವ್ರ ವಂಚಿತವಾದ ಪರಿಶಿಷ್ಟರು ಮತ್ತು ಪರಿಶಿಷ್ಟ ಮಹಿಳೆಯರು ಅಭಿವೃದ್ಧಿಯ ಲಿಂಗ ಸಂಬಂಧಿ ಆಯಾಮವನ್ನು ಅಲಕ್ಷಿಸಲು ಸಾಧ್ಯವಿಲ್ಲ. ಪರಿಶಿಷ್ಟರು ಅಭಿವೃದ್ಧಿಯಿಂದ ವಂಚಿತರಾಗಿದ್ದಾರೆ. ಅದರ ಮೂಲದಲ್ಲಿ ಅಸ್ಪೃಶ್ಯತೆಯ ಆಚರಣೆ ಕ್ರಿಯಾಶೀಲವಾಗಿರುವುದನ್ನು ನಾವು ಗುರುತಿಸಬೇಕಾಗುತ್ತದೆ.

**ಸಂವಿಧಾನ ಮತ್ತು ದಲಿತರ ಹಕ್ಕು**

ಬಾಬಾ ಸಾಹೇಬ್ ಅಂಬೇಡ್ಕರ್ ಗುರುತಿಸಿರುವಂತೆ ಶಿಷ್ಟರು ಪರಿಶಿಷ್ಟರು ಅಸ್ಪೃಶ್ಯರೆಂದು ಪರಿಭಾವಿಕೊಂಡಿರುವುದರಿಂದ ಅಂತಹ ಸಮಸ್ಯೆ ನಮ್ಮ ಸಮಾಜದಲ್ಲಿದೆ. ಸಮಾಜ ಹಾಗೂ ಜನರಲ್ಲಿ ತಾವು ಶ್ರೇಷ್ಠರು ಮತ್ತು ತಮ್ಮ ಶ್ರೇಷ್ಠತೆ ಹುಟ್ಟಿನಿಂದ ಪ್ರಾಪ್ತವಾದುದು ಎಂಬ ನಂಬಿಕೆ ಎಲ್ಲಿಯವರೆಗೆ ಇರುತ್ತದೆ ಅಲ್ಲಿಯವರೆಗೆ ಅಸ್ಪೃಶ್ಯತೆ ಇರುತ್ತದೆ. ಅಸ್ಪೃಶ್ಯತೆಯೆಂಬ ಸಂಸ್ಥೆಯು ಅನೇಕ ರೂಪಗಳಲ್ಲಿ ಕಂಡು ಬರುತ್ತದೆ. ಅದರ ಆಚರಣೆಯನ್ನು ಶಾಸನಗಳ ಮೂಲಕ ನಿಷೇಧಿಸಲಾಗಿದೆ.

ಭಾರತೀಯ ಸಂವಿಧಾನದ ಮೂರನೇ ಭಾಗದಲ್ಲಿ ಭಾರತದ ನಾಗರಿಕರಿಗೆ ನೀಡಲಾಗಿರುವ ಮೂಲಭೂತ ಹಕ್ಕುಗಳು ಭಾಗದಲ್ಲಿ ಸಮಾನತೆಯ ಹಕ್ಕು ೧೪ರಿಂದ ೧೮ರವರೆಗೆ ಇರುವ ಪರಿಚ್ಛೇದಗಳು ಸಮಾನತೆಯ ಹಕ್ಕು ಪ್ರಜಾಪ್ರಭುತ್ವದ ಆಧಾರ ಸ್ತಂಭ ಸಮಾನತೆ ಎಂದರೆ ರಾಜ್ಯವು ತನ್ನ ಎಲ್ಲಾ ಪ್ರಜೆಗಳಿಗೆ ಸಮಾನವಾಗಿ ಹಕ್ಕುಗಳನ್ನು ನೀಡುವುದೇ ಆಗಿರುತ್ತದೆ. ಮತ್ತು ಮೂಲಭೂತವಾಗಿ

ಸಮಾಜವನ್ನು ಸಮತಟ್ಟು ಮಾಡುವ ಒಂದು ಪ್ರಕ್ರಿಯೆ ಸಾಮಾನ್ಯವಾಗಿ ಸಮಾಜದಲ್ಲಿ ಯಾರೊಬ್ಬರಿಗೂ ವಿಶೇಷ ಸೌಲಭ್ಯಗಳಿಲ್ಲದಿರುವುದೇ ಆಗಿದೆ.

೧೪ನೇ ಪರಿಚ್ಛೇದ ಪ್ರಕಾರ, ಕಾನೂನಿನ ಮುಂದೆ ಪ್ರತಿಯೊಬ್ಬರೂ ಸರಿಸಮಾನರು. ಭಾರತದ ಭೌಗೋಳಿಕ ವ್ಯಾಪ್ತಿಯೊಳಗೆ ಇರುವ ಪ್ರತಿಯೊಬ್ಬರಿಗೂ ಕಾನೂನು ಸಮಾನವಾಗಿ ಅನ್ವಯಿಸಲ್ಪಡುತ್ತದೆ.

೧೫ನೇ ಪರಿಚ್ಛೇದ ಪ್ರಕಾರ ಹುಟ್ಟಿದ ಸ್ಥಳದ ಆಧಾರದ ಮೇಲೆ ಅಂದರೆ ಧರ್ಮ, ಕುಲ, ಜನ್ಮ, ಲಿಂಗ ಇವುಗಳ ಆಧಾರದ ಮೇಲೆ ತಾರತಮ್ಯವನ್ನುಂಟು ಮಾಡುವಂತಿಲ್ಲ. ಪ್ರಜೆಗಳಿಗೆ ಸಾರ್ವಜನಿಕ ಸ್ಥಳ, ಮನರಂಜನಾ ಸ್ಥಳ, ಬಾವಿಗಳಿಗೆ, ಅಂಗಡಿ, ಹೋಟೆಲ್ ಮುಂತಾದ ಸ್ಥಳಗಳಿಗೆ ಪ್ರವೇಶ ನಿರಾಕರಿಸುವಂತಿಲ್ಲ. ೧೫ ಉಪಪರಿಚ್ಛೇದ ೨ರ ಪ್ರಕಾರ ಬಾವಿ, ಟ್ಯಾಂಕು, ಸಾರ್ವಜನಿಕ ವಿರಾಮ ಸ್ಥಳಗಳಿಗೆ ಯಾವುದೇ ನಿರ್ಬಂಧವನ್ನು ಹೇರುವಂತಿಲ್ಲ. ೧೫(೩)ಪರಿಚ್ಛೇದದ ಪ್ರಕಾರ ಮಕ್ಕಳು ಮತ್ತು ಮಹಿಳೆಯರ ರಕ್ಷಣೆಗಾಗಿ ವಿಶೇಷ ಕಾನೂನುಗಳ ರಚನೆಗೆ ಅವಕಾಶ ಕಲ್ಪಿಸಲಾಗಿದೆ.

೧೭ನೇ ಪರಿಚ್ಛೇದದ ಪ್ರಕಾರ ಅಸ್ಪೃಶ್ಯತೆಯನ್ನು ಯಾವುದೇ ಸಂದರ್ಭದಲ್ಲಿ ಯಾವುದೇ ಸ್ಥಳದಲ್ಲಿ ಆಚರಿಸುವುದು ಸಂವಿಧಾನದ ಅಪರಾಧ. ವಿಶೇಷವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರನ್ನು ಕೀಳಾಗಿ ಕಾಣುವುದು ಅಸ್ಪೃಶ್ಯರೆಂದು ನೋಡುವುದನ್ನು ನಿಷೇಧಿಸಲಾಗಿದೆ. ಆದರೆ ಪೂಜಾ ಸ್ಥಳಗಳಿಗೆ ಪ್ರವೇಶ ನಿರ್ಬಂಧ, ಅಂಗಡಿ, ಹೋಟೆಲ್, ಮನರಂಜನಾ ಸ್ಥಳಗಳಿಗೆ ಪ್ರವೇಶ ನೀಡದಿದ್ದಾಗ, ಪರಿಶಿಷ್ಟ ಸಮುದಾಯಕ್ಕೆ ಸೇರಿದ ವ್ಯಕ್ತಿಯನ್ನು ಬಹಿರಂಗವಾಗಿ ಅವಮಾನಿಸಿದಾಗ ಅಂಥವುಗಳನ್ನು ಅಸ್ಪೃಶ್ಯವೆಂದು ಹೇಳಲಾಗಿದೆ.

ಅಂದರೆ ಭಾರತೀಯ ಸಂವಿಧಾನದ ಪರಿಚ್ಛೇದಗಳು ಸ್ಪಷ್ಟಪಡಿಸಿವೆ. ತಪ್ಪು ಎಸಗಿದವರನ್ನು ಶಿಕ್ಷೆಗೆ ಗುರಿಪಡಿಸುವ ಅಧಿಕಾರವಿದ್ದರೂ, ಅರಿತವರು ಮತ್ತು ಅರಿಯದೇ ಇರುವವರು ನಾಚಿಕೆಯಿಲ್ಲದೆ ದೇಶದ ಬಹುದೊಡ್ಡ ಸಮುದಾಯದ ದಲಿತರ ಬದುಕು ನಾಯಿ–ನರಿಯಂತೆ ಅಸಹಾಯಕರಾಗಿ ಜೀವನವನ್ನು ಭಾರತದ ಏಳು ಲಕ್ಷ ಹಳ್ಳಿಗಳಲ್ಲಿ ಜೀವನ ಸಾಗಿಸುವ ಹಂಗಿನ ಬದುಕು ವರ್ಣಿಸಲು ಅಸಾಧ್ಯವಾದ ಸಂಗತಿಯಾಗಿದೆ.

ದಲಿತನಾದವನು ವೈದ್ಯನಾಗಿರಲಿ, ಇಂಜಿನೀಯರ್ ಆಗಿರಲಿ, ಪ್ರಾಧ್ಯಾಪಕನಾಗಿರಲಿ ಧೈರ್ಯವಾಗಿ ಅವರ ಊರಿನ ಸಾರ್ವಜನಿಕ ಹೋಟೆಲ್, ದೇವಸ್ಥಾನ, ಸಾರ್ವಜನಿಕ ಬಾವಿಯಿಂದ ನೀರು ತರುವ ಹಕ್ಕು ಇದೆ. ಶಾಲೆಯಲ್ಲಿ ಇಂದು ಕೂಡ ದಲಿತ ಮಕ್ಕಳು ಪ್ರತ್ಯೇಕ ಸಾಲಿನಲ್ಲಿ (ಅದರಲ್ಲೂ ಕೊನೆಯ ಸಾಲಿನಲ್ಲಿ) ಕುಳಿತುಕೊಂಡು ಕಲಿಯುವ ವಾತಾವರಣ ಇನ್ನು ಜೀವಂತವಾಗಿದೆ. ದಲಿತ ಮಕ್ಕಳು ಸಾರ್ವಜನಿಕ ಮಕ್ಕಳೊಂದಿಗೆ ಬೆರೆತು ಚಿನ್ನಿ–ದಾಂಡು, ಕ್ರಿಕೆಟ್, ಕಬಡ್ಡಿ ಮುಂತಾದ ಮುಟ್ಟಿಸಿಕೊಳ್ಳುವ ಆಟಗಳಿಗೆ ಅವಕಾಶವಿಲ್ಲ.

ಅಂಬೇಡ್ಕರ್ ನೀಡಿದ ಸಂವಿಧಾನ ಆಶಯದಂತೆ ಕಲಿತ ವೈದ್ಯ, ಇಂಜಿನಿಯರ್, ಪ್ರಾಧ್ಯಾಪಕನ ಬದುಕು ಮಡಿಮೈಲಿಗೆ, ಕೊಳುಕು ವ್ಯವಸ್ಥೆಗೆ ಬಲಿಯಾದ ಪರಿ ಒಂದು ರೀತಿ ಹಕ್ಕು ಮತ್ತು ಹಂಗಿನ ಪ್ರಶ್ನೆಯಾಗಿದೆ. ಶಾಲೆಗಳಲ್ಲಿ ಕಲಿಯುವ ಮಕ್ಕಳಲ್ಲಿ ತಾರತಮ್ಯ ಮಾಡಿದಾಗ ಎಳೆ ಮನಸಿನ ಮೇಲೆ ಗಾಢವಾದ ಪರಿಣಾಮ ಉಂಟಾಗುತ್ತದೆ.

ಭಾರತದಲ್ಲಿ ಜಾತಿಯ ಹಕ್ಕು ಮತ್ತು ಹಂಗು ಗಂಭೀರವಾದ ವಿಷಯವಾಗಿಬಿಟ್ಟಿದೆ. ಪ್ರತಿ ಗ್ರಾಮದಲ್ಲಿ ನಡೆಯುವ ಪರಿಷೆ, ಹಬ್ಬ, ಹರಿದಿನ, ಸಾಂಸ್ಕೃತಿಕ ಚಟುವಟಿಕೆಗಳನ್ನು ದೂರದಿಂದಲೇ ನೋಡುವ ಸ್ಥಿತಿಯಿದೆ. ನೇರವಾಗಿ ದಲಿತ ಭಾಗಿಯಾಗುವಂತಿಲ್ಲ, ಒಂದು ವೇಳೆ ಹಕ್ಕು ಅಂಥ ಪ್ರಯತ್ನಿಸಿದಲ್ಲಿ ಗಲಭೆ, ಮಾರಣಹೋಮವೇ ನಡೆದುಬಿಡುತ್ತವೆ. ನಂತರ ಊರಿನಿಂದ ಪ್ರತ್ಯೇಕವಾಗಿ ಬದುಕು ನಡೆಸಬೇಕು. ದಲಿತರು ಸಂವಿಧಾನಬದ್ಧವಾದ ಹಕ್ಕುಗಳನ್ನು ಚಲಾಯಿಸಿದರೆ ದಲಿತ ಸಮುದಾಯವನ್ನು ಇಡೀಯಾಗಿ ಬಹಿಷ್ಕರಿಸುತ್ತಾರೆ. ಅಂಗಡಿಯಿಂದ ದಿನಸಿಗಳನ್ನು ಕೊಡದೆ ನಿರ್ಬಂಧಿಸುವುದು, ನೀರು, ವಿದ್ಯುತ್ ವ್ಯತ್ಯಯ ಮಾಡುವುದು ನಡೆಯುತ್ತದೆ. ಭೂಮಿಯಿಲ್ಲದ ದಲಿತರಿಗೆ ಕೂಲಿಯೇ ಪ್ರಮುಖ ಆಧಾರವಾಗಿರುವುದರಿಂದ ಕೂಲಿ ನೀಡದೆ ಹಸಿವಿನಿಂದ ಉಪವಾಸದ ಬದುಕಿಗೆ ಶರಣಾಗಬೇಕಾಗಿದೆ. ಇಂತಹ ನತದೃಷ್ಟ ಮೂವತ್ತು ಕೋಟಿಯ ದಲಿತರ ಬದುಕಿನ ಹಕ್ಕು ಮತ್ತು ಹಂಗಿನ ಪ್ರಶ್ನೆಯಾಗಿ ಜೀವಂತವಾಗಿ ಉಳಿದಿದೆ. ಶ್ರಮಜೀವಿಗಳು ಜಾತಿಯ ಹುನ್ನಾರದಿಂದ ನರಳುವ ಶೋಚನೀಯ ಸ್ಥಿತಿ ಹೇಳತೀರದು. ಇವರನ್ನು ಅಭಿವೃದ್ಧಿಯಿಂದ ಹೊರಗಿಡುವುದು ದೇಶಕ್ಕೆ ನಾಚಿಕೆಯಾಗುವುದಿಲ್ಲವೇ ಎನ್ನುವುದು ಯಕ್ಷ ಪ್ರಶ್ನೆಯಾಗಿದೆ.

ದಲಿತರು ಹೋಟೆಲ್ ಪ್ರವೇಶ ಬಯಸುವುದು ಅವರ ಹಕ್ಕು. ದಲಿತರು ದೇಶದ ನಾಗರಿಕರಾಗಿದ್ದು ದೇವಸ್ಥಾನ ಪ್ರವೇಶ ಮಾಡುವ ಹಕ್ಕು ಸಂವಿಧಾನಬದ್ಧವಾಗಿದೆ. ಆದರೆ ಸವರ್ಣೀಯರು ಈ ಬಗ್ಗೆ ನಿಷೇಧ ವಿಧಿಸುವುದು ಸಂವಿಧಾನ ವಿರೋಧಿ ವಿಚಾರವಾಗಿದೆ. ಸಾರ್ವಜನಿಕ ಬಾವಿ, ಕೆರೆ ಕಟ್ಟೆಯ ನೀರು ಬಳಸುವ ಪರಮಾಧಿಕಾರವಿದ್ದರೂ ಅದರ ಹಕ್ಕು ಚಲಾಯಿಸಿದರೆ ನಿರ್ಬಂಧವೆನ್ನುವ ಮಾತು ಹುಟ್ಟಿಕೊಳ್ಳುತ್ತದೆ. ಚುನಾವಣೆಯಲ್ಲಿ ಮತ ಹಾಕುವ ಹಕ್ಕು ದಲಿತರಿಗೆ ನೀಡಿದ ಒಂದು ಶಕ್ತಿ. ಅದನ್ನು ಪಟ್ಟಭದ್ರರು ಹೇಳಿದವರಿಗೆ, ಪಕ್ಷಕ್ಕೆ ಮತ ನೀಡುವ ಪದ್ಧತಿ ಇನ್ನೂ ಜೀವಂತವಾಗಿದೆ. ಜಾತ್ರೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ದೇವರ ಬಾವುಟ ಹರಾಜಿನಲ್ಲಿ ಪಡೆಯುವ ಹಕ್ಕು ಇದೆ. ಅದರೆ ಪಡೆದ ಜಾತಿಯವನಿಗೆ ಹಂಗಿನ ಪ್ರಶ್ನೆ ಹುಟ್ಟಿ ಕೊಳ್ಳುವುದು ಓದು ಹಕ್ಕು ಇದ್ದರೆ, ಶಿಕ್ಷಕರು ಜಾತಿಯ ಕಾರಣಕ್ಕೆ ತಾರತಮ್ಯದ ಹಂಗು ನಿರ್ಮಿಸುತ್ತಾರೆ. ವಿಶ್ವವಿದ್ಯಾಲಯಗಳಲ್ಲಿ ಜಾತಿ, ಉಪಜಾತಿ ಮುಂದುವರೆದ, ಹಿಂದುಳಿದವ ಅಲ್ಪಸಂಖ್ಯಾತರು, ದಲಿತರಲ್ಲಿ ಹಕ್ಕು ಮತ್ತು ಹಂಗು ಇದ್ದೇ ಇರುತ್ತದೆ.

### ೫.೬. ಉಪಸಂಹಾರ

ಪ್ರಸ್ತುತ ಈ ಅಧ್ಯಾಯದಲ್ಲಿ ಬಹುಮುಖ್ಯ ಫಲಿತಗಳನ್ನು ಕಂಡುಕೊಳ್ಳಲಾಗಿದೆ. ಮೊದಲನೆಯದಾಗಿ ದಲಿತರ ಅಭಿವೃದ್ಧಿಯನ್ನು ಏಕೆ ಮಾನವ ಅಭಿವೃದ್ಧಿ ಚೌಕಟ್ಟಿನಲ್ಲಿ ಅಧ್ಯಯನ ಮಾಡಬೇಕು ಎಂಬುದನ್ನು ಇಲ್ಲಿ ಸೋದಾಹರಣವಾಗಿ ವಿಶ್ಲೇಷಿಸಲಾಗಿದೆ. ಈ ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ದಲಿತರು ಮತ್ತು ದಲಿತೇತರರ ನಡುವೆ ಎಷ್ಟು ವ್ಯತ್ಯಾಸವಿದೆ ಎಂಬುದನ್ನು ದಾಖಲಿಸಲಾಗಿದೆ. ಡಾ. ಎಂ. ಚಂದ್ರ ಪೂಜಾರಿ ಅವರು ಅಭಿವೃದ್ಧಿ ಪಡಿಸಿರುವ ದಲಿತ ಅಭಿವೃದ್ಧಿ ಸೂಚ್ಯಂಕವನ್ನು ಇಲ್ಲಿ ಪರಿಚಯಿಸಲಾಗಿದೆ. ಇದೊಂದು ಎಂಪೆರಿಕಲ್ ಅಧ್ಯಯನವಾಗಿದೆ. ಸಂಶೋಧನಾ ಅಧ್ಯಯನ ದೃಷ್ಟಿಯಿಂದ ಚಿತ್ರದುರ್ಗ-ದಾವಣಗೆರೆ ಜಿಲ್ಲೆಗಳಲ್ಲಿನ ದಲಿತರ ಅಭಿವೃದ್ಧಿ ಮಟ್ಟವನ್ನು ದಲಿತ ಅಭಿವೃದ್ಧಿ ಸೂಚ್ಯಂಕದ(ಮಾದರಿ ಪರೀಕ್ಷೆ) ಮೂಲಕ ವಿಶ್ಲೇಷಣೆ ಮಾಡಲಾಗಿದೆ. ಮುಖ್ಯವಾಗಿ ೩೦ ಜಿಲ್ಲೆಗಳ ಸಂಯುಕ್ತ ದಲಿತ ಮಾನವ ಅಭಿವೃದ್ಧಿ ಸೂಚಿಗಳನ್ನು ತುಲನಾತ್ಮಕ ಅಧ್ಯಯನ ಮಾಡಲಾಗಿದೆ ಮತ್ತು ಸೂಚಿಗಳನ್ನು ಪರೀಕ್ಷಿಸಲಾಗಿದೆ. ಈ ಅಧ್ಯಯನದಲ್ಲಿ ಜನಗಣತಿ ವರದಿಗಳು, ಮಾನವ ಅಭಿವೃದ್ಧಿ ವರದಿಗಳು ಇತ್ಯಾದಿಗಳನ್ನು ಬಳಸಿಕೊಳ್ಳಲಾಗಿದೆ. ಈ ಅಧ್ಯಯನದ ಮಹತ್ವದ ಫಲಿತವೆಂದರೆ ದಲಿತರು ಮತ್ತು ದಲಿತೇತರರ ನಡುವಿನ ಅಸಮಾನತೆ ಅನ್ನುವುದು ಕೇವಲ ವರಮಾನಕ್ಕೆ ಅಥವಾ ಉತ್ಪಾದನೆಗೆ ಸಂಬಂಧಿಸಿದ್ದು ಮಾತ್ರವಲ್ಲ. ಇದು ಮೂಲಭೂತವಾಗಿ ಅನೂಚಾನವಾಗಿ ಮುಂದುವರಿದು ಕೊಂಡು ಬರುತ್ತಿರುವ ಅಸಮಾನತೆಯಾಗಿದೆ. ಹಾಗೆಯೇ ದಲಿತರ ಅಭಿವೃದ್ಧಿಯ ಹಕ್ಕಿನ ಪ್ರಶ್ನೆಗಳ ಕುರಿತು ಚರ್ಚಿಸಲಾಗಿದೆ.

ದಲಿತರು ಸಾಮಾನ್ಯ ಜನಸಂಖ್ಯೆಗೆ ಎದುರಾಗಿ ಸಾಕ್ಷರತೆ, ಶಿಕ್ಷಣ, ಉದ್ಯೋಗ, ಭೂಮಾಲೀಕತ್ವ, ಕಾರ್ಮಿಕ ಶಕ್ತಿ ಮುಂತಾದ ಸಂಗತಿಗಳಲ್ಲಿ ಯಾವ ಮಟ್ಟದಲ್ಲಿದ್ದಾರೆ ಎಂಬುದನ್ನು ಪರಿಶೀಲಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ದಲಿತರ ಮಾನವ ಅಭಿವೃದ್ಧಿ ಆಯಾಮವನ್ನು ಹಕ್ಕುಗಳ ಪರಿಭಾಷೆಯಲ್ಲಿ ಪರಿಶೀಲಿಸಲು ಈ ಅಧ್ಯಾಯದಲ್ಲಿ ಪ್ರಯತ್ನ ಮಾಡಲಾಗಿದೆ. ಅಭಿವೃದ್ಧಿ ಅನ್ನುವುದು ದತ್ತಿ-ದಾನ-ಧರ್ಮದ ಸಂಗತಿಯಲ್ಲ. ದಲಿತರ ಅಭಿವೃದ್ಧಿಯು ಯಾವುದೇ ಕಾರಣಕ್ಕೂ ದಲಿತೇತರರ ಕೃಪೆಯಲ್ಲಿ ನಡೆಯಬೇಕಾದ ಅಗತ್ಯವಿಲ್ಲ. ದಲಿತರ ಅಭಿವೃದ್ಧಿಯನ್ನು ಸಮಾನತೆ ಮತ್ತು ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಪರಿಭಾವಿಸಿಕೊಳ್ಳಬೇಕಾಗಿದೆ. ಒಟ್ಟಾರೆಯಾಗಿ ಸಮಾಜವು ದಲಿತರ ಬಗ್ಗೆ ಸ್ಪಂದಿಸದಿದ್ದರೆ ದಲಿತರು ಮತ್ತು ದಲಿತೇತರರ ನಡುವಿನ ಅಸಮಾನತೆಯನ್ನು ತೊಡೆದು ಹಾಕುವುದು ಅಸಾಧ್ಯ.

* * *

ಅಧ್ಯಾಯ ಆರು

# ಸಮಾರೋಪ : ಸಾರಾಂಶ, ಫಲಿತಗಳು ಮತ್ತು ಸಲಹೆ – ಶಿಫಾರಸ್ಸುಗಳು

ಪೀಠಿಕೆ

ಅಧ್ಯಯನದ ಸಾರಾಂಶ

ಅಧ್ಯಯನದ ಪ್ರಧಾನ ಫಲಿತಗಳು

ದಲಿತರ ವಿಮೋಚನೆಗೆ ಅಧ್ಯಯನದ ಆಧಾರದಲ್ಲಿ

ಮೂಡಿಬಂದ ಸಲಹೆ–ಶಿಫಾರಸ್ಸುಗಳು

ಅಧ್ಯಯನದ ಕೊಡುಗೆ

ಅಧ್ಯಾಯ ಆರು

# ಸಮಾರೋಪ: ಸಾರಾಂಶ, ಫಲಿತಗಳು ಮತ್ತು ಸಲಹೆ–ಶಿಫಾರಸ್ಸುಗಳು

## ೬.೧. ಪೀಠಿಕೆ

ಸಮಾಜ ವಿಜ್ಞಾನಗಳಲ್ಲಿ ಸಾಮಾನ್ಯವಾಗಿರುವಂತೆ ಪ್ರಸ್ತುತ ಮಹಾಪ್ರಬಂಧದ ಕೊನೆಯ ಸಮಾರೋಪ ಅಧ್ಯಾಯವು ಮೂರು ಭಾಗಗಳನ್ನು ಒಳಗೊಂಡಿದೆ. ಮೊದಲನೆಯ ಭಾಗದಲ್ಲಿ ಅಧ್ಯಯನ ವರದಿಯ ಸಾರಾಂಶವನ್ನು ನೀಡಲಾಗಿದೆ. ಇಡೀ ಅಧ್ಯಯನದ ಸಾರವನ್ನು ಇಲ್ಲಿ ಸಂಕ್ಷಿಪ್ತವಾಗಿ ನೀಡಲಾಗಿದೆ. ಎರಡನೆಯ ಭಾಗದಲ್ಲಿ ಅಧ್ಯಯನದ ಪ್ರಮುಖ ಫಲಿತಗಳನ್ನು ನೀಡಲಾಗಿದೆ. ಅರ್ಥಶಾಸ್ತ್ರದ ಜ್ಞಾನ ಕೋಶಕ್ಕೆ ಪ್ರಸ್ತುತ ಅಧ್ಯಯನವು ನೀಡುತ್ತಿರುವ ಕಾಣಿಕೆಗಳನ್ನು ಚರ್ಚಿಸಲಾಗಿದೆ. ಮೂರನೆಯ ಭಾಗದಲ್ಲಿ ಅಧ್ಯಯನದ ಫಲಿತಗಳನ್ನು ಆಧರಿಸಿ ಪ್ರಮುಖ ಶಿಫಾರಸ್ಸು ಮತ್ತು ಸಲಹೆಗಳನ್ನು ನೀಡಲಾಗಿದೆ.

**ಭಾಗ ೧**

## ೬.೨. ಅಧ್ಯಯನದ ಸಾರಾಂಶ

ಈಗಾಗಲೇ ಸ್ಪಷ್ಟಪಡಿಸಿರುವಂತೆ ಈ ಭಾಗದಲ್ಲಿ ಇಡೀ ಅಧ್ಯಯನ ವರದಿಯ ಸಾರವನ್ನು ಸಂಕ್ಷಿಪ್ತದಲ್ಲಿ ನೀಡಲಾಗಿದೆ. ಈ ಅಧ್ಯಯನವು ಪ್ರಮುಖವಾಗಿ ಕರ್ನಾಟಕದಲ್ಲಿ ಮಾನವ ಅಭಿವೃದ್ಧಿಯ ಬೆಳವಣಿಗೆಯನ್ನು ದಲಿತರನ್ನು ಅನುಲಕ್ಷಿಸಿ ಚರ್ಚಿಸಲಾಗಿದೆ. ಈ ಅಧ್ಯಯನದಲ್ಲಿ ಸಮಾರೋಪವನ್ನು ಸೇರಿಸಿಕೊಂಡು ಆರು ಅಧ್ಯಾಯಗಳಿವೆ.

ಮೊದಲನೆಯ ಅಧ್ಯಾಯವು ಅಧ್ಯಯನದ ಸೈದ್ಧಾಂತಿಕ ಸಂಗತಿಗಳನ್ನು ಒಳಗೊಂಡಿದೆ. ಇದರಲ್ಲಿ ಅಧ್ಯಯನದಲ್ಲಿ ಅಳವಡಿಸಿಕೊಂಡಿರುವ ಅಧ್ಯಯನ ವಿಧಾನವನ್ನು ಚರ್ಚಿಸಲಾಗಿದೆ. ಇದು ಪ್ರಥಮಃ ಎಂಪೆರಿಕಲ್ ಅಧ್ಯಯನವಾಗಿದೆ. ಈ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ಆನುಷಂಗಿಕ ಮೂಲಗಳಿಂದ ಆಯ್ಕೆ ಮಾಡಿಕೊಳ್ಳಲಾಗಿದೆ. ನಮಗೆಲ್ಲ ತಿಳಿದಿರುವಂತೆ ಮಾನವ

ಅಭಿವೃದ್ಧಿ ಅಧ್ಯಯನದಲ್ಲಿ ಮತ್ತು ಮಾನವ ಅಭಿವೃದ್ಧಿ ವರದಿಗಳನ್ನು ಪ್ರಕಟಿಸುವುದರಲ್ಲಿ ಕರ್ನಾಟಕ ದೇಶದಲ್ಲಿ ಮುಂಚೂಣಿಯಲ್ಲಿದೆ. ಅದು ಈಗಾಗಲೆ ರಾಜ್ಯ ಮಟ್ಟದಲ್ಲಿ, ಜಿಲ್ಲೆ ಮತ್ತು ತಾಲ್ಲೂಕು ಮಟ್ಟದಲ್ಲಿ ಮತ್ತು ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಮಾನವ ಅಭಿವೃದ್ಧಿ ವರದಿಗಳನ್ನು ಕರ್ನಾಟಕ ಪ್ರಕಟಿಸಿದೆ. ರಾಜ್ಯ ಮಟ್ಟದ ವರದಿಯಲ್ಲಿ(೨೦೦೫) ಮತ್ತು ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಮಾನವ ಅಭಿವೃದ್ಧಿ ವರದಿಗಳಲ್ಲಿ ದಲಿತರ ಅಭಿವೃದ್ಧಿಯನ್ನು ಮಾಪನ ಮಾಡುವ ಪ್ರಯತ್ನಗಳಾಗಿವೆ. ಕರ್ನಾಟಕ ರಾಜ್ಯ ಮಾನವ ಅಭಿವೃದ್ಧಿ ವರದಿ ೨೦೦೫ರಲ್ಲಿ ರಾಜ್ಯದಲ್ಲಿನ ಪ.ಜಾ. ಮತ್ತು ಪ.ಪಂ.ಗಳ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಮಾಪನ ಮಾಡುವ ಪ್ರಯತ್ನ ಮಾಡಲಾಗಿದೆ. ಅದೇ ರೀತಿಯಲ್ಲಿ ಡಾ. ಎಂ. ಚಂದ್ರ ಪೂಜಾರಿ ಅವರ ವಿಧಾನವನ್ನು ಅನುಸರಿಸಿಕೊಂಡು ಗ್ರಾಮದಲ್ಲಿ ೫೦ ಪ.ಜಾ. ಕುಟುಂಬಗಳನ್ನು ಆಯ್ಕೆ ಮಾಡಿಕೊಂಡು ರಾಜ್ಯದ ಪ್ರತಿ ಜಿಲ್ಲೆಯಲ್ಲಿ ಪ್ರಯೋಗಾತ್ಮಕವಾಗಿ ದಲಿತರ ಅಭಿವೃದ್ಧಿ ಸೂಚ್ಯಂಕವನ್ನು ಮಾಪನ ಮಾಡಲಾಗಿದೆ. ಈ ಎಲ್ಲಾ ವರದಿಗಳು ಮತ್ತು ಡಾ. ಎಂ. ಚಂದ್ರ ಪೂಜಾರಿ ಅವರ ಅಧ್ಯಯನಗಳನ್ನು ಆಧಾರವಾಗಿಟ್ಟುಕೊಂಡು ಪ್ರಸ್ತುತ ಅಧ್ಯಯನದಲ್ಲಿ ರಾಜ್ಯದಲ್ಲಿನ ದಲಿತರ ಮಾನವ ಅಭಿವೃದ್ಧಿ ಸ್ಥಿತಿಗತಿಗಳನ್ನು ಕೂಲಂಕಷವಾಗಿ ಚರ್ಚೆ ಮಾಡಲಾಗಿದೆ. ಈ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನಕ್ಕೆ ಸೂಕ್ತವಾದ ಸಂಶೋಧನ ಪ್ರಶ್ನೆಗಳನ್ನು ರೂಪಿಸಿಕೊಳ್ಳಲಾಗಿದೆ. ಅದರ ವಿವರಗಳನ್ನು ಮೊದಲ ಅಧ್ಯಾಯದಲ್ಲಿ ನೀಡಲಾಗಿದೆ. ದಲಿತರ ಮಾನವ ಅಭಿವೃದ್ಧಿ ನೆಲೆಗಳನ್ನು ಇಲ್ಲಿ ಹಕ್ಕುಗಳ ಪರಿಭಾಷೆಯಲ್ಲಿ ಚರ್ಚಿಸಲಾಗಿದೆ. ಹಕ್ಕುಗಳಲ್ಲಿನ ಎರಡು ವಿಧಗಳಾದ ಇತ್ಯಾತ್ಮಕ (ಪಾಸಿಟಿವ್ ರೈಟ್ಸ್) ಹಕ್ಕುಗಳು ಮತ್ತು ನೇತ್ಯಾತ್ಮಕ(ನೆಗೆಟಿವ್ ರೈಟ್ಸ್) ಹಕ್ಕುಗಳಲ್ಲಿ ದಲಿತರ ಅಭಿವೃದ್ಧಿ ದೃಷ್ಟಿಯಿಂದ ಇತ್ಯಾತ್ಮಕ ಹಕ್ಕುಗಳು ಹೇಗೆ ಮುಖ್ಯ ಅನ್ನುವುದನ್ನು ಸೈದ್ಧಾಂತಿಕ ಆಧಾರದಲ್ಲಿ ಚರ್ಚಿಸಲಾಗಿದೆ. ಅಭಿವೃದ್ಧಿ ಅನ್ನುವುದು ಜನರ ಹಕ್ಕೇ ವಿನಃ ಅದು ದತ್ತಿ–ದಾನವಲ್ಲ. ಈ ಅಧ್ಯಾಯದಲ್ಲಿ ಅಧ್ಯಯನ ವಿಧಾನದ ಜೊತೆಗೆ ಅಧ್ಯಯನದ ಉದ್ದೇಶಗಳು ಮತ್ತು ಅಧ್ಯಯನದ ಮಹತ್ವಗಳನ್ನು ಚರ್ಚಿಸಲಾಗಿದೆ. ಈ ಅಧ್ಯಯನದ ಪ್ರಮುಖ ಉದ್ದೇಶಗಳು ಹೀಗಿವೆ: (೧) ಮಾನವ ಅಭಿವೃದ್ಧಿ ಪ್ರಣಾಳಿಕೆಯ ಚಾರಿತ್ರಿಕ ಬೆಳವಣಿಗೆಯನ್ನು ಪರಿಶೀಲಿಸುವುದು. (೨) ಕರ್ನಾಟಕದಲ್ಲಿ ದಲಿತರ ಮಾನವ ಅಭಿವೃದ್ಧಿಯ ವಿವಿಧ ಆಯಾಮಗಳನ್ನು ಚರ್ಚಿಸುವುದು. (೩) ದಲಿತರು ಮತ್ತು ಸಾಮಾನ್ಯ ಜನಸಂಖ್ಯೆಯ ಮಾನವ ಅಭಿವೃದ್ಧಿ ಭಿನ್ನತೆಗಳಿಗೆ ಕಾರಣಗಳನ್ನು ಚರ್ಚಿಸುವುದು. ಮತ್ತು (೪) ದಲಿತ ಮಾನವ ಅಭಿವೃದ್ಧಿ ಸೂಚಿ ಮತ್ತು ಅದರ ಫಲಿತಗಳನ್ನು ಚರ್ಚಿಸುವುದು. ಇವಿಷ್ಟು ಸಂಗತಿಗಳನ್ನು ಮೊದಲ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ದಲಿತ ಮಾನವ ಅಭಿವೃದ್ಧಿಯ ವಿವಿಧ ಆಯಾಮಗಳನ್ನು ಚರ್ಚಿಸಲಾಗಿದೆ. ಎರಡನೆಯ ಅಧ್ಯಾಯ 'ಮಾನವ ಅಭಿವೃದ್ಧಿ ಪ್ರಣಾಳಿಕೆಯ ಚಾರಿತ್ರಿಕ ಹಿನ್ನೆಲೆ'ಯಲ್ಲಿ ಅಭಿವೃದ್ಧಿಗೆ ಸಂಬಂಧಿಸಿದ ಸೈದ್ಧಾಂತಿಕ ಸಂಗತಿಗಳನ್ನು ಚರ್ಚಿಸಲಾಗಿದೆ. ಇದಲ್ಲದೆ ಮಾನವ ಅಭಿವೃದ್ಧಿ ಪ್ರಣಾಳಿಕೆ ಕುರಿತ ಅಧ್ಯಯನಗಳ ಸಮೀಕ್ಷೆಯನ್ನು ಮಾಡಲಾಗಿದೆ. ಐತಿಹಾಸಿಕವಾಗಿ ಮಾನವ ಅಭಿವೃದ್ಧಿ ಪ್ರಣಾಳಿಕೆಯ ಮೂಲವನ್ನು ಗ್ರೀಕ್ ತತ್ವಜ್ಞಾನಿಗಳ ಬರಹಗಳಲ್ಲಿ

ಗುರುತಿಸಬಹುದಾಗಿದೆ. ಅಲ್ಲಿ ಅರಿಸ್ಟಾಟಲ್ ಮುಂತಾದವರು ಅಭಿವೃದ್ಧಿಯನ್ನು ಜನರ ನೆಲೆಯಿಂದ ಪರಿಭಾವಿಸಿಕೊಳ್ಳಲು ಪ್ರಯತ್ನಿಸಿದ್ದನ್ನು ಕಾಣಬಹುದು. ಆದರೆ ಇದಕ್ಕೆ ಒಂದು ಸ್ಪಷ್ಟ ರೂಪವನ್ನು ಆಧುನಿಕ ಕಾಲದಲ್ಲಿ ಅಮರ್ತ್ಯ ಸೇನ್, ಮೆಹಬೂಬ್ ಉಲ್ ಹಕ್. ಮಾರ್ಥ ನುಸ್ ಬಮ್, ಜೀನ್ ಡ್ರೀಜ್ ಮುಂತಾದವರು ನೀಡಿದರು. ಇವರೆಲ್ಲರ ಅಭಿಮತದಂತೆ ಅಭಿವೃದ್ಧಿ ಅನ್ನುವುದು ಜನರಿಗೆ ಸಂಬಂಧಿಸಿದ ಸಂಗತಿ ಅನ್ನುವುದನ್ನು ಪ್ರಸ್ತುತ ಅಧ್ಯಯನದ ಎರಡನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಇಲ್ಲಿ ಅಮರ್ತ್ಯ ಸೇನ್ ಮತ್ತು ಮೆಹಬೂಬ್ ಉಲ್ ಹಕ್ ಅವರು ಪ್ರತಿಪಾದಿಸಿದ ವರಮಾನ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿಗಳ ನಡುವಿನ ವ್ಯತ್ಯಾಸಗಳನ್ನು ವಿವರವಾಗಿ ಚರ್ಚಿಸಲಾಗಿದೆ. ಇದರ ಜೊತೆಗೆ ಆರ್ಥಿಕ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿಗಳ ನಡುವಿನ ಭಿನ್ನತೆಗಳನ್ನು ಗುರುತಿಸಲಾಗಿದೆ.

ಮಾನವ ಅಭಿವೃದ್ಧಿ ಪ್ರಣಾಳಿಕೆಯ ಚಾರಿತ್ರಿಕ ಬೆಳವಣಿಗೆಯಲ್ಲಿ ಅತ್ಯಂತ ಭಾವನಾತ್ಮಕ ಹಂತವೆಂದರೆ ೧೯೯೦ರಲ್ಲಿ ಮೆಹಬೂಬ್ ಉಲ್-ಹಕ್ ಅವರು ವಿಶ್ವಸಂಸ್ಥೆಯ ಯು.ಎನ್.ಡಿ.ಪಿ.ಗೆ ರೂಪಿಸಿದ ವರದಿಯನ್ನು ಕಟ್ಟಿದ ಮಾನವ ಅಭಿವೃದ್ಧಿ ಸೂಚ್ಯಂಕವಾಗಿದೆ. ಈ ಸೂಚ್ಯಂಕವನ್ನು ರೂಪಿಸಿದ ಕೀರ್ತಿ ಮೆಹಬೂಬ್ ಉಲ್-ಹಕ್ ಅವರಿಗೆ ಸಲ್ಲಬೇಕು. ಈ ಪ್ರಣಾಳಿಕೆಯ ಬೆಳವಣಿಗೆಯಲ್ಲಿ ಮತ್ತೊಂದು ಗುರಿತಿಸಬೇಕಾದ ಹಂತವೆಂದರೆ ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರವನ್ನು ಗುರುತಿಸಲು ಅಭಿವೃದ್ಧಿಪಡಿಸಿದ ಲಿಂಗ ಸಂಬಂಧಿ ಅಭಿವೃದ್ಧಿ ಸೂಚ್ಯಂಕ(೧೯೯೫). ಮಾನವ ಅಭಿವೃದ್ಧಿ ಪ್ರಣಾಳಿಕೆಗೆ ಜಾಗತಿಕ ಮತ್ತು ಕಾರ್ಯನಿರ್ವಹಣಾ ರೂಪವನ್ನು ವಿಶ್ವಸಂಸ್ಥೆಯ ಯು.ಎನ್.ಡಿ.ಪಿ.ಯು ನೀಡಿತು. ಅದು ೧೯೯೦ರಿಂದ ಪ್ರಕಟಿಸುತ್ತಿರುವ ಮಾನವ ಅಭಿವೃದ್ಧಿ ವರದಿಗಳು ಜಾಗತಿಕ ಮಟ್ಟದಲ್ಲಿ ಮಾನವ ಅಭಿವೃದ್ಧಿ ಪ್ರಣಾಳಿಕೆಗೆ ಒಂದು ಮನ್ನಣೆಯನ್ನು ದೊರಕಿಸಿಕೊಟ್ಟವು.

ಈ ಹಿನ್ನೆಲೆಯಲ್ಲಿ ಕರ್ನಾಟಕವು ತನ್ನ ರಾಜ್ಯ ಮಟ್ಟದಲ್ಲಿ ಮಾನವ ಅಭಿವೃದ್ಧಿ ವರದಿಯನ್ನು ಪ್ರಕಟಿಸುವುದರಲ್ಲಿ ಮಹತ್ವದ ಸ್ಥಾನವನ್ನು ಪಡೆದಿರುವುದನ್ನು ಕಾಣಬಹುದು. ದೇಶದಲ್ಲಿ ರಾಜ್ಯ ಮಾನವ ಅಭಿವೃದ್ಧಿ ವರದಿಯನ್ನು ೧೯೯೯ರಲ್ಲಿ ಪ್ರಕಟಿಸಿದ ಎರಡನೆಯ ರಾಜ್ಯ ಕರ್ನಾಟಕ. ಅದು ಇಂದು ರಾಜ್ಯ, ಜಿಲ್ಲಾ ಮತ್ತು ಗ್ರಾಮ ಮಟ್ಟದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರೂಪಿಸುವ ವಿಧಾನವನ್ನು ಅದು ಅಭಿವೃದ್ಧಿಪಡಿಸಿದೆ.

ದೇಶದಲ್ಲಿ ಪ್ರಥಮಬಾರಿಗೆ ಪ.ಜಾ. ಮತ್ತು ಪ.ಪಂ.ಗಳಿಗೆ ಪ್ರತ್ಯೇಕವಾಗಿ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ರೂಪಿಸಿದ ಕೀರ್ತಿ ಕರ್ನಾಟಕಕ್ಕೆ ಸಲ್ಲಬೇಕು. ಅದು ಪ್ರಕಟಿಸಿದ ತನ್ನ ಎರಡನೆಯ ಕರ್ನಾಟಕ ಮಾನವ ಅಭಿವೃದ್ಧಿ ವರದಿ(೨೦೦೫)ಯಲ್ಲಿ ಸ್ಯಾಂಪಲ್ ವಿಧಾನವನ್ನು ಅಳವಡಿಸಿಕೊಂಡು ಪ.ಜಾ. ಮತ್ತು ಪ.ಪಂ.ಗಳಿಗೆ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರೂಪಿಸಲಾಯಿತು. ಇದರ ನಂತರ ೨೦೧೪ರಲ್ಲಿ ಜಿಲ್ಲಾ ಮಾನವ ಅಭಿವೃದ್ಧಿ ವರದಿಗಳನ್ನು ರೂಪಿಸುವ ಸಂದರ್ಭದಲ್ಲಿ ಡಾ. ಚಂದ್ರ ಪೂಜಾರಿ ಅವರು ರೂಪಿಸಿದ್ದ ದಲಿತ ಅಭಿವೃದ್ಧಿ ಸೂಚ್ಯಂಕವನ್ನು ಆಧರಿಸಿ ಪ್ರತಿ

ಜಿಲ್ಲೆಯಲ್ಲಿ ಸ್ಯಾಂಪಲ್ ಮಾಹಿತಿಯನ್ನು ಆಧರಿಸಿ ಎಲ್ಲ ೩೦ ಜಿಲ್ಲೆಗಳಿಗೂ ದಲಿತ ಅಭಿವೃದ್ಧಿ ಸೂಚ್ಯಂಕಗಳನ್ನು ರೂಪಿಸಲಾಯಿತು. ಅದರ ವಿವರಗಳನ್ನು ಪ್ರಸ್ತುತ ಅಧ್ಯಯನದ ಮೂರನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಪ್ರಸ್ತುತ ಎರಡನೆಯ ಅಧ್ಯಾಯದಲ್ಲಿ ಮಾನವ ಅಭಿವೃದ್ಧಿಯ ಚಾರಿತ್ರಿಕ ಬೆಳವಣಿಗೆಯನ್ನು ಅರ್ಥ ಮಾಡಿಕೊಳ್ಳುವ ದೃಷ್ಟಿಯಿಂದ ಮಾನವ ಅಭಿವೃದ್ಧಿ ಕುರಿತ ಅಧ್ಯಯನಗಳ ಸಮೀಕ್ಷೆಯನ್ನು ನಡೆಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ದಲಿತರ ಮಾನವ ಅಭಿವೃದ್ಧಿಯು ಕರ್ನಾಟಕದಲ್ಲಿ ಯಾವ ಸ್ವರೂಪದಲ್ಲಿದೆ ಎಂಬುದನ್ನು ಕುರಿತಂತೆ ಚರ್ಚೆ ಮಾಡಲಾಗಿದೆ. ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫ರಲ್ಲಿ ತೋರಿಸಿರುವಂತೆ ಪ.ಜಾ(೦.೫೭೫) ಮತ್ತು ಪ.ಪಂ.ಗಳ(೦.೫೪೯) ಮಾನವ ಅಭಿವೃದ್ಧಿ ಸೂಚ್ಯಂಕವು ಸುಮಾರು ಹತ್ತು ವರ್ಷಗಳಷ್ಟು ಹಿಂದಿರುವುದು ಸ್ಪಷ್ಟವಾಗಿದೆ. ಒಟ್ಟು ಜನಸಂಖ್ಯೆಯ ಮಾವನ ಅಭಿವೃದ್ಧಿ ಸೂಚ್ಯಂಕ ೦.೬೫೦. ಇಲ್ಲಿ ಅಂತರ ಪ.ಜಾ.ಗೆ ಸಂಬಂಧಿಸಿದಂತೆ ೦.೭೫ರಷ್ಟಿದ್ದರೆ, ಪ.ಪಂ.ಗಳಿಗೆ ಸಂಬಂಧಿಸಿದಂತೆ ಅಂತರ ೦.೧೧೧ ರಷ್ಟಿದೆ. ಒಟ್ಟಾರೆ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದು ೫೮ ವರ್ಷಗಳ ನಂತರವೂ(೧೯೪೭–೨೦೦೫) ಪ.ಜಾ. ಮತ್ತು ಪ.ಪಂ.ಗಳ ಬದುಕಿನ ಸ್ಥಿತಿಗತಿ ಅತ್ಯಂತ ಕೆಳಮಟ್ಟದಲ್ಲಿರುವುದು ವಿಶ್ಲೇಷಣೆಗೆ ಒಳಪಡಿಸಬೇಕಾದ ಸಂಗತಿಯಾಗಿದೆ. ಇದಲ್ಲದೆ ಪ್ರಸ್ತುತ ಅಧ್ಯಾಯದಲ್ಲಿ ಲಿಂಗ ಸಂಬಂಧಿ ಸೂಚ್ಯಂಕವನ್ನು ಕುರಿತಂತೆ ಚರ್ಚೆ ಮಾಡಲಾಗಿದೆ. ಒಟ್ಟು ಜನಸಂಖ್ಯೆಗೆ ಸಂಬಂಧಿಸಿದಂತೆ ಲಿಂಗ ಸಂಬಂಧಿ ಅಭಿವೃದ್ಧಿ ಸೂಚ್ಯಂಕ ೦.೬೩೭ರಷ್ಟಿದ್ದರೆ, ಪ.ಜಾ.ಯದ್ದು ೦.೫೬೪ ಮತ್ತು ಪ.ಪಂ.ದ್ದು ೦.೫೨೭ರಷ್ಟಿದೆ. ಇಲ್ಲಿಯೂ ಒಟ್ಟು ಜನಸಂಖ್ಯೆ ಮತ್ತು ಪ.ಜಾ. ಹಾಗೂ ಪ.ಪಂ.ಗಳ ನಡುವಿನ ಅಂತರ ಸಾಕಷ್ಟಿದೆ.

ಈ ಅಧ್ಯಾಯದ ವಿಶೇಷವೆಂದರೆ ಡಾ. ಎಂ. ಚಂದ್ರ ಪೂಜಾರಿ ಅವರು ಪ್ರಥಮ ಬಾರಿಗೆ ರೂಪಿಸಿರುವ ದಲಿತ ಅಭಿವೃದ್ಧಿ ಸೂಚ್ಯಂಕದ ವಿವಿಧ ಆಯಾಮಗಳನ್ನು ವಿವರಿಸಲಾಗಿದೆ. ಈ ಸೂಚ್ಯಂಕಕ್ಕೆ ಉಪಯೋಗಿಸಿರುವ ಸೂಚಿಗಳು ಮಾನವ ಅಭಿವೃದ್ಧಿ ಸೂಚಿಗಳಿಗೆ ಸಮನಾಗಿರುವುದರಿಂದ ಅದನ್ನು ನಮ್ಮ ಅಧ್ಯಯನದಲ್ಲಿ ದಲಿತ ಮಾನವ ಅಭಿವೃದ್ಧಿ ಸೂಚ್ಯಂಕ ಎಂದು ಕರೆಯಲಾಗಿದೆ. ಈ ಸೂಚ್ಯಂಕಕ್ಕೆ ಉಪಯೋಗಿಸಿರುವ ಸೂಚ್ಯಂಕಗಳು ಹೀಗಿವೆ:

(೧). ಸಾಂಸ್ಥಿಕ ಒಳಗೊಳ್ಳುವಿಕೆ ಸೂಚ್ಯಂಕ, (೨) ಸಾಮಾಜಿಕ ಒಳಗೊಳ್ಳುವಿಕೆ ಸೂಚ್ಯಂಕ (೩) ತಾರತಮ್ಯದ ಅನುಭವದ ಸೂಚ್ಯಂಕ (೪) ತಾರತಮ್ಯ ವಿರುದ್ಧದ ಪ್ರತಿಭಟನೆ ಸೂಚ್ಯಂಕ (೫) ಸಂಘರ್ಷ ಪರಿಹಾರದ ಸೂಚ್ಯಂಕ, (೬) ಸ್ವಾತಂತ್ರ್ಯ ಅನುಭವದ ಸೂಚ್ಯಂಕ (೭) ಜೀವನಮಟ್ಟ ಸೂಚ್ಯಂಕ (೮) ದಲಿತ ಅಭಿವೃದ್ಧಿ ಸೂಚ್ಯಂಕದ ಲಿಂಗ ಸಂಬಂಧಿ ಆಯಾಮಗಳು (೯) ಮೂಲ ಸೌಲಭ್ಯಗಳ ಲಭ್ಯತೆಯ ಸೂಚ್ಯಂಕ (೧೦) ಶೈಕ್ಷಣಿಕ ಸೌಕರ್ಯಗಳ ಲಭ್ಯತೆಯ ಸೂಚ್ಯಂಕ. ಇಲ್ಲಿ ಬಳಸಿರುವ ಪ್ರತಿ ಸೂಚ್ಯಂಕದಲ್ಲಿ ವಿವಿಧ ಒಳಸೂಚಿಗಳನ್ನು ಬಳಸಲಾಗಿದೆ. ಆದ್ದರಿಂದ ಇದೊಂದು ಅಭಿವೃದ್ಧಿಯ ಎಲ್ಲ ಆಯಾಮಗಳನ್ನು ಒಳಗೊಳ್ಳುವ ಸೂಚ್ಯಂಕವಾಗಿದೆ.

ಈ ಅಧ್ಯಾಯದಲ್ಲಿ ಮಾನವ ಅಭಿವೃದ್ಧಿಯ ಅವಿಭಾಜ್ಯ ಅಂಗಗಳಾದ ಸಾಕ್ಷರತೆಯ ಸಾಮಾಜಿಕ ನೆಲೆಗಳನ್ನು ಕುರಿತಂತೆ ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯವನ್ನು ದಲಿತರ ಮತ್ತು ದಲಿತೇತರ ನಡುವಿನ ಮಾನವ ಅಭಿವೃದ್ಧಿ ಸೂಚ್ಯಕಂಗಳ ವ್ಯತ್ಯಾಸಗಳನ್ನು ಕುರಿತ ಚರ್ಚೆಗೆ ಮೀಸಲಿಡಲಾಗಿದೆ. ಅಭಿವೃದ್ಧಿಯ ಯಾವುದೇ ಸೂಚಿಯನ್ನು ತೆಗೆದುಕೊಂಡರೂ ದಲಿತರ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಬದುಕು ದಲಿತೇತರರಿಗಿಂತ ಕೆಳಮಟ್ಟದಲ್ಲಿರುವುದು ಸ್ಪಷ್ಟವಾಗುತ್ತದೆ. ಉದಾಹರಣೆಗೆ ಸಾಕ್ಷರತೆಯಲ್ಲಿ ದಲಿತರ ಸಾಧನೆ ಶೇ. ೬೫ರ ಆಸುಪಾಸಿನಲ್ಲಿದ್ದರೆ ದಲಿತೇತರರ ಸಾಕ್ಷರತಾ ಪ್ರಮಾಣ ಶೇ. ೮೨ಕ್ಕಿಂತ ಅಧಿಕವಾಗಿದೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ದಲಿತರ ಪ್ರಮಾಣ ಶೇ. ೨೪.೧೦ರಷ್ಟಿದ್ದರೆ (೨೦೧೧) ರಾಜ್ಯದ ಒಟ್ಟು ಅಕ್ಷರಸ್ಥರಲ್ಲಿ ದಲಿತರ ಪ್ರಮಾಣ ಕೇವಲ ಶೇ. ೧೭.೦೬. ಇದೇ ರೀತಿಯಲ್ಲಿ ರಾಜ್ಯದ ಒಟ್ಟು ಭೂರಹಿತ ದುಡಿಮೆಗಾರರಲ್ಲಿ ದಲಿತರ ಪ್ರಮಾಣ ಶೇ. ೩೭.೫೮. ಅಂದರೆ ಅಭಿವೃದ್ಧಿ ಸೂಚಿಯನ್ನು ತೆಗೆದುಕೊಂಡರೆ (ಸಾಕ್ಷರತೆ) ದಲಿತರ ಪ್ರಮಾಣವು (ಶೇ. ೧೭.೦೬) ಅವರು ಜನಸಂಖ್ಯೆಯಲ್ಲಿ ಪಡೆದಿರುವ ಪ್ರಮಾಣಕ್ಕಿಂತ (ಶೇ. ೨೪.೧೦) ಕಡಿಮೆ. ಆದರೆ ದುಸ್ಥಿತಿ ಸೂಚಿಯನ್ನು ತೆಗೆದುಕೊಂಡರೆ ದಲಿತರ ಪ್ರಮಾಣವು (ಶೇ. ೩೭.೫೮) ಅವರು ಜನಸಂಖ್ಯೆಯಲ್ಲಿ ಪಡೆದಿರುವುದಕ್ಕಿಂತ ಅಧಿಕ. ಇದೇ ರೀತಿಯಲ್ಲಿ ಸಾಗುವಳಿಗಾರರನ್ನು ತೆಗೆದುಕೊಂಡರೆ ರಾಜ್ಯದ ಒಟ್ಟು ಸಾಗುವಳಿಗಾರರಲ್ಲಿ ದಲಿತರ ಪ್ರಮಾಣ ಕಡಿಮೆ (ಶೇ. ೨೦.೫೧) ಮತ್ತು ದಲಿತೇತರರ ಪ್ರಮಾಣ (ಶೇ. ೭೯.೪೯) ಅಧಿಕ. ಉನ್ನತ ಶಿಕ್ಷಣದಲ್ಲಿ ದಲಿತರ ದಾಖಲಾತಿ ಪ್ರಮಾಣ ಅತಿ ಕೆಳಮಟ್ಟದಲ್ಲಿದೆ. ಈ ಎಲ್ಲ ಸಂಗತಿಗಳನ್ನು ವಿವರವಾಗಿ ನಾಲ್ಕನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಈ ರೀತಿಯಲ್ಲಿ ದಲಿತರು ಮತ್ತು ದಲಿತೇತರರ ನಡುವೆ ಅಭಿವೃದ್ಧಿ ಕುರಿತ ಸಾಧನೆಯಲ್ಲಿ ಏಕೆ ಭಿನ್ನತೆ, ಅಂತರ, ಅಸಮಾನತೆ ಇದೆ? ಸರ್ಕಾರದ ಅಭಿವೃದ್ಧಿ ನೀತಿ-ಕಾರ್ಯಕ್ರಮಗಳು ಎಲ್ಲರಿಗೂ ಸಮಾನವಾಗಿದ್ದರೂ ಏಕೆ ದಲಿತರ ಸಾಧನೆ ಕೆಳಮಟ್ಟದಲ್ಲಿದೆ? ನಮಗೆ ಸ್ವಾತಂತ್ರ್ಯ ಬಂದು ೭೦ ವರ್ಷಗಳಾಗುತ್ತಾ ಬಂದಿದ್ದರೂ ದಲಿತರ ಬದುಕು ಉತ್ತಮವಾಗುತ್ತಿಲ್ಲ. ಸಂವಿಧಾನದಲ್ಲಿ ದಲಿತರಿಗೆ ಅನೇಕ ರಿಯಾಯಿತಿ, ಅನುಕೂಲ, ಮೀಸಲಾತಿ ಮುಂತಾದವುಗಳನ್ನು ನೀಡುತ್ತಿದ್ದರೂ ಅವರ ಸ್ಥಿತಿಗತಿಯು ಸುಧಾರಿಸುತ್ತಿಲ್ಲ ಏಕೆ? ಈ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುವ ಪ್ರಯತ್ನ ನಡೆಸಲಾಗಿದೆ.

೧. ದಲಿತರ ಹಿಂದುಳಿದಿರುವಿಕೆಗೆ ಮತ್ತು ದಲಿತರು ಮತ್ತು ದಲಿತೇತರರ ನಡುವೆ ಅಭಿವೃದ್ಧಿಗೆ ಸಂಬಂಧಿಸಿದಂತೆ ವ್ಯತ್ಯಾಸಗಳಿದ್ದರೆ ಅದಕ್ಕೆ ಒಂದು ಕಾರಣವೆಂದರೆ ದಲಿತರ ಬಗೆಗಿನ ತಾರತಮ್ಯಗಳು ಅನಾದಿ ಕಾಲದಿಂದಲೂ ಮುಂದುವರಿದುಕೊಂಡು ಬರುತ್ತಿರುವುದು. ಅವುಗಳನ್ನು ಒಂದು ತಲೆಮಾರು-ಎರಡು ತಲೆಮಾರು ಅವಧಿಯಲ್ಲಿ ನಿವಾರಿಸುವುದು ಸಾಧ್ಯವಿಲ್ಲ.

೨. ನಮ್ಮ ಸಮಾಜದಲ್ಲಿ ಸಮಾನತೆ ಅನ್ನುವುದು ಸರ್ವಸಮ್ಮತವಾದ ಮೌಲ್ಯವಾಗಿಲ್ಲ. ನಮ್ಮದು ಮೂಲತಃ ಅಸಮಾನತೆಯ, ತಾರತಮ್ಯದ ಸಮಾಜ. ಇದಲ್ಲದೆ ದಲಿತರು ಮತ್ತು ದಲಿತೇತರರ ನಡುವಿನ ಭಿನ್ನತೆಗೆ ಒಂದು ಕಾರಣ.

೩. ದಲಿತರಿಗೆ ಅಕ್ಷರ ಜ್ಞಾನವನ್ನು ನಿಷೇಧಿಸಿದ್ದ ಸಮಾಜ ನಮ್ಮದು. ವಿದ್ಯೆಯನ್ನು ವ್ಯವಸ್ಥಿತವಾಗಿ ಒಂದು ವರ್ಗ ಗುತ್ತಿಗೆ ಹಿಡಿದುಕೊಂಡಿತ್ತು. ದಲಿತರು ಅದರಿಂದ ವಂಚಿತರಾಗಿದ್ದರು.

೪. ಅಸ್ಪೃಶ್ಯತೆಯಂತಹ ಅಮಾನವೀಯ ಸಂಪ್ರದಾಯವು ದಲಿತರ ದುಸ್ಥಿತಿಯ ಮೂಲದಲ್ಲಿದೆ.

೫. ನಮ್ಮ ಸಮಾಜದಲ್ಲಿ ತೀವ್ರ ದುಸ್ಥಿತಿಯನ್ನು ಅನುಭವಿಸುತ್ತಿರುವವರು ದಲಿತ ಮಹಿಳೆಯರು. ಮೂರು ಬಗೆಯ ತಾರತಮ್ಯಗಳನ್ನು ಅನುಭವಿಸುತ್ತಿದ್ದಾರೆ.

ಮೊದಲನೆಯದು ಬಡವರು-ಭೂರಹಿತರು ಅನ್ನುವ ಕಾರಣಕ್ಕೆ ಬಡತನ ಎಂಬ ದುಸ್ಥಿತಿಯನ್ನು ಅನುಭವಿಸುತ್ತಿದ್ದಾರೆ. ಎರಡನೆಯದಾಗಿ ದಲಿತರು ಅನ್ನುವ ಕಾರಣಕ್ಕೆ ಅನೇಕ ತಾರತಮ್ಯಗಳನ್ನು ಎದುರಿಸುತ್ತಿದ್ದಾರೆ. ಮೂರನೆಯದಾಗಿ ಮಹಿಳೆ ಅನ್ನುವ ಕಾರಣಕ್ಕೆ ಲಿಂಗ ತಾರತಮ್ಯವನ್ನು ದಲಿತ ಮಹಿಳೆ ಅನುಭವಿಸುತ್ತಿದ್ದಾರೆ.

೬. ಭೂಮಿ, ಅಕ್ಷರ, ಬಂಡವಾಳ, ಅಧಿಕಾರ ಹೀಗೆ ಅಭಿವೃದ್ಧಿ ಮೂಲದಲ್ಲಿರುವ ಸಂಗತಿಗಳೆಲ್ಲವೂ ಉಳ್ಳವರ, ದಲಿತೇತರರ ವಶದಲ್ಲಿರುವುದರಿಂದ ದಲಿತರ ಅಭಿವೃದ್ಧಿ ಸಾಧನೆ ಕೆಳಮಟ್ಟದಲ್ಲಿದೆ.

೭. ಮಾನಸಿಕವಾಗಿ ಸಮಾಜವು ಅಸ್ಪೃಶ್ಯತೆಯನ್ನು ಇನ್ನೂ ಆಚರಿಸುತ್ತಿದೆ. ಶಾಸನಾತ್ಮಕವಾಗಿ ಅಸ್ಪೃಶ್ಯತೆಯನ್ನು ನಿಷೇಧಿಸಲಾಗಿದೆ. ಆದರೆ ಸಮಾಜವು ಅದನ್ನು ಪ್ರಜ್ಞಾಪೂರ್ವಕವಾಗಿ ತಿರಸ್ಕರಿಸಿಲ್ಲ. ಇಲ್ಲಿದೆ ಸಮಸ್ಯೆಯ ಮೂಲ.

೮. ಆಧುನಿಕ ಅಗತ್ಯಗಳಾದ ಬ್ಯಾಂಕು ಸಾಲ ಸೌಲಭ್ಯ, ಉದ್ಯೋಗ, ತಂತ್ರಜ್ಞಾನ ಮುಂತಾದವುಗಳಿಂದ ದಲಿತರು ವಂಚಿತರಾಗಿದ್ದಾರೆ ದಲಿತೇತರರು ಅವುಗಳ ಮೇಲೆ ಸಂಪೂರ್ಣ ಹಿಡಿತವನ್ನು ಸಾಧಿಸಿಕೊಂಡಿದ್ದಾರೆ.

೯. ಒಂದು ವೇಳೆ ಅಸ್ಪೃಶ್ಯತೆ, ಪ್ರತ್ಯೇಕೀಕರಣ, ತಾರತಮ್ಯಗಳು, ಜಾತೀಯತೆ ಇಲ್ಲದಿದ್ದದ್ದರೆ ದಲಿತರು ಮತ್ತು ದಲಿತೇತರರ ನಡುವೆ ಅಂತರ, ಅಸಮಾನತೆ ಇರಲು ಸಾಧ್ಯವಿರಲಿಲ್ಲ. ಇದು ಬಡವರು ಮತ್ತು ಬಡವರಲ್ಲದವರ ನಡುವಿನ ಅಸಮಾನತೆಯಲ್ಲ. ಇದು ಮೂಲತಃ ಸಾಮಾಜಿಕ ಅಸಮಾನತೆ. ಇದು ಸಾವಿರಾರು ವರ್ಷಗಳಿಂದ ಮುಂದುವರಿದುಕೊಂಡು ಬರುತ್ತಿರುವ ಅಸಮಾನತೆಯಾಗಿದೆ.

ಐದನೆಯ ಅಧ್ಯಾಯದಲ್ಲಿ ನಾಲ್ಕನೇ ಉದ್ದೇಶಕ್ಕನುಗುಣವಾಗಿ ದಲಿತ ಮಾನವ ಅಭಿವೃದ್ಧಿ ಸೂಚಿ ಮತ್ತು ಅದರ ಫಲಿತಗಳನ್ನು ಹೇಳಲಾಗಿದೆ. ಇಲ್ಲಿ ಮಾನವ ಅಭಿವೃದ್ಧಿ ಮತ್ತು ದಲಿತ

ಮಾನವ ಅಭಿವೃದ್ಧಿ, ದಲಿತ ಮಾನವ ಅಭಿವೃದ್ಧಿ ಸೂಚಿ, ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳ ಒಂದು ಸ್ಥೂಲ ಪರಿಚಯ, ಚಿತ್ರದುರ್ಗ ಜಿಲ್ಲೆಯ ದಲಿತರ ಸ್ಥಾನಮಾನ, ದಾವಣಗೆರೆ ಜಿಲ್ಲೆಯ ದಲಿತರ ಆರ್ಥಿಕ ಸ್ಥಾನಮಾನ ಚಿತ್ರದುರ್ಗ ಜಿಲ್ಲೆಯ ಸಂಯುಕ್ತ ದಲಿತ ಅಭಿವೃದ್ಧಿ ಸೂಚ್ಯಂಕ (ಸಿಡಿಡಿಐ), ದಾವಣಗೆರೆ ಜಿಲ್ಲೆಯ ಸಂಯುಕ್ತ ದಲಿತ ಅಭಿವೃದ್ಧಿ ಸೂಚ್ಯಂಕ(ಸಿಡಿಡಿಐ), ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆಗಳ ಸಿ.ಡಿ.ಡಿ.ಐ. ತುಲನಾತ್ಮಕ ಅಧ್ಯಯನಗಳನ್ನ ನಡೆಸಲಾಗಿದೆ. ಜಿಲ್ಲಾ ಸಂಯುಕ್ತ ದಲಿತ ಮಾನವ ಅಭಿವೃದ್ಧಿ ಸೂಚಿ(ಸಿ.ಡಿ.ಡಿ.ಐ)ಯನ್ನು ಸಮಗ್ರವಾಗಿ ಚರ್ಚಿಸಲಾಗಿದೆ. ಇಲ್ಲಿ ಪ್ರತಿ ಸೂಚಿಗಳನ್ನು ೧.೦೦ರಿಂದ ೦.೪ಕ್ಕಿಂದ ಕಡಿಮೆ ಇರುವ ಶ್ರೇಣಿಗಳನ್ನು ಗುರುತಿಸಿ ವಿವಿಧ ಶ್ರೇಣಿ(೪ ಭಾಗ)ಗಳನ್ನು ರಾಜ್ಯಮಟ್ಟಕ್ಕೆ ೧೦೦%ನಲ್ಲಿ ಲೆಕ್ಕ ಹಾಕಲಾಗಿದೆ ಮತ್ತು ಸರಳ ಸ್ತಂಭ ರೇಖಾಚಿತ್ರ ಮೂಲಕ ವಿಶ್ಲೇಷಿಸಲಾಗಿದೆ; ಕೊನೆಯಲ್ಲಿ ದಲಿತರ ಅಭಿವೃದ್ಧಿ ಹಕ್ಕಿನ ಪ್ರಶ್ನೆಗಳನ್ನು ಚರ್ಚಿಸಲಾಗಿದೆ.

## ಭಾಗ ೨

### ೬.೩ ಅಧ್ಯಯನದ ಪ್ರಧಾನ ಫಲಿತಗಳು

ದಲಿತರ ತೀವ್ರ ದುಸ್ಥಿತಿ ಸಂಬಂಧಿಸಿದಂತೆ ಅಧ್ಯಯನದಲ್ಲಿ ಕಂಡುಕೊಂಡಿರುವ ಪ್ರಧಾನ ಫಲಿತವೆಂದರೆ ಸಮಾಜದಲ್ಲಿ ದಲಿತರ ಬಗ್ಗೆ ಇರುವ ಪೂರ್ವಗ್ರಹಪಿಡಿತ ಮನೋಭಾವ ಮತ್ತು ಜಾತಿ ತಾರತಮ್ಯದ ಫಲವಾಗಿದೆ. ಯಾವುದೇ ಬಗೆಯ ಶಾಸನವಾಗಲಿ, ಕಾನೂನಾಗಲಿ, ನಿಯಮಗಳಾಗಲಿ ಸಮಾಜದಲ್ಲಿರುವ ದಲಿತರ ಬಗೆಗಿನ ಪೂರ್ವಗ್ರಹಪಿಡಿತ ಮನೋಭಾವ ಹೋಗದಿದ್ದರೆ ದಲಿತರ ಬದುಕು ಉತ್ತಮವಾಗುವುದು ಕಷ್ಟಸಾಧ್ಯ. ಇದು ಸದರಿ ಮಹಾಪ್ರಬಂಧದಲ್ಲಿ ಪ್ರತಿಪಾದಿಸುತ್ತಿರುವ ಒಂದು ವಾದಸರಣಿಯಾಗಿದೆ. ಅಸ್ಪೃಶ್ಯತೆಯನ್ನು ಸಂವಿಧಾನದಲ್ಲಿ ನಿಷೇದಿಸಲಾಗಿದೆ. ಆದರೆ ಇಂದಿಗೂ ಅದು ದಲಿತರ ಬದುಕನ್ನು ಮೂರಾಬಟ್ಟೆ ಮಾಡುತ್ತಿದೆ. ಆದರೆ ಅದರ ಸ್ವರೂಪ ಬದಲಾಗಿದೆ. ಇಂದು ನಾವು ಕಾಣುತ್ತಿರುವುದನ್ನು 'ಆಧುನಿಕ ಅಸ್ಪೃಶ್ಯತೆ' ಎಂದು ಕರೆಯಬಹುದು. ಇಲ್ಲದಿದ್ದರೆ ದಲಿತರು ಏಕೆ ವ್ಯಾಪಾರ, ವಾಣಿಜ್ಯ, ಹೋಟೆಲ್ ಉದ್ಯಮ, ಪತ್ರಿಕೋದ್ಯಮ ಮುಂತಾದ ಕ್ಷೇತ್ರಗಳಲ್ಲಿ ಏಕೆ ಇಲ್ಲ? ಸಂವಿಧಾನಾತ್ಮಕ ರಕ್ಷಣೆಗಳು, ಶಾಸನಾತ್ಮಕ ಭದ್ರತೆ ಒಂದು ಹಂತದವರೆಗೆ ಇರಬಹುದು. ಈ ಬಗೆಯ ಶಾಸನಗಳನ್ನು, ಕಾನೂನುಗಳನ್ನು, ನಿಯಮಗಳನ್ನು ಅನುಷ್ಠಾನಗೊಳಿಸುತ್ತಿರುವವರು ದಲಿತರ ಬಗ್ಗೆ ಪೂರ್ವಗ್ರಹ ಪೀಡಿತರಾಗಿದ್ದರೆ ದಲಿತರ ವಿಮೋಚನೆ ಹೇಗೆ ನಡೆದೀತು? ಈ ಅಧ್ಯಯನದ ಪ್ರಧಾನ ಫಲಿತಗಳನ್ನು ಇಲ್ಲಿ ನೀಡಲಾಗಿದೆ.

೧. ಅಭಿವೃದ್ಧಿಯನ್ನು ಮಾನವ ಧಾರಣಶಕ್ತಿ ಪರಿಪೇಕ್ಷ್ಯದಲ್ಲಿ ಪರಿಭಾವಿಸಿಕೊಂಡರೆ ಮಾತ್ರ ದಲಿತರ ವಿಮೋಚನೆ ಸಾಧ್ಯ. ಏಕೆಂದರೆ ಅಲ್ಲಿ ಜನರು ಮತ್ತು ಜನರ ಬದುಕು ಮುಖ್ಯವಾಗುತ್ತದೆ. ಆದರೆ ಆರ್ಥಿಕ ಅಭಿವೃದ್ಧಿ ಪ್ರಣಾಳಿಕೆಯಲ್ಲಿ ಜನರು ಅಮುಖ್ಯ.

೨. ಮಾನವ ಅಭಿವೃದ್ಧಿ ಪ್ರಣಾಳಿಕೆಯಲ್ಲಿ ಸಾಕ್ಷರತೆಯು ದಲಿತರ ದೃಷ್ಟಿಯಿಂದ ಅಭಿವೃದ್ಧಿ. ಆರೋಗ್ಯವು ಅಭಿವೃದ್ಧಿ, ಆಹಾರವು ಅಭಿವೃದ್ಧಿ, ಸಾಮಾಜಿಕ ನ್ಯಾಯ ಅಭಿವೃದ್ಧಿ.

೩. ಮಹಿಳಾ ಪರಿಪೇಕ್ಷ್ಯವಲ್ಲದ ಅಭಿವೃದ್ಧಿಯು ಅಭಿವೃದ್ಧಿಯೇ ಅಲ್ಲ. ನಮ್ಮ ಸಮಾಜದಲ್ಲಿ ಅತ್ಯಂತ ದುಸ್ಥಿತಿಯನ್ನು, ಶೋಷಣೆಯನ್ನು, ಅಸಮಾನತೆಯನ್ನು, ತಾರತಮ್ಯವನ್ನು ಎದುರಿಸುತ್ತಿರುವವರು ದಲಿತ ಸಮುದಾಯ. ಮಾನವ ಅಭಿವೃದ್ಧಿ ಪ್ರಣಾಳಿಕೆಯು ಸಮಾಜದ ಅಂಚಿನಲ್ಲಿರುವವರ, ವಂಚಿತರ ಪರವಾಗಿರುತ್ತದೆ. ದಲಿತರ ಅಭಿವೃದ್ಧಿಯ ದೃಷ್ಟಿಯಿಂದ ಮಾನವರ ಧಾರಣ ಶಕ್ತಿಯನ್ನು ಉತ್ತಮ ಪಡಿಸುವುದು ನಿರ್ಣಾಯಕವಾದುದಾಗಿದೆ.

೪. ಸಂವಿಧಾನಾತ್ಮಕ ಕ್ರಮಗಳು, ಶಾಸನಾತ್ಮಕ ಭದ್ರತೆಯು ದಲಿತರ ಅಭಿವೃದ್ಧಿಗೆ ಅಗತ್ಯ. ಆದರೆ ಅವು ಕೇವಲ ಸಾಧನಗಳು. ಅವು ಸಾಧ್ಯವಲ್ಲ. ವರಮಾನ, ಉತ್ಪಾದನೆ, ಬಂಡವಾಳ ಮುಂತಾದವು ಅಭಿವೃದ್ಧಿಯಲ್ಲಿ ಸಾಧನಾತ್ಮಕ ಪಾತ್ರ ಮಾತ್ರವಿದೆ. ಆದರೆ ಅಕ್ಷರ, ಆರೋಗ್ಯ, ಆಹಾರ, ಆಶ್ರಯ ಮುಂತಾದವುಗಳು ಸಾಧನವೂ ಹೌದು ಮತ್ತು ಸಾಧ್ಯವೂ ಹೌದು. ಸಂವಿಧಾನಾತ್ಮಕ ಕ್ರಮಗಳು, ದಲಿತರ ರಕ್ಷಣಾತ್ಮಕ ಕ್ರಮಗಳು ಕೇವಲ ಸಾಧನಗಳಾಗಿ ಕೆಲಸ ಮಾಡಬಹುದು. ಅವುಗಳಿಗೆ ಸಾಮಾಜಿಕ ಪರಿವರ್ತನೆಯ ಸಾಮರ್ಥ್ಯವಿಲ್ಲ.

೫. ದಲಿತರ ಅಭಿವೃದ್ಧಿಯು ಕೇವಲ ದಲಿತರ ಜವಾಬ್ದಾರಿ ಮಾತ್ರವಲ್ಲ. ಏಕೆಂದರೆ ಅಸ್ಪೃಶ್ಯತೆ ಅನ್ನುವುದು ದಲಿತೇತರರ ಸಮಸ್ಯೆ. ಅದರಿಂದ ಮುಕ್ತವಾಗಬೇಕಾಗಿರುವುದು ದಲಿತೇತರರ ಜವಾಬ್ದಾರಿ. ಏಕೆಂದರೆ ಅಸ್ಪೃಶ್ಯತೆಯಿಂದ ದಲಿತರ ಉತ್ಥಾನದ ಸಾಮರ್ಥ್ಯವು ಸಮಾಜದ ಅಭಿವೃದ್ಧಿಗೆ ದಕ್ಕುವುದಿಲ್ಲ. ಇದರಿಂದ ಹಾನಿ ಸಮಾಜಕ್ಕೆ ವಿನಃ ದಲಿತರಿಗಲ್ಲ.

೬. ಸಂವಿಧಾನಾತ್ಮಕ ಕ್ರಮಗಳು, ಶಾಸನಗಳು, ಮೀಸಲಾತಿ ಕ್ರಮಗಳು, ಬ್ಯಾಂಕು ಸಾಲ, ಉದ್ಯೋಗಗಳು ಮುಂತಾದವು ದಲಿತರ ಭೌತಿಕ ಮಟ್ಟವನ್ನು ಉತ್ತಮಪಡಿಸಬಹುದು. ಅಭಿವೃದ್ಧಿ ಅನ್ನುವುದು ಕೇವಲ ಭೌತಿಕ ಸಂಗತಿಯಲ್ಲ. ಅಭಿವೃದ್ಧಿಯು ದಲಿತರಿಗೆ ಗೌರವದ, ಘನತೆಯ ಬದುಕನ್ನು ಸಾಗಿಸುವುದು ಸಾಧ್ಯವಾಗುವಂತೆ ಮಾಡಬೇಕು. ಇಲ್ಲೇ ಸಮಾಜದಲ್ಲಿ ಮೂಲಭೂತ ಪರಿವರ್ತನೆ ನಡೆಯಬೇಕು.

೭. ನಮ್ಮದು ಮೂಲಭೂತವಾಗಿ ಅಸಮಾನತೆಯ, ತಾರತಮ್ಯದ ಅಸ್ಪೃಶ್ಯತೆಯನ್ನು ಆಚರಿಸುವ ಸಮಾಜ. ಇಲ್ಲಿ ಸ್ಪೃಶ್ಯ–ಅಸ್ಪೃಶ್ಯ ಎಂಬ ಶ್ರೇಷ್ಠ–ಕನಿಷ್ಠ, ಮಡಿ–ಮೈಲಿಗೆ, ಪವಿತ್ರ–ಅಪವಿತ್ರ ಮುಂತಾದ ತಾರತಮ್ಯಗಳು ಆಳವಾಗಿ ಬೇರುಬಿಟ್ಟಿವೆ. ಸಮಾಜದಲ್ಲಿ ಶಿಷ್ಟ–ಕನಿಷ್ಠ ಅನ್ನುವ ಅಸಮಾನತೆಗಳಿವೆ. ದಲಿತರನ್ನು ಪರಿಶಿಷ್ಟರೆಂದು ಪರಿಗಣಿಸಲಾಗಿದೆ. ಇದು ಅಸಮಾನತೆಯ ಪರಮ ಸೂಚಿ. ಸಮಾಜದ ಭಾಗವಾಗಿದ್ದರೂ ದಲಿತರನ್ನು ಸಮಾಜದಿಂದ ಅನ್ಯರನ್ನಾಗಿ ನೋಡಲಾಗುತ್ತಿದೆ. ಇದು ಅಭಿವೃದ್ಧಿಯ ಪ್ರಶ್ನೆಯಲ್ಲ. ಇದು ಸಾಮಾಜಿಕ ಅಸಮಾನತೆಯ ಪ್ರಶ್ನೆ. ಈ ಕಾರಣದಿಂದಾಗಿಯೇ ಬಾಬಾ ಸಾಹೇಬ್ ಡಾ. ಬಿ.ಆರ್. ಅಂಬೇಡ್ಕರ್ ಅವರು ದಲಿತರ ವಿಮೋಚನೆಗೆ ಸಾಮಾಜಿಕ ಹಕ್ಕುಗಳನ್ನು, ಸಾಮಾಜಿಕ ಪ್ರಜಾಪ್ರಭುತ್ವವನ್ನು, ಸಾಮಾಜಿಕ ಪರಿವರ್ತನೆಯನ್ನು ಒತ್ತಾಯಿಸುತ್ತಿದ್ದರು.

೮. ಈ ಅಧ್ಯಯನದಲ್ಲಿ ದಲಿತರ ಅಭಿವೃದ್ಧಿಯ ಪ್ರಶ್ನೆಯನ್ನು ಹಕ್ಕಿನ ಪರಿಭಾಷೆಯಲ್ಲಿ ಪರಿಭಾವಿಸಿಕೊಳ್ಳಲಾಗಿದೆ. ಹಕ್ಕುಗಳಲ್ಲಿ ಎರಡು ವಿಧ. ಮೊದಲನೆಯದು ನೇತ್ಯಾತ್ಮಕ ಹಕ್ಕುಗಳು. ಎರಡನೆಯದು ಇತ್ಯಾತ್ಮಕ ಹಕ್ಕುಗಳು. ನೇತ್ಯಾತ್ಮಕ ಹಕ್ಕುಗಳ ಚಲಾವಣೆಯನ್ನು ಯಾರೂ ತಡೆಯಲು ಬರುವುದಿಲ್ಲ. ಅವುಗಳನ್ನು ಎಲ್ಲರೂ ಚಲಾಯಿಸಬಹುದು. ಆದರೆ ಇತ್ಯಾತ್ಮಕ ಹಕ್ಕುಗಳ ಚಲಾವಣೆಗೆ ಸಾಮರ್ಥ್ಯ ಬೇಕು. ಆಹಾರದ ಹಕ್ಕು ಇತ್ಯಾತ್ಮಕ ಹಕ್ಕು. ಆದರೆ ಆಹಾರವನ್ನು ದೊರೆಯುವಂತೆ ಮಾಡದಿದ್ದರೆ ಆಹಾರದ ಹಕ್ಕಿಗೆ ಯಾವುದೇ ಅರ್ಥವಿರುವುದಿಲ್ಲ. ಮತದಾನದ ಹಕ್ಕು ನೇತ್ಯಾತ್ಮಕ ಹಕ್ಕು. ಅದರ ಚಲಾವಣೆಗೆ ಸಾಮರ್ಥ್ಯ ಬೇಕಾಗಿಲ್ಲ. ಆರೋಗ್ಯದ ಹಕ್ಕು ಇತ್ಯಾತ್ಮಕ ಹಕ್ಕು. ದಲಿತರ ಅಭಿವೃದ್ಧಿಯ ದೃಷ್ಟಿಯಿಂದ, ಅವರ ವಿಮೋಚನೆ ದೃಷ್ಟಿಯಿಂದ ಆಹಾರದ ಹಕ್ಕು, ಶಿಕ್ಷಣದ ಹಕ್ಕು, ಆರೋಗ್ಯದ ಹಕ್ಕು ಮುಖ್ಯ.

೯. ಈ ಅಧ್ಯಯನದಲ್ಲಿ ಕಂಡುಕೊಂಡ ಬಹುಮುಖ್ಯ ಸಂಗತಿಯೆಂದರೆ ದಲಿತರಿಗೆ ಅಗತ್ಯವಾಗಿರುವುದು ಸಾಮಾಜಿಕ ಪರಿವರ್ತನೆ. ಆರ್ಥಿಕ ಅಥವಾ ರಾಜಕೀಯ ಪರಿವರ್ತನೆಗಳಿಂದ ದಲಿತರ ವಿಮೋಚನೆ ಸಾಧ್ಯವಿಲ್ಲ. ಬಾಬಾ ಸಾಹೇಬ್ ಬಿ.ಆರ್. ಅಂಬೇಡ್ಕರ್ ಅವರು ತಮ್ಮ ಬರಹಗಳಲ್ಲಿ ವಾದಿಸಿದಂತೆ ದಲಿತರ ವಿಮೋಚನೆಗೆ ಅಗತ್ಯವಾಗಿರುವುದು ಸಾಮಾಜಿಕ ಪ್ರಜಾಪ್ರಭುತ್ವ ರಾಜಕೀಯ ಪ್ರಜಾಪ್ರಭುತ್ವವು ನೇತ್ಯಾತ್ಮಕ ಹಕ್ಕುಗಳನ್ನು ನೀಡಬಹುದು. ಉದಾಹರಣೆಗೆ ಅಲ್ಲಿ ಮತದಾನದ ಹಕ್ಕು, ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕು, ಸಂವಿಧಾನಾತ್ಮಕ ಪರಿಹಾರದ ಹಕ್ಕು, ಅಭಿವ್ಯಕ್ತಿ ಸ್ವಾತಂತ್ರ್ಯ ಮುಂತಾದ ನೇತ್ಯಾತ್ಮಕ ಹಕ್ಕುಗಳನ್ನು ಅದು ನೀಡಬಹುದು. ಆದರೆ ದಲಿತರಿಗೆ ಅಗತ್ಯವಾಗಿರುವುದು ಅಕ್ಷರದ ಹಕ್ಕು, ಆರೋಗ್ಯದ ಹಕ್ಕು, ಆಹಾರದ ಹಕ್ಕು. ಇವೆಲ್ಲ ಇತ್ಯಾತ್ಮಕ ಹಕ್ಕುಗಳು. ಈ ಹಕ್ಕುಗಳ ಪ್ರಾಪ್ತಿ ಸಾಮಾಜಿಕ ಪ್ರಜಾಪ್ರಭುತ್ವದಲ್ಲಿ ಸಾಧ್ಯ. ಇಂದು ದಲಿತರ ವಿಮೋಚನೆಯಾಗದಿದ್ದರೆ, ದಲಿತರಿಗೆ ಶೋಷಣೆಯಿಂದ ಬಿಡುಗಡೆ ದೊರೆಯದಿದ್ದಿದ್ದರೆ, ಅವರಲ್ಲಿ ಪರಿವರ್ತನೆ ನಡೆಯದಿದ್ದಿದ್ದರೆ ಅದಕ್ಕೆ ಮುಖ್ಯ ಕಾರಣ ಸರ್ಕಾರ ಮತ್ತು ನಮ್ಮ ಸಮಾಜ. ದಲಿತರಿಗೆ ನೇತ್ಯಾತ್ಮಕ ಹಕ್ಕುಗಳನ್ನು ನೀಡಲು ಪ್ರಯತ್ನಸುತ್ತಿದೆಯೇ ವಿನಃ ಇತ್ಯಾತ್ಮಕ ಹಕ್ಕುಗಳನ್ನು ನೀಡುವುದಕ್ಕಲ್ಲ. ಇಲ್ಲಿದೆ ದಲಿತರ ವಿಮೋಚನೆಯ ಪ್ರಶ್ನೆ. ಶಾಸನಸಭೆಗಳಲ್ಲಿ ಮತ್ತು ಸಂಸತ್ತಿನಲ್ಲಿ ರಾಜಕೀಯ ಮೀಸಲಾತಿ ನೀಡಲಾಗಿದೆ. ಇದು ನೇತ್ಯಾತ್ಮಕ ಹಕ್ಕು. ರಾಜಕೀಯ ಪ್ರಕ್ರಿಯೆಯಲ್ಲಿ ವಿವೇಕಯುತವಾಗಿ ಭಾಗವಹಿಸಲು ದಲಿತರಿಗೆ ಅಗತ್ಯವಾಗಿರುವುದು ಸಾಮಾಜಿಕ ಪ್ರಜಾಪ್ರಭುತ್ವ ಇದು ಇಂದು ಕಂಡು ಬರುತ್ತಿಲ್ಲ. ರಾಜಕೀಯ ಪ್ರಕ್ರಿಯೆಯಲ್ಲಿ ದಲಿತರು ವಿವೇಕಯುತವಾಗಿ ಸಹಭಾಗಿಗಳಾಗುವುದು ಸಾಧ್ಯವಾಗುವುದಿಲ್ಲವೋ ಅಲ್ಲಿಯವರೆಗೆ ಅವರ ಅಭಿವೃದ್ಧಿ ಸಾಧ್ಯವಿಲ್ಲ.

೧೦. ರಾಜಕೀಯ ಸಹಭಾಗಿತ್ವವಿಲ್ಲದ ರಾಜಕೀಯ ಪ್ರಾತಿನಿಧ್ಯ ನಿಜವಾದ ಪ್ರಜಾಪ್ರಭುತ್ವವಲ್ಲ. ರಾಜಕೀಯ ಸಹಭಾಗಿತ್ವವು ಸಾಮಾಜಿಕ ಸಹಭಾಗಿತ್ವಕ್ಕೆ ಅವಕಾಶ ನೀಡುವುದಿಲ್ಲ. ದೇವಾಲಯ ಪ್ರವೇಶ, ದೇವಾಲಯಗಳಲ್ಲಿ ಪುರೋಹಿತಶಾಹಿ ಅಂತಹ ಉದ್ಯೋಗ, ಸಾಮಾನ್ಯ ಜನರ ಸ್ಮಶಾನವನ್ನು

